# ರಾಜಾ
# ಭರ್ತೃಹರಿಯ ಶತಕಗಳು

(ತಾತ್ಪರ್ಯ ಸಹಿತ)

:::

ಎಂ. ಜೀಧ

:::

ಭಾರತ ಬುಕ್ ಡಿಪೋ ಕೊಪ್ಪಿಕರ ರೋಡ
ಹುಬ್ಬಳ್ಳಿ.

೧೯೬೦]                [ಬೆಲೆ : ೩—೦—೦

ಮುದ್ರಕರು ಮತ್ತು ಮುದ್ರಣ ಸ್ಥಳ :

ಶ್ರೀ ಪಿ. ಕೆ. ಅಥಣಿಯವರಿಂದ

ಶ್ರೀ ಸಿದ್ಧೇಶ್ವರ ಪ್ರಿಂಟಿಂಗ ಪ್ರೆಸ್, ಮಂಗಳವಾರ ಪೇಟ, ಹುಬ್ಬಳ್ಳಿ.

ಮುಖ ಚಿತ್ರ ರಚನೆ :

ಮೂರ್ತಿ (ಧಾರವಾಡ)

*



ಮೊದಲ ಮುದ್ರಣ ಮೇ. ೧೯೬೦.

*



ಬೆಲೆ : ೩—೦—೦

ಪ್ರಕಾಶಕರು ಹಾಗೂ ಪ್ರಕಾಶನ ಸ್ಥಳ

ಶ್ರೀ. ಎಸ್. ಎಸ್. ಚಿಕ್ಕಮಠ, ಭಾರತ ಬುಕ್ ಡಿಪೋ

ಕೊಪ್ಪೀಕರ ರೋಡ, ಹುಬ್ಬಳ್ಳಿ.

# ಅನುಕ್ರಮಣಿಕೆ

## ೧. ಶೃಂಗಾರ ಶತಕ


ಸ್ತ್ರೀ ಪ್ರಶಂಸೆ .... .... .... .... .... .... .... ೧೧

ಭೋಗಾದಿ ಲಕ್ಷಣ .... .... .... .... .... .... ೨೫

ವಸಂತ ಋತು ವರ್ಣನೆ .... .... .... .... .... ೩೩

ಗ್ರೀಷ್ಮ ಋತು ವರ್ಣನೆ .... .... .... ... .... ೩೮

ವರ್ಷಾಋತು ವರ್ಣನೆ .... .... .... .... .... ೪೧

ಶರದ್ ವರ್ಣನೆ .... .... .... .... .... .... ೪೭

ಹೇಮಂತ ಮಹಿಮೆ .... .... .... .... .... .... ೪೮

ಶಿಶಿರ ಮಹಿಮೆ .... .... .... .... .... .... .... ೪೯

ವಿಷಯ ಪ್ರಶಂಸೆ .... .... .... .... .... .... ೫೧

ದುರ್ವಿರಕ್ತ ವರ್ಣನೆ .... .... .... .... .... .... ೫೪

ಸ್ತ್ರೀ ಪರಿತ್ಯಾಗ ಪ್ರಶಂಸೆ .... .... .... .... .... ೬೫

ಯೌವನ:ಪ್ರಶಂಸೆ .... .... .... .... .... .... ೬೮

ಕಾಮಿನಿ ಗರ್ಹಣ ಪ್ರಶಂಸೆ .... .... .... .... .... ೭೨

ಸುವಿರಕ್ತ ಪ್ರಶಂಸೆ .... .... .... .... .... .... ೯೮

ಪರಿಶಿಷ್ಟ ಶ್ಲೋಕಗಳು .... .... .... .... .... ೧೦೬


## ೨. ನೀತಿ ಶತಕ


ಅಜ್ಞನಿಂದೆ .... .... .... .... .... .... .... ೧೧೧

ವಿದ್ವತ್ ಪ್ರಶಂಸೆ .... .... .... .... .... .... ೧೧೭

ಮಾನ ಶೌರ್ಯ ಪ್ರಶಂಸೆ .... .... .... .... .... ೧೨೫

ದ್ರವ್ಯ ಪ್ರಶಂಸೆ .... .... .... .... .... .... .... ೧೨೯

ದುರ್ಜನನಿಂದೆ .... .... .... .... .... .... .... ೧೩೬

ಸಜ್ಜನ ಪ್ರಶಂಸೆ .... .... .... .... .... .... .... ೧೪೧

ಪರೋಪಕಾರ ಪದ್ಧತಿ .... .... .... .... .... .... ೧೪೬

ಧೈರ್ಯ ಪ್ರಶಂಸೆ.... .... .... .... .... .... .... ೧೫೨
ದೈವ ಪ್ರಶಂಸೆ .... .... .... .... .... .... .... ೧೫೬
ಕರ್ಮ ಪ್ರಶಂಸೆ .... .... .... .... .... .... .... ೧೫೯
ಪ್ರತ್ಯಂತರ ಶ್ಲೋಕಗಳು .... .... .... .... .... ೧೬೪

೩. ವೈರಾಗ್ಯ ಶತಕ

ತೃಷ್ಣಾ ದೂಷಣೆ .... .... .... .... .... .... .... ೧೬೯
ತೃಷ್ಣಾಧಿಕಾರ .... .... .... .... .... .... .... ೧೭೭
ವಿಷಯಾಧಿಕಾರ .... .... .... .... .... .... .... ೧೭೫
ರೂಪ ತಿರಸ್ಕಾರ .... .... .... .... .... .... .... ೧೮೦
ನಿಸ್ಪೃಹಾಣಾಮಧಿಕಾರ .... .... .... .... .... ೧೮೩
ದುರ್ಭಗ ಸೇವಕ ವಾಕ್ಯ .... .... .... .... .... ೧೮೬
ಅಹಂಕಾರ ಪುರುಷರ ಕಥನ .... .... .... .... .... ೧೮೮
ನಿರ್ಮಮತಾ ಸ್ವರೂಪ .... .... .... .... .... .... ೧೯೦
ಭೋಗ ಪದ್ಧತಿ .... .... .... .... .... .... .... ೧೯೨
ನಿರ್ವೇದತಾ ಸ್ವರೂಪ .... .... .... .... .... .... ೨೦೧
ವಿವಿಧ ವಿಷಯದ ಶ್ಲೋಕಗಳು .... .... .... .... ೨೫೩

೪. ಭರ್ತೃಹರಿಯ ಚರಿತ್ರೆ .... .... .... .... .... .... ೨೬೩



# ನಾಡಿಗರಲ್ಲಿ ನಿವೇದನೆ

ನಮ್ಮ ಆರನೆಯ ಪ್ರಕಟಣೆ "ರಾಜಾ ಭರ್ತೃಹರಿಯ ಶತಕಗಳು" ಇದೀಗ ನಿಮ್ಮೆಲ್ಲರ ಕೈ ಸೇರುತ್ತಲಿದೆ. ಭರ್ತೃಹರಿಯ ಶೃಂಗಾರ, ನೀತಿ ಮತ್ತು ವೈರಾಗ್ಯ ಶತಕಗಳು ಕನ್ನಡದಲ್ಲಿ ಅಲಭ್ಯವಿದ್ದುದರಿಂದ ಇದನ್ನು ಹೊರ ತರಬೇಕಾಯಿತು, ತಂದಿದ್ದೇವೆ. ಆದರೆ ಇದು ಹೇಗಿದೆಯೆಂಬುದನ್ನು ನಿರ್ಧರಿಸುವ ಭಾರ ನಾಡಿನ ಓದುಗರದು. ನಿಮ್ಮದು.

ಪ್ರಸ್ತುತ ಶತಕಗಳ ಜೊತೆಗೆ ಭರ್ತೃಹರಿಯ ಚರಿತ್ರೆಯನ್ನೂ ಕೊಟ್ಟರೆ ಒಳ್ಳೆಯದಾಗುತ್ತದೆಂದು ಹೇಳಿದಾಗ, ಲೇಖಕರು "ಇಂದು ನಮ್ಮಲ್ಲಿ-ಬಹುಶಃ ಭಾರತದಲ್ಲಿ—ಭರ್ತೃಹರಿಯ ಪ್ರಾಮಾಣಿಕವಾದ ಚರಿತ್ರೆಯೇ ಇಲ್ಲ. ಎಷ್ಟೇ ತೊಂದರೆಯಾದರೂ ಪರವಿಲ್ಲ. ನಾನು ಆ ಮಹಾ ಪುರುಷನ ನೈಜ ಚರಿತ್ರೆಯನ್ನು ಬರೆಯುವ ಪ್ರಯತ್ನ ಮಾಡುತ್ತೇನೆ." ಎಂದು ಹೇಳಿ ಅದೇ ರೀತಿಯಾಗಿ ಬರೆದೂ ಇದ್ದಾರೆ. ಆ ಚರಿತ್ರೆಯನ್ನು ಓದಿದಾಗ "ಈ ವರೆಗೆ ಇಂಥ ಉದಾತ್ತಧ್ಯೇಯದ ಚರಿತ್ರೆ ಬಂದಿರಲಿಲ್ಲ"ವೆಂದು ನಮ್ಮಂತೆ ನೀವೂ ಒಪ್ಪಿಕೊಳ್ಳುವಿರೆಂಬ ಭರವಸೆ ನಮಗಿದೆ.

ನಮ್ಮ ಮುಂದಿನ ಪ್ರಕಟಣೆಯು ಕೂಡ ಕನ್ನಡದಲ್ಲಿ ಈ ವರೆಗೆ ಇರಲಾರದಂಥ ಒಂದು ಬೃಹದ್ ಗ್ರಂಥವೇ ಆಗಿರುವದೆಂದಿಷ್ಟೇ ಹೇಳುತ್ತೇವೆ. ಆ ಪುಸ್ತಕದ ಹೆಸರು ಹಾಗು ವಿಷಯಗಳ ಬಗ್ಗೆ ಕೇವಲ ಎರಡೇ—ಎರಡು ತಿಂಗಳುಗಳವರೆಗೆ ಕಾಯ್ದರೆ ಸಾಕು. ಓದುಗರ ಅನುಗ್ರಹದಿಂದ ಹೊರಬರುವದು.

ಕೊನೆಯದಾಗಿ, ಈ ಪುಸ್ತಕ ಹೊರಬರುವಲ್ಲಿ ಸಾಹಾಯಕರಾದ ಶ್ರೀ. ಸಿದ್ಧೇಶ್ವರ ಮುದ್ರಣಾಲಯದ ಸಂಚಾಲಕರಿಗೂ, ಬರೆದು ಕೊಟ್ಟ ಲೇಖಕರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ನಮ್ಮ ಇನ್ನುಳಿದ ಪ್ರಕಟಣೆಗಳಿಗೆ ಪ್ರೋತ್ಸಾಹನೆಯನ್ನಿತ್ತ ನಾಡಿನ ಓದುಗ ಬಳಗವು ಪ್ರಸ್ತುತ ಪುಸ್ತಕವನ್ನೂ ಆದರಿಂದ ಸ್ವಾಗತಿಸುವಿರೆಂದು ನಂಬಿರುವೆವು.

೧—೫—೬೦ ತಮ್ಮ

ಹುಬ್ಬಳ್ಳಿ. ಪ್ರಕಾಶಕರು

# ನನ್ನ ಮಾತು

ನಾನು ವಿದ್ಯಾರ್ಥಿ ಜೀವನದಲ್ಲಿ ಮೆಚ್ಚಿದಂಥ ಅನೇಕ ಪ್ರಾಚೀನ ಗ್ರಂಥಗಳಲ್ಲಿ ಭರ್ತೃಹರಿಯ ಶತಕಗಳೂ ಒಂದಾಗಿದೆ. ಆಗ, ಮುಂದೊಂದು ದಿನ ನಾನೇ ಇವುಗಳನ್ನು ಕನ್ನಡಕ್ಕೆ ಪರಿವರ್ತಿಸಬಹುದೆಂಬ ಕಲ್ಪನೆಯೂ ಇರಲಿಲ್ಲ. ಆದರೂ ಹೇಗೋ, ನನ್ನಿಂದ ಕೆಲವು ಪುಸ್ತಕಗಳು ರಚಿತವಾದವು. ಇದೀಗ ಭರ್ತೃಹರಿಯ ಶತಕಗಳೂ ಬಂದಿವೆ. ನಿಜಕ್ಕೂ ನನಗಿದು ಹೆಮ್ಮೆಯ ವಿಷಯವಾಗಿದೆ.

ಇನ್ನು ಈ ಕೃತಿಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳದಿದ್ದರೆ ನನ್ನ ಹೃದಯವು ಹಗುರಾಗಲಿಕ್ಕಿಲ್ಲ. ಪ್ರಸ್ತುತ ಪುಸ್ತಕದ ಪ್ರಕಾಶಕರು ಶತಕಗಳ ಜೊತೆಗೆ ಭರ್ತೃಹರಿಯ ಚರಿತ್ರೆಯನ್ನೂ ಬರೆಯಿರಿ ಎಂದಾಗ ಇಂದು ಎಲ್ಲೆಡೆಗೂ ಲಭ್ಯವಿರುವ ಭರ್ತೃಹರಿಯ ಚರಿತ್ರೆ ಹಾಗು ನಾಟಕ ಪುಸ್ತಕಗಳು ನನ್ನೆದುರು ಸುಳಿದು ಹೋದವು. ಅವುಗಳ ಬಗ್ಗೆ ನನ್ನ ಅಭಿಪ್ರಾಯವು ಇಲ್ಲಿ ಅಪ್ರಸ್ತುತ. ಏಕೆಂದರೆ ನಾನು ಅದನ್ನು ಮುಂದೆ ವಿವರಿಸಿಯೇ ಇದ್ದೇನೆ.

ಭರ್ತೃಹರಿಯ ಪ್ರಾಮಾಣಿಕ ಚರಿತ್ರೆಯನ್ನು ಚಿತ್ರಿಸಬೇಕೆಂಬ ಹಂಬಲದಿಂದ ನಾನು ಬಹಳಷ್ಟು ಕಡೆಗೆ ತಿರುಗಾಡಬೇಕಾಯಿತು. ಆದರೆ ದೊರೆತ ಪ್ರತಿಫಲ ಮಾತ್ರ ಶೂನ್ಯ. ಒಬ್ಬರು ನಾಳೆ ಕೊಡುತ್ತೇನೆ, ನಾಡಿದು ಕೊಡುತ್ತೇನೆ, ಎಂದು ಹೇಳಿ ಕೊನೆಗೆ 'ಕೈ' ಕೊಟ್ಟು ಬಿಟ್ಟರು. ಧಾರವಾಡದ ಕರ್ನಾಟಕ ಗ್ರಂಥಾಲಯದವರ ಬಗೆಗಂತೂ ಎಷ್ಟು ಬಗೆದರೂ ಕಡಿಮೆಯೇ ಎನ್ನಬೇಕು. ಏಕೆಂದರೆ ಮಾರ್ಚ ತಿಂಗಳ ಮೊದಲ ವಾರದಲ್ಲಿ ಅವರಲ್ಲಿಗೆ ಹೋಗಿ "ಆಧಾರಕ್ಕಾಗಿ ಭರ್ತೃಹರಿಯ ಬಗ್ಗೆ ಬರೆದ ಪುಸ್ತಕಗಳು ಬೇಕಾಗಿವೆ ತೋರಿಸುತ್ತೀರಾ ?" ಎಂದು ಕೇಳಿದಾಗ ಅಲ್ಲಿಯ ಕಾರ್ಯನಿರ್ವಾಹಕರು, ಗಡುಸಾಗಿ "ಇಲ್ಲ"ವೆಂದು ಉತ್ತರಿಸಿ "ಬೇಗ ಇಲ್ಲಿಂದ ಕೆಳಗಿಳಿದು

ಹೋಗು" ಎಂಬರ್ಥದಲ್ಲಿ ನನ್ನೆದುರು ನಿಂತುಕೊಂಡರು. ಹೀಗಿದೆ ನಮ್ಮಲ್ಲಿ ಯುವರ ಸಹಕಾರ.

ಈ ಬಗೆಯ ಪುಸ್ತಕಗಳನ್ನು ಬರೆಯುವ ಕೆಲವರಿಗೆ ಯಾರು-ಯಾರೋ ಆಧಾರ ಗ್ರಂಥಗಳನ್ನು ಒದಗಿಸುತ್ತಾರಂತೆ. ಆದರೆ ನಾನು ಅವುಗಳು ಇರುವವರ ಬಳಿಗೆ ಹೋದರೂ ಸಿಕ್ಕದಿರುವದು ನನ್ನದೌರ್ಭಾಗ್ಯವೆಂದು ಒಪ್ಪಿಕೊಳ್ಳುತ್ತೇನೆ. ಹೀಗಾಗಿ ನಾನು ಇದನ್ನು ಬರೆಯುವಾಗ ಬಹಳಷ್ಟು ಶ್ರಮಿಸಬೇಕಾಯಿತು. ಆದರೂ ಬರವಣಿಗೆಯ ಸಮಯದಲ್ಲಿ ನಾನಾ ಬಗೆಯ ಸಹಾಯ ಸಹಕಾರಗಳನ್ನಿತ್ತ—ಸಧ್ಯ ಹುಬ್ಬಳ್ಳಿಯಲ್ಲಿರುವ—ಕೊಳ್ಳೆಗಾಲದ ಗೆಳೆಯರು ಎಂ. ಲಿಂಗಯ್ಯ ನವರಿಗೆ ಹಾಗು ಅದ್ವಿತೀಯ ನಾಟಕಕಾರರಾದ ಗೆಳೆಯ ಮಹಾಂತೇಶ ಶಾಸ್ತ್ರಿಗಳಿಗೆ ಅತ್ಯಂತಋಣಿಯಾಗಿದ್ದೇನೆ. ಅಂದವಾಗಿ ಮುದ್ರಿಸಿದ ಶ್ರೀ ಸಿದ್ಧೇಶ್ವರ ಮುದ್ರಣಾಲಯದ ಸಂಚಾಲಕ ವರ್ಗಕ್ಕೂ ನನ್ನ ನೆನಕೆಗಳು ಸಲ್ಲಬೇಕು. ಕೊನೆಯದಾಗಿ ಪ್ರಕಾಶಕರಿಗೂ ನೆನಕೆಗಳನ್ನು ಸಲ್ಲಿಸದಿದ್ದರೆ ಅಪಚಾರವಾದೀತು, ಎಂದು —

೧—೫—೬೦
ಉಣಕಲ್ಲ (ಹುಬ್ಬಳ್ಳಿ)

ವಂದನೆಗಳೊಂದಿಗೆ
**ಎಂ. ಜೀವನ**

ಭರ್ತೃಹರಿಯ— ——

# ಶೃಂಗಾರ ಶತಕ

## ಮಂಗಲಾಚರಣ

ಶಂಭು ಸ್ವಯಂಭು ಹರಯೋ ಹರಿಣೇಕ್ಷಣಾನಾಂ
ಏನಾಕ್ರಿಯಂತ ಸತತಂ ಗೃಹಕರ್ಮದಾಸಾಃ ।
ವಾಚಾಮಗೋಚರ ಚರಿತ್ರ ವಿಚಿತ್ರಿತಾಯ
ತಸ್ಮೈ ನಮೋ ಭಗವತೇ ಕುಸುಮಾಯುಧಾಯ ॥೧॥

ಬ್ರಹ್ಮ-ವಿಷ್ಣು-ಮಹೇಶ್ವರರಂಥವರನ್ನು ಕೂಡ ಮೃಗನಯನೆಯರಾದ ಕಾಮಿನಿಯರ-ಸರಸ್ವತಿ, ಲಕ್ಷ್ಮಿ ಹಾಗೂ ಪಾರ್ವತಿಯರ–ಮನೆಯ ಗೃಹ ಕಾರ್ಯವನ್ನು ಮಾಡುವಂಥ ದಾಸರನ್ನಾಗಿ ಮಾಡಿದ ಹಾಗು ವರ್ಣಿಸಲು ಬಾರದಂಥ ವಿಚಿತ್ರ ಚರಿತ್ರೆಯುಳ್ಳ ಕುಸುಮಾಯುಧನಾದ ಆ ಭಗವಾನ್ ಕಾಮದೇವನಿಗೆ ನನ್ನ ನಮಸ್ಕಾರಗಳು.

# ಸ್ತ್ರೀ ಪ್ರಶಂಸೆ

ಸ್ಮಿತೇನ ಭಾವೇನ ಚಲಜ್ಜಯಾ ಭಿಯಾ
ಪರಾಙ್ಮುಖೈರರ್ಧ ಕಟಾಕ್ಷ ವೀಕ್ಷಣೈಃ |
ವಚೋಭಿರೀರ್ಷ್ಯಾ ಕಲಹೇನ ಲೀಲಯಾ
ಸಮಸ್ತ ಭಾವೈಃ ಖಲು ಬಂಧನಂ ಸ್ತ್ರೀಯಃ || ೨ ||

ಮಂದವಾದ ಮುಗುಳು ನಗೆ ಅರ್ಥಾತ್ ಸ್ಮಿತ ಹಾಸ್ಯ, ನಾಚಿಕೆ ಪಟ್ಟುಕೊಳ್ಳುವದು, ಮೇಲಿಂದ ಮೇಲೆ ಬೆಚ್ಚಿ ಬೀಳುವದು, ಮುಖವನ್ನು ಬೇರೆಡೆಗೆ ತಿರಗಿಸುವದು, ಓರೆ ನೋಟ ಬೀರುವದು, ಮಧುರ—ಮಧುರ ಮಾತನಾಡುವದು, ಈರ್ಷೆ ಮಾಡುವದು, ಕಲಹ ಮಾಡುವದು, ನಾನಾ ಬಗೆಯ ಹಾವ–ಭಾವಗಳನ್ನು ಪ್ರದರ್ಶಿಸುವದೇ ಮೊದಲಾದ ಒನಪು—ವಯ್ಯಾರಗಳು ಪುರುಷರನ್ನು ತಮ್ಮ ಅಂಕಿತದೊಳಗಿರಿಸಿಕೊಳ್ಳಲೋಸುಗವೇ ಸ್ತ್ರೀಯರೊಳಗೆ ಮನೆ ಮಾಡಿಕೊಂಡಿರುವವು. ಅಂದರೆ, ಸ್ತ್ರೀಯು ಪುರುಷನಿಗೆ ಎಂಥ ಪ್ರಸಂಗದಲ್ಲಿಯೂ ಪ್ರಿಯಳಾಗಿ ಕಾಣಿಸುವಳು. ಅವಳ ಪ್ರತಿಯೊಂದು ಮಾತು, ಆಚರಣೆಗಳು ಹಾಗು ನೋಟವು ಪ್ರತಿಯೊಬ್ಬ ಪುರುಷನನ್ನು ಸ್ತ್ರೀಯು ಅಂಕಿತದೊಳಗಿರಿಸುವವು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಭ್ರೂ ಚಾತುರ್ಯಾ ಕುಂಚಿತಾಕ್ಷಾಃ ಕಟಾಕ್ಷಾಃ
ಸ್ನಿಗ್ಧಾ ವಾಚೋ ಲಜ್ಜಿತಾಶ್ಚೈವ ಹಾಸಾಃ |
ಲೀಲಾಮಂದಂ ಚ ಸ್ಥಿತಂ ಪ್ರಸ್ಥಿತಂ ಚ
ಸ್ತ್ರೀಣಾಮೇತದ್ ಭೂಷಣಂ ಚಾಯುಧಂ ಚ || ೩ ||

ತನ್ನಲ್ಲಿಯ ಚತುರತನದಿಂದ ಬಾಹುಗಳನ್ನು ತಿರುಗಿಸುವದು, ಓರೆ ನೋಟ–ಕಟಾಕ್ಷ–ಬೀರುವದು, ಮಧುವಿನಂತಹ—ಜೇನುತುಪ್ಪದಂತಹ—ಮಧುರ ಮಾತುಗಳನ್ನಾಡುವದು, ನಾಚಿಕೆ ಪಟ್ಟುಕೊಳ್ಳುವದರ ಜೊತೆಗೆ ಮುಗುಳು ನಗುವದು, ಬೆಡಗಿನಿಂದ ಸಾವಕಾಶವಾಗಿ ಹೆಜ್ಜೆಗಳನ್ನಿರಿಸುತ್ತ

ನಡೆಯುವದು, ಹಾಗು ನಡೆಯುತ್ತಿರುವಂತೆ ಆಕಸ್ಮಿಕವಾಗಿ ನಿಂತುಬಿಡುವದೇ ಮೊದಲಾದವುಗಳೆಲ್ಲ ಸ್ತ್ರೀಯರಿಗೆ ಭೂಷಣವಾಗಿರುವದರ ಜೊತೆಗೆ ಪುರುಷ ರನ್ನು ಗಾಸಿಗೊಳಿಸಬಲ್ಲಂಥ ಬಲವಾದ ಶಸ್ತ್ರಗಳೂ ಆಗಿರುವವು. ಅಂದರೆ ಸ್ತ್ರೀಯರ ಹಾವ—ಭಾವಗಳು ಪುರುಷರನ್ನು ಗಾಸಿಗೊಳಿಸಬಲ್ಲ ಶಸ್ತ್ರಗಳಾಗಿ ರುವಂತೆ ಅವರ ಸೌಂದರ್ಯವನ್ನು, ಬಿನ್ನಾಣವನ್ನು ಹೆಚ್ಚಿಸುವಂಥ ಸಾಧನ ಗಳೂ ಆಗಿರುವವು.

ಕ್ವಚಿತ್ಸುಭ್ರೂ ಭಂಗೈಃ ಕ್ವಚಿದಪಿ ಚ ಲಜ್ಜಾ ಪರಿಣತೈಃ
ಕ್ವಚಿದ್ಭೀತಿತ್ರಸ್ತೈಃ ಕ್ವಚಿದಪಿ ಚ ಲೀಲಾವಿಲಸಿತೈಃ ।
ನವೋಢಾನಾ ಮೇತೈ ರ್ವದನ ಕಮಲೈರ್ನೇತ್ರಚಲಿತೈಃ
ಸ್ಫುರನ್ನೀಲಾಬ್ಜಾನಾಂ ಪ್ರಕರ ಪರಿಪೂರ್ಣಾ ಇವದಿಶಃ ॥ ೪ ॥

ನವ ತಾರುಣ್ಯವತಿಯಾದ ಸ್ತ್ರೀಯು ದೃಷ್ಟಿಯು ಕೆಲವೊಂದು ಸಲ ತನ್ನ ಸುಂದರ ಬಾಹುಗಳನ್ನು ಬಾಗಿಸುವದರಲ್ಲಿ, ನಾಚಿಕೆಯಿಂದಾಗಿ ತಲೆಯನ್ನು ಬಾಗಿಸುವದರಲ್ಲಿ, ಲೀಲಾಮಯ ವಿಲಾಸವನ್ನು ಪ್ರದರ್ಶಿಸುವಲ್ಲಿ, ಕಮಲ ದಂತಹ ಮುಖದಿಂದ, ನೇತ್ರಗಳ ಚಂಚಲತೆಯಿಂದ, ದೇದೀಪ್ಯಮಾನವಾದ ಕಮಲಗಳ ಸಮುದಾಯದಂತೆ ಕಾಮುಕ ಪುರುಷರಿಗೆ ಪರಿಪೂರ್ಣಳಾಗಿ ಕಾಣಿಸುವಳು. ಅರಳಿದ ಕಮಲಗಳ ಮೇಲೆ ಭ್ರಮರಗಳು ಹೇಗೆ ಶೋಭಾ ಯಮಾನವಾಗಿ ಕಾಣಿಸುವವೋ ಅರ್ಥಾತ್ ಕಮಲಗಳ ಶೋಭೆಯನ್ನು ಹೆಚ್ಚಿಸುವವೋ ಹಾಗೆ, ಸುಂದರ ಸ್ತ್ರೀಯರ ಚಂಚಲ ದೃಷ್ಟಿಯು ಅವರ ಸೌಂದರ್ಯಕ್ಕೊಂದು ಮೆರುಗನ್ನು ತಂದುಕೊಡುವದು. ಇದರ ತಾತ್ಪರ್ಯ ವಿಷ್ಟೇ: ಬ್ರಹ್ಮಜ್ಞಾನಿಗಳಿಗೆ ದೃಷ್ಟಿಹಾಯಿಸಿದತ್ತ ಎಲ್ಲವೂ ಬ್ರಹ್ಮಮಯವಾಗಿ ಹೇಗೆ ಕಾಣಿಸುವದೋ ಹಾಗೆ, ಕಾಮುಕರಾದ ಪುರುಷರಿಗೆ ಎಲ್ಲೆಡೆಗೂ ನವ ತಾರುಣ್ಯವತಿಯರ ನೀಲ ಕಮಲದಂತಹ ಚಂಚಲ ನೇತ್ರಗಳೇ ಕಾಣಿಸು ವವು. ಅಂದರೆ ಯಾರ ದೃಷ್ಟಿಯೊಳಗೆ ಏನು ತುಂಬಿಕೊಂಡಿರುವದೋ ಅದುವೇ ಅವರೆದುರು ನಿಂತುಕೊಳ್ಳುವದು.

ವಕ್ತ್ರಂ ಚಂದ್ರವಿಡಂಬಿ ಪಂಕಜ ಪರೀಹಾಸಕ್ಷಮೇ ಲೋಚನೇ
ವರ್ಣಃ ಸ್ವರ್ಣಮಪಾಕರಿಷ್ಣುರಲಿನೀಜಿಷ್ಣುಃ ಕಚಾನಾಂಚಯಃ ।
ವಕ್ಷೋಜಾವಿಭ ಕುಂಭ ಸಂಭ್ರಮಹರೌ ಗುರ್ವಿನಿತಂಬಸ್ಥಲೀ
ವಾಚೋಹಾರಿ ಚ ಮಾರ್ದವಂ ಯುವತಿಷು ಸ್ವಾಭಾವಿಕಂ
ಮಂಡನಂ ॥ ೩ ॥

ಚಂದ್ರ ಬಿಂಬದಂತೆ ಪ್ರಕಾಶಮಾನವಾಗಿರುವಂಥ ಮುಖಮಂಡಲ, ಕಮಲವನ್ನು ಪರಿಹಾಸಗೊಳಿಸುವಂಥ ನಯನದ್ವಯಗಳು, ಬಂಗಾರದ ಹೊಳಪನ್ನು ಸಪ್ಪಗಾಗಿಸುವಂಥ ಅರ್ಥಾತ್ ಬಂಗಾರದ ಮುಖದ ಮೇಲೆ ಹೊಡೆಯುವಂಥ, ಶರೀರ ಕಾಂತಿ, ಭ್ರಮರಗಳ ಸಮುದಾಯವನ್ನು ಗೆಲ್ಲ ಬಲ್ಲ ಕೇಶರಾಶಿ, ಗಜರಾಜನ ಗಂಡಸ್ಥಲದ ಶೋಭೆಯನ್ನು ಅಪಮಾನಗೊಳಿ ಸುವಂಥ ವಿಶಾಲವಾದ ಎರಡೂ ನಿತಂಬಗಳು, ಸುಮನೋಹರ ವಾಣಿ ಹಾಗು ಕೋಮಲತೆ—ಸೂಕ್ಷ್ಮತೆ—ಇವುಗಳೆಲ್ಲ ಸ್ತ್ರೀಯರ ತೀರ ಸ್ವಾಭಾವಿಕವಾದ ಭೂಷಣಗಳಾಗಿರುವವು. ಅಂದರೆ ಸ್ತ್ರೀಯರ ನಾನಾ ಬಗೆಯ ಅಸ್ತ್ರಗಳು ಅವರಿಗೆ ನಾನಾಪ್ರಕಾರದ ಶಸ್ತ್ರಗಳಂತಿರುವವು. ಇವುಗಳ ಬಲದಿಂದಲೇ ಅವರು ಪುರುಷರನ್ನು ಜಯಿಸಿ ಅವರನ್ನು ತಮ್ಮ ದಾಸಾನುದಾಸರನ್ನಾಗಿ ಮಾಡಿಕೊಳ್ಳುತ್ತಾರೆ.

ಸ್ಮಿತಂ ಕಿಂಚಿದ್ವಕ್ತ್ರೇ ಸರಲ ತರಲೋ ದೃಷ್ಟಿವಿಭವಃ
ಪರಿಸ್ಪಂದೋ ವಾಚಾಮಭಿನವ ವಿಲಾಸೋಕ್ತಿ ಸರಸಃ ।
ಗತಿನಾಮಾರಂಭಃ ಕಿಸಲಯಿತಲೀಲಾ ಪರಿಕರಃ
ಸ್ಪೃಶನ್ತ್ಯಾಸ್ತಾರುಣ್ಯಂ ಕಿಮಿಹ ನ ಹಿರಮ್ಯಂ ಮೃಗದೃಶಃ ॥ ೬ ॥

ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸುತ್ತಿರುವಂಥ ಸುಂದರಿಯರಾದ ಹರಿಣಾಕ್ಷಿಯರನ್ನು ಕಂಡು ಯಾವ ಕಾಮುಕ ಪುರುಷನು ಮನಸೋಲಲಾರನು ? ಎಂಥವರೂ ಮನಸೋತುಬಿಡುವರು. ಅವರ ಮಂದವಾದ ಮುಗುಳು ನಗೆ, ಸ್ವಾಭಾವಿಕ ಚಂಚಲ ನೋಟ, ಭೋಗ—ವಿಲಾಸದ ಬಗೆಗಿನ ನವೀನ ಮಾತುಗಳನ್ನಾಡುವದು, ಒಯ್ಯಾರದಿಂದ ಮೆಲ್ಲ—ಮೆಲ್ಲನೆ ನಡೆ

ಯುವದೇ ಮೊದಲಾದ ಸುಂದರಿಯರ ಹಾವ—ಭಾವಗಳು ಕಾಮುಕರನ್ನು ಶೀಘ್ರದಲ್ಲಿಯೇ ವಶ ಪಡಿಸುವವು. ಅಂದರೆ ಹೃದಯವನ್ನು ಛೇದಿಸಬಲ್ಲ ಯುವತಿಯರ ಓರೆ ನೋಟಕ್ಕೆ ಬಲಿಯಾಗದಂಥ ಪುರುಷರಿಗೆ ಈ ಭೂಮಿ ತಾಯಿ ಕ್ವಚಿತ್ತಾಗಿಯೇ ಜನ್ಮ ನೀಯುವಳು.

ದೃಷ್ಟವ್ಯೇಷು ಕಿ ಮುತ್ತಮಂ ಮೃಗ ದೃಶಾಂ ಪ್ರೇಮಪ್ರಸನ್ನಂ ಮುಖಂ
ಘ್ರಾತವ್ಯೇಷ್ವಪಿ ಕಿಂ ತದಾಸ್ಯ ಪವನಃ ಶ್ರಾವ್ಯೇಷು ಕಿಂ ತದ್ವಚಃ ।
ಕಿಂ ಸ್ವಾದ್ಯೇಷು ತದೋಷ್ಠ ಪಲ್ಲವರಸಃ ಸ್ಪೃಶ್ಯೇಷು ಕಿಂ ತತ್ತನು-
ರ್ಧ್ಯೇಯಂ ಕಿಂ ನವಯೌವನಂ ಸಹೃದಯೈಃ ಸರ್ವತ್ರ
ತದ್ವಿಭ್ರಮಃ ॥೭॥

ಸುಂದರಿಯರಲ್ಲಿ ಪುರುಷರು ನೋಡಲು ಯೋಗ್ಯವಾಗಿರುವಂಥದು ಏನೇನಿರುವದು ಗೊತ್ತೆ ? ಹರಿಣಾಕ್ಷಿಯರಾದ ಕಾಮಿನಿಯರ ಪ್ರೇಮಪೂರ್ಣವಾದ ಪ್ರಸನ್ನ ಮುಖ; ಆಘ್ರಾಣಿಸಲು ಯೋಗ್ಯವಾದುದು ಯಾವುದಿದೆ ? ಅವಳ ಮುಖ ಕಮಲದ ಅವ್ಯಕ್ತ ಪರಿಮಳ; ಕೇಳಲು ಯೋಗ್ಯವಾದಂಥದು ಯಾವುದಿದೆ ? ಅವಳ ಮಧುರ ಮಾತುಗಳು; ಅವಳಲ್ಲಿ ಅತಿ ರುಚಿಕರವಾದ ಸ್ವಾದಿಷ್ಟವಾದ—ಪದಾರ್ಥವು ಯಾವುದಿದೆ ? ಚಿಗುರೆಲೆಗಳಂತಿರುವ ತುಟಿಗಳ ರಸ; ಸ್ಪರ್ಶಿಸಲು ಯೋಗ್ಯವಾದುದು ಯಾವುದಿದೆ ? ಅವಳ ಸುಕೋಮಲವಾದ ಶರೀರ; ಯಾವಾಗಲೂ ಬಯಸುವಂಥದು—ಧ್ಯಾನಿಸುವಂಥದು ಸ್ತ್ರೀಯರಲ್ಲಿ ಏನಿದೆ ? ಅವರ ನವ ತಾರುಣ್ಯ ಮತ್ತು ವಿಲಾಸ; ಅಂದರೆ ಓರ್ವ ಸುರ ಸುಂದರಿಯಲ್ಲಿ ಪುರುಷರ ಸರ್ವೇಂದ್ರಿಯಗಳನ್ನೂ ತಣಿಸಬಲ್ಲ, ತೃಪ್ತಿಗೊಳಿಸಬಲ್ಲ, ಯೋಗ್ಯತೆ ಇರುತ್ತದೆ.

ಎತಾಃ ಸ್ಖಲದ್ವಲ ಸಂಹತಿ ಮೇಖಲೋತ್ಥ—
ಝಂಕಾರ ನೂಪುರ ಪರಾಜಿತ‡ ರಾಜಹಂಸ್ಯಃ ।

---

‡ ಬಾಬು ಹರಿದಾಸ ವೈದ್ಯರಿಂದ ಸಂಪಾದಿತ ಶತಕಗಳಲ್ಲಿ" ನೂಪುರ ರವಾಹೃತ" ಎಂದಿರುವದು, ಆದರೆ ಅಲ್ಲಿ 'ಪರಾಜಿತ'ವೇ ಯೋಗ್ಯವಾದುದಾಗಿದೆ.

ಕುರ್ವಂತಿ ಕಸ್ಯ ನಮನೋ ವಿವಶಂ ತರುಣ್ಯೋ
ವಿತ್ರಸ್ತ ಮುಗ್ಧ ಹರಿಣೀ ಸದೃಶೈಃ ಕಟಾಕ್ಷೈಃ ||೮||

ಗೆಜ್ಜೆಗಳಂತೆ ನಿನಾದ ಗೈಯುವ ಅವರ ಕೈಯೊಳಗಿನ ಕಂಕಣ-ಬಳೆ-ಗಳು ಮತ್ತು ಕಾಲೊಳಗಿನ ನೂಪುರಗಳ ಝೇಂಕಾರದಿಂದ ರಾಜಹಂಸಗಳ ನಡಿಗೆಯನ್ನೂ ಗೆದ್ದುಕೊಂಡಂಥ ಆ ನವಯುವತಿಯರು ಭಯಭೀತಿಗೊಂಡಿರುವ ಸಾಧು ಸ್ವಭಾವದ ಹರಿಣದಂತೆ ಕಟಾಕ್ಷವನ್ನು ಬೀರಿದಾಗ ಯಾವ ಗಂಡಸಿನ ಮನವು ಅವನ ಅಧೀನದೊಳಗೆ ಉಳಿಯುವದು ಸಾಧ್ಯವಿದೆ? ಉಳಿಯುವದೇ ಇಲ್ಲವೆಂದರ್ಥ. ಅಂದರೆ ವಾರಿಜಾಕ್ಷಿಯರ ಓರೆ ನೋಟದ ಹೊಡೆತಕ್ಕೆ ಸಿಲುಕದವರು ಕ್ವಚಿತ್ತಾಗಿ ಎಲ್ಲಿಯೋ ಒಬ್ಬಿಬ್ಬರು ಅರ್ಥಾತ್ ಕೋಟಿಗೊಬ್ಬರು ಸಿಕ್ಕರೂ ಸಿಗಬಹುದು-ಅಷ್ಟೆ.

ಕುಂಕುಮಪಂಕ ಕಲಂಕಿತ ದೇಹಾ ಗೌರ ಪಯೋಧರ ಕಂಪಿತಹಾರಾ|
ನೂಪುರ ಹಂಸ ರಣತ್ಪದ ಪದ್ಮಾ ಕಂ ನ ವಶೀ ಕುರುತೇ ಭುವಿ
ರಾಮಾ ||೯||

ತನ್ನ ದೇಹದ ತುಂಬ ಯಾವಳು ಕೇಶರವನ್ನು ಬಳಿದುಕೊಂಡಿರುವಳೋ, ಮುತ್ತಿನ ಹಾರವು ಯಾವಳ ಗೌರವರ್ಣದ ಉಬ್ಬಿದ ಸ್ತನಗಳ ಮೇಲೆ ನೇತಾಡುತ್ತಿರುವದೋ, ಹಾಗು ನೂಪುರ ರೂಪದ ಹಂಸವು ಯಾವಳ ಚರಣ ಕಮಲಗಳ ಶೋಭೆಯಾಗಿ ಮಧುರ ಸ್ವರವನ್ನುಂಟು ಮಾಡುತ್ತಿದೆಯೋ ಅಂಥ ಸುಂದರಿಯು, ಈ ಜಗತ್ತಿನೊಳಗೆ ಯಾವ ಪುರುಷನನ್ನು ತನ್ನ ವಶದೊಳಗೆ ತೆಗೆದುಕೊಳ್ಳಲಾರಳು? ಅಂದರೆ, ಯಾವಳು ತನ್ನ ಗೌರವರ್ಣದ ದೇಹಕ್ಕೆ ಕೇಶರವನ್ನು ಬಳಿದುಕೊಂಡಿರುವಳೋ, ಯಾವಳ ದುಂಡನ್ನ ಮಾಂಸ ಭರಿತ ಸ್ತನಗಳ ಮೇಲೆ ಮುತ್ತಿನ ಹಾರವು ನೇತಾಡುತ್ತಿರುವದೋ, ಯಾವಳ ಕಾಲುಗಳಲ್ಲಿ ನೂಪುರಗಳಿದ್ದು, ನಡೆಯುವಾಗ ಅವು ಒಂದು ಬಗೆಯ ಕರ್ಣ ಮಧುರ ನಾದವನ್ನುಂಟು ಮಾಡುವವೋ ಅಂಥ ಮೃಗನಯನೆಯು ಯಾವ ಪುರುಷನನ್ನು ವಶಪಡಿಸಿಕೊಳ್ಳಲಾರಳು?

ನೂನಂ ಹಿ ತೇ ಕವಿವರಾ ವಿಪರೀತ ಬೋಧಾ
ಏ ನಿತ್ಯ ಮಾಹುರ ಬಲಾಂ ನಾತಿ ಕಾಮಿನೀ ನಾಮ್ |
ಯಾಭಿರ್ವಿ ಲೋಲತರ ತಾರಕ ದೃಷ್ಟಿ ಪಾತೈಃ
ಶಕ್ರಾ ದಯೋಽಪಿ ವಿಜಿತಾಸ್ತ್ವ ಬಲಾಃ ಕಥಂ ತಾಃ ||೧೦||

ಸ್ತ್ರೀಯರನ್ನು "ಅಬಲೆ"ಯರೆಂದು ಹೇಳುವಂಥ ಕವಿ ಶ್ರೇಷ್ಠರು ನಿಜಕ್ಕೂ ಬುದ್ಧಿಗೇಡಿಗಳೆಂದೇ ಹೇಳಬೇಕು. ಏಕೆಂದರೆ—ಯಾವುದೇ ಬಗೆಯ ಶಸ್ತ್ರಾಸ್ತ್ರಗಳಿಲ್ಲದೆ—ಕೇವಲ ತನ್ನ ನೇತ್ರಗಳ ಚಂಚಲ ಕಟಾಕ್ಷಗಳಿಂದಲೇ ಮಹಾಬಲಶಾಲಿಗಳೆನ್ನಿಸಿದ ಇಂದ್ರಾದಿ ದೇವತೆಗಳನ್ನು ಕೂಡ ಸೋಲಿಸಬಲ್ಲವಳು "ಅಬಲೆ" ಯಾಗಲು ಎಂದಿಗಾದರೂ ಸಾಧ್ಯವಿದೆಯೆ? ಇಲ್ಲವೇ ಇಲ್ಲ. ಅಂದರೆ ಸ್ತ್ರೀಯರು ತಮ್ಮ ಒಂದೇ ಒಂದು ಓರೆ ನೋಟದಿಂದ, ಎಂಥವನು ಬಂದರೂ ಎದುರಿಸಬಲ್ಲೆನೆಂದು ಎದೆತಟ್ಟಿ ಹೇಳಬಲ್ಲ ಯೋಧನನ್ನು ಕೂಡ ಸೋಲಿಸ ಬಲ್ಲರು. ಆದಕ್ಕಾಗಿ ಅವರಿಗೆ 'ಅಬಲೆ'ಯರೆಂದು ಕರೆಯುವದು ಮಹಾ ಮೂರ್ಖತನ.

ನೂನ ಮಾಜ್ಞಾ ಕರ ಸ್ತಸ್ಯಾಃ ಸುಭ್ರುವೋ ಮಕರ ಧ್ವಜಃ |
ಯತಸ್ತನ್ನೇತ್ರ ಸಂಚಾರ ಸೂಚಿತೇಷು ಪ್ರವರ್ತತೇ ||೧೧||

ಅಸಮಶರನೆನಿಸಿದ ಕುಸುಮಶರನು ಅರ್ಥಾತ್ ಕಾಮದೇವನು ನಿಶ್ಚಯವಾಗಿಯೂ ಸುಂದರ ಹಾಗು ಮೋಹಕ ಬಾಹುಗಳುಳ್ಳ ಸ್ತ್ರೀಯರ ಆಜ್ಞೆಯನ್ನು ಚಾಚೂ ತಪ್ಪದೆ ಪಾಲಿಸುವಂಥ ಸೇವಕನಾಗಿರುವನು. ಏಕೆಂದರೆ ತರುಣಿಯರು ಯಾವುನೊಬ್ಬ ಪುರುಷನತ್ತ ಓರೆನೋಟ ಬೀರುವದೊಂದೇ ತಡ, ಕಾಮದೇವನು ಆ ಪುರುಷನ ಮೇಲೆ ಆಕ್ರಮಣವನ್ನು ಪ್ರಾರಂಭಿಸಿ ಬಿಡುತ್ತಾನೆ.

ಕೇಶಾ ಸಂಯಮಿನಃ ಶ್ರುತೇರಪಿ ಪರಂ ಪಾರಂಗತೇ ಲೋಚನೇ,
ಚಾಂತರ್ವಕ್ತ್ರಮಪಿ ಸ್ವಭಾವರುಚಿ ಭಿಃ ಕೀರ್ಣ ದ್ವಿಜಾನಾಂ ಗಣೈಃ |

ಮುಕ್ತಾನಾಂ ಸತತಾಧಿವಾಸ ರುಚಿರಂ ವಕ್ಷೋಜ ಕುಂಭದ್ವಯಂ
ಚೇತ್ಥಂ ತನ್ವಿವಪುಃ ಪ್ರಶಾಂತ ಮಪಿ ತೇ ಕ್ಷೋಭಂ ಕರೋವತ್ಯೇವನಃ
॥೧೨॥

ಹೇ ಕೃಶಾಂಗಿ! ನಿನ್ನ ನಿರ್ಮಲ ಕೂದಲಗಳು ಸಿಂಗರಿಸಲ್ಪಟ್ಟಿವೆ. ಅಚ್ಚು ಕಟ್ಟಾಗಿವೆ. ನಿನ್ನ ದೊಡ್ಡ—ದೊಡ್ಡ ಕಣ್ಣುಗಳು ಕಿವಿಯವರೆಗೂ ಹಬ್ಬಿವೆ. ನಿನ್ನ ಮುಖ ಕಮಲವು ಸ್ವಚ್ಛವಾಗಿದ್ದು ಬಿಳಿಯ ದಂತ ಪಂಕ್ತಿಗಳಿಂದ ಶೋಭಾಯ ಮಾನವಾಗಿದೆ. ನಿನ್ನ ಸ್ತನ—ಕುಚ—ಗಳ ಮೇಲೆ ಮುತ್ತಿನ ಸರವು ನೇತಾಡುತ್ತಿದೆ. ಈ ರೀತಿಯಾಗಿರುವ ನಿನ್ನ ಶೀತಲ ಹಾಗು ಶಾಂತಮಯ ಶರೀರವು ಕೂಡ ನನ್ನ ಮನದಲ್ಲಿ ವಿಕಾರವನ್ನುಂಟು ಮಾಡುತ್ತಿರುವದು ನಿಜಕ್ಕೂ ಅಚ್ಚರಿಂದ ಸಂಗತಿಯಾಗಿದೆ.

ಟಿಪ್ಪಣಿ:—ಮೇಲಿನ ಶ್ಲೋಕದಲ್ಲಿ ಬಂದಿರುವ "ಸಂಯಮಿನ, ಶ್ರುತೇರಪಿ, ದ್ವಿಜಾನಾಂ ಮುಕ್ತಾನಾಂ" ಶಬ್ದಗಳು ಎರಡೆರಡು ಅರ್ಥವುಳ್ಳವುಗಳಾಗಿವೆ. ಅಂಥ ಶಬ್ದಗಳನ್ನು ಉಪಯೋಗಿಸಿ ಭರ್ತೃಹರಿಯು ತನ್ನ ಚಮತ್ಕಾರವನ್ನು ತೋರಿಸಿದ್ದಾನೆ. ಅಂತೆಯೆ ಈ ಶ್ಲೋಕಕ್ಕೆ ಎರಡು ಅರ್ಥಗಳುಂಟಾಗುವವು. ಒಂದು ಅರ್ಥವನ್ನಂತೂ ಮೇಲೆಯೇ ಹೇಳಲಾಗಿದೆ. ಇನ್ನೊಂದು ಅರ್ಥವನ್ನು ಬರೆಯುವ ಮೊದಲು ಆ ಶಬ್ದಗಳ ಎರಡೆರಡು ಅರ್ಥಗಳನ್ನು ಕೊಡಲಾಗಿದೆ. ಸಂಯಮನ= ಸಿಂಗರಿಸಲ್ಪಡು ಮತ್ತು ಜಿತೇಂದ್ರಿಯ; ಶ್ರುತೇರಪಿ= ಕಿವಿಗಳವರೆಗೆ ತಲುಪಿದ ಮತ್ತು ವೇದಶಾಸ್ತ್ರ ಪಾರಂಗತ, ಅರಣ್ಯವಾಸಿ, ವನವಾಸಿ; ದ್ವಿಜಾನಾಂ= ಹಲ್ಲುಗಳು ಮತ್ತು ಬ್ರಾಹ್ಮಣ; ಮುಕ್ತಾನಾಂ= ಮುತ್ತು ಮತ್ತು ಮುಕ್ತ ಪುರುಷ; ಎರಡನೆಯ ಬಗೆಯ ಅರ್ಥವು ಈ ರೀತಿಯಾಗಿದೆ:

ಹೇ ಕೃಶಾಂಗಿ! ನಿನ್ನಕೂದಲುಗಳು ಜಿತೇಂದ್ರಿಯಗಳು; ನಿನ್ನ ನೇತ್ರಗಳು ವೇದ—ಶಾಸ್ತ್ರ ಪಾರಂಗತ ಮತ್ತು ಅರಣ್ಯವಾಸಿಗಳಾಗಿವೆ. ಅರ್ಥಾತ್ ನಿನ್ನ ಕಣ್ಣುಗಳಿಂದ ನೀನು ಶ್ರುತಿಗಳನ್ನು ಬಹಳಷ್ಟು ನೋಡಿರುವೆ. ನಿನ್ನ ಮುಖವು ಪವಿತ್ರವಾದುದಾಗಿದೆ. ಹಾಗೂ ಆದರಲ್ಲಿ ಬ್ರಾಹ್ಮಣರ ನಿವಾಸವಿದೆ. ನಿನ್ನ ಉರ

ಪ್ರದೇಶದ ಮೇಲೆ ಮುಕ್ತ ಪುರುಷರ ನಿವಾಸ ಸ್ಥಾನವಿದೆ. ನಿನ್ನ ಶರೀರವು ಸತೋ ಗುಣಗಳ ಧಾಮವಾಗಿದೆ. ಹೀಗಿದ್ದಾಗ ನಿನ್ನ ಶರಿರವು ಶೀತಲ ಹಾಗು ಶಾಂತಮಯವಾಗಿರಬೇಕು. ಆದರೆ ಇಲ್ಲಿ ಎಲ್ಲವೂ ತದ್ವಿರುದ್ಧವಾಗಿದೆ. ಸತೋಗುಣದ ಶರೀರದಿಂದ ನನಗೆ ಶಾಂತಿದೊರೆಯಬೇಕಾಗಿತ್ತು. ಆದರೆ ನನ್ನ ಮನದೊಳಗೆ ಅಶಾಂತಿ ಹಾಗು ಅನುರಾಗಗಳು ಹುಟ್ಟತೊಡಗಿದ್ದು ಆಶ್ಚರ್ಯದ ಸಂಗತಿಯಾಗಿದೆ.

ಈ ಶ್ಲೋಕದಿಂದ: ಸ್ತ್ರೀಯರ ಶರೀರವು ಎಲ್ಲ ರೀತಿಯಿಂದಲೂ ಶೀತಲ ಹಾಗು ಶಾಂತಮಯವಾಗಿದ್ದರೂ ಪುರುಷನ ಮನದೊಳಗೆ ವಿಷಯ ಲಾಲಸೆ ಯನ್ನು ಹುಟ್ಟಿಸದೆ ಇರಲಾರದು; ಎಂಬ ಮಾತು ವ್ಯಕ್ತವಾಗುವದು.

ಮುಗ್ಧೇ ಧಾನುಷ್ಕತಾ ಕೇಯಮ ಪೂರ್ವಾ ತ್ವಯಿ ದೃಶ್ಯತೇ |
ಯಯಾ ಹರಸಿ ಚೆ ತಾಂಸಿ ಗುಣೈ ರೇವ ನ ಸಾಯ ಕೈಃ ||೧೩||

ಹೇ ಮುಗ್ಧೆ! ನಿನ್ನಲ್ಲಿಯ ಧನುರ್ವಿದ್ಯೆಯು ಅಪೂರ್ವವಾದುದೆಂದು ಕಂಡುಬರುತ್ತದೆ. ಬಾಣಗಳನ್ನು ಉಪಯೋಗಿಸದೆಯೇ ಕೇವಲ ಚತುರತೆ* ಯಿಂದ ಎಂತೆಂಥವರ ಚಿತ್ತವನ್ನು ಹರಣಮಾಡಿ ಹೃದಯವನ್ನು ಭೇದಿಸಿ ಬಿಡುವಿ. ಇಂಥ ಅಪೂರ್ವ ಬುದ್ಧಿವಂತಿಕೆಯು ನಿನಗೆಲ್ಲಿಂದ ಬಂದಿತು ? ಸ್ತ್ರೀಯರ ಬಳಿಯಲ್ಲಿ ಯಾವದೇ ಬಗೆಯ ಶಸ್ತ್ರಗಳಿರುವದಿಲ್ಲ. ಅವರು ಕೇವಲ ತಮ್ಮಲ್ಲಿಯ ಚತುರತೆಯಿಂದಲೇ ಪುರುಷರನ್ನು ತಮ್ಮ ಅಧಿನದೊಳಗಿರಿಸಿ ಕೊಳ್ಳುವದು ನಿಜಕ್ಕೂ ಅಚ್ಚರಿಂದ ಸಂಗತಿಯು.

ಸತಿ ಪ್ರದೀಪೇ ಸತ್ಯಗ್ನೌ ಸತ್ಸು ತಾರಾರವಿಂದುಷು |
ವಿನಾ ಮೇ ಮೃಗಶಾವಾಕ್ಷ್ಯಾ ತಮೋಭೂತಮಿದಂ ಜಗತ್ || ೧೪ ||

* 'ಗುಣ' ಈ ಶಬ್ದದ ಅರ್ಥವು 'ಚತುರತೆ' ಎಂದಾಗುವದಲ್ಲದೆ ಬಿಲ್ಲಿನ ಎರಡೂ ತುದಿಗಳಿಗೆ ಕಟ್ಟುವಂಥ 'ಹಗ್ಗ'ವೆಂದೂ ಅರ್ಥವಾಗುವದು.

ಈ ಜಗತ್ತನ್ನು ಬೆಳಗಲು ದೀಪಗಳು, ಅಗ್ನಿ, ನಕ್ಷತ್ರಗಳು, ಸೂರ್ಯ ಹಾಗೂ ಚಂದ್ರರುಗಳೆಲ್ಲ ಇದ್ದರೂ ಕೂಡ ಮೃಗನಯನೆಯಾದ ಸುಂದರಿಯೋರ್ವಳಿಲ್ಲದೆ ಇಡಿಯ ಜಗತ್ತೇ ನನಗೆ ಅಂಧಕಾರಮಯವಾಗಿದೆ. ಅಂದರೆ ಗೃಹಸ್ಥಾಶ್ರಮದಲ್ಲಿ ಓರ್ವ ಸ್ತ್ರೀಯು ಇರದಿದ್ದರೆ ಅಪಾರ ಐಶ್ವರ್ಯವು ಕೂಡ ತುಚ್ಛವಾಗುವದು.

ತಸ್ಯಾಸ್ತನೌ ಯದಿ ಘನೌ ಜಘನಂ ವಿಹಾರಿ
ವಕ್ತ್ರಂ ಚ ಚಾರು ತವ ಚಿತ್ತ ಕಿಮಾ ಕುಲತ್ವಮ್ ।
ಪುಣ್ಯಂ ಕುರುಷ್ವ ಯದಿ ತೇಷು ತವಾಸ್ತಿ ವಾಂಛಾ
ಪುಣ್ಯೈರ್ವಿನಾ ನಹಿ ಭವಂತಿ ಸಮೀಹಿತಾರ್ಥಾ ॥ ೧೫॥

ಓ ಚಿತ್ತವೆ ! ಆ ತರುಣ ಸ್ತ್ರೀಯ ಮಾಂಸ ಭರಿತ ಪುಷ್ಟಸ್ತನಗಳು, ಸುಮನೋಹರವಾದ ತೊಡೆಗಳು, ಹಾಗೂ ಸುಂದರವಾದ ಮುಖವನ್ನು ನೋಡಿ ಏತಕ್ಕೆ ವ್ಯಾಕುಲಗೊಳ್ಳುವೆ ? ಒಂದು ವೇಳೆ ನೀನು ಅವಳ ಕಠೋರ ಸ್ತನಗಳಿಂದ ಆನಂದ ಪಡೆಯಬೇಕೆಂದಿದ್ದರೆ ಮೊದಲು ಪುಣ್ಯವನ್ನು ಮಾಡು. ಏಕೆಂದರೆ ಪುಣ್ಯವನ್ನು ಮಾಡದೆ ಮನೋರಥವು ಪೂರ್ಣವಾಗುವದಿಲ್ಲ. ಅಂದರೆ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸುತ್ತಿರುವ ಹರಿಣಾಕ್ಷಿಯರಾದ ಸುಂದರಿಯರೊಂದಿಗೆ ಸ್ವರ್ಗ ಸುಖವನ್ನು ಅನುಭವಿಸಬೇಕೆಂದರೆ ಮೊದಲು ಸಾಕಷ್ಟು ಪುಣ್ಯ ಸಂಚಯ ಮಾಡಿರಬೇಕು. ಏಕೆಂದರೆ ಅಂಥವರು ಎಲ್ಲರಿಗೂ ಲಭ್ಯರಾಗುವದಿಲ್ಲ.

ಉದ್ವೃತ್ತಃ ಸ್ತನಭಾರ ಏಷ ತರಲೇ ನೇತ್ರೇ ಚಲೇ ಭ್ರೂಲತೇ
ರಾಗಾಧಿಷ್ಠಿತ ಮೋಷ್ಠಪಲ್ಲವಮಿದಂ ಕುರ್ವಂತು ನಾಮವ್ಯಥಾಂ ।
ಸೌಭಾಗ್ಯಾಕ್ಷರ ಪಂಕ್ತಿರೇವ ಲಿಖಿತಾ ಪುಷ್ಪಾಯುಧೇನ ಸ್ವಯಂ
ಮಧ್ಯಸ್ಥಾಪಿ ಕರೋತಿ ತಾಪ ಮಧಿಕಂ
ರೋಮಾವಲಿ ಕೇನಸಾ ॥ ೧೬ ॥

ಓ ಕಾಮಿನಿ ! ದುಂಡಗಿರುವ ನಿನ್ನ ಉಬ್ಬಿದ ಸ್ತನಗಳು, ಚಂಚಲ ನೇತ್ರಗಳು, ಚಪಲ ಭ್ರೂ—ಲತೆಯು ಹಾಗು ಚಿಗುರೆಲೆಗಳಂತಿರುವ ಮೃದುವಾದ ತುಟಿಗಳು, ಒಂದು ವೇಳೆ ರಸಿಕ ಪುರುಷರ ಶರೀರದೊಳಗೆ ಕಾಮವೇದನೆಯನ್ನುಂಟು ಮಾಡಬಹುದು. ಆದರೆ ಕಾಮ ದೇವನು ಸ್ವಹಸ್ತದಿಂದ ಬರೆದಂಥ ಸೌಭಾಗ್ಯದ ಸಂಕ್ತಿಗಳಂತಿದ್ದ ರೋಮಾವಲಿಯು—ಕೇಶರಾಶಿಯು—ಮಧ್ಯಸ್ಥವಾಗಿದ್ದರೂ ಚಿತ್ತವನ್ನು ಅದೇಕೆ ಸಂತಪ್ತಗೊಳಿಸುವದೋ ಅದೇ ನನಗೆ ತಿಳಿಯದಂತಾಗಿದೆ. ಅಂದರೆ ಸ್ತ್ರೀಯರ ಒಂದೊಂದು ಅಂಗವು—ಒಂದೊಂದು ಕೂದಲೆಳೆಯು ಕೂಡ—ಪುರುಷರ ಮನದೊಳಗೆ ಸಂತಾಪವನ್ನು ಹುಟ್ಟಿಸುವವು. ಹೆಚ್ಚಿಗೆ ಹೇಳುವದೇನು ? "ಸ್ತ್ರೀ" ಎಂಬ ಶಬ್ದವೇ ಸಂತಾಪಜನಕವಾಗಿರುವದು.

ಗುರುಣಾ ಸ್ತನಭಾರೇಣ ಮುಖ ಚಂದ್ರೇಣ ಭಾಸ್ವತಾ ।
ಶನೈಶ್ಚರಾಭ್ಯಾಂ ಪಾದಾಭ್ಯಾಂ ರೇಜೇಗ್ರಹಮಯೀದ ಸಾ ॥ ೧೬ ॥

ಆ ತರುಣಿಯು ಉಬ್ಬಿದ ಪುಷ್ಟಸ್ತನಗಳ ಭಾರದಿಂದ, ಭಾಸ್ಕರನಿಗೆ—ಸೂರ್ಯನಿಗೆ—ಸಮಾನವಾದ ಪ್ರಕಾಶಮಾನ ಮುಖಚಂದ್ರದಿಂದ ಹಾಗು ಶನೀಶ್ವರನಂತಹ ಮಂದಗಾಮಿಯಾದ ಎರಡೂ ಚರಣಗಳಿಂದ ಗ್ರಹಮಯಿಯಾಗಿ ಕಾಣುತ್ತಿರುವಳು. ಅಂದರೆ ಹರಿಣಾಕ್ಷಿಯಾದ ಸುಂದರ ನವಯುವತಿಯು ಪ್ರಕಾಶಮಾನವಾದ ಗ್ರಹಪಂಜದಂತೆ ಮನೋಹರವಾಗಿದ್ದು ಚಿತ್ತಾಕರ್ಷಕಳಾಗಿರುವಳು. ಹೃದಯವನ್ನು ಭೇದಿಸಬಲ್ಲ ಅವಳ ಆಕರ್ಷಣೆಯನ್ನು ವರ್ಣಿಸುವದು ಅಸಾಧ್ಯವು.

ಮಾತ್ಸರ್ಯ ಮುತ್ಸಾರ್ಯ ವಿಚಾರ್ಯ ಕಾರ್ಯ—
ಮಾರ್ಯಾಃ ಸಮರ್ಯಾದಮಿದಂ ವದಂತು ।
ಸೇವ್ಯಾ ನಿತಂಬಾಃ ಕಿಮ್ ಭೂಧರಾಣಾ—
ಮುತಸ್ಮರಸ್ಮೇರ ವಿಲಾಸಿನೀನಾಮ್ ॥ ೧೮ ॥

ಯೋಗ್ಯಾ ಯೋಗ್ಯ ವಿಚಾರ ಮಾಡುವದರಲ್ಲಿ ನಿಪುಣರಾದಂಥ ಶ್ರೇಷ್ಠ ಪುರುಷರೆ ! ಈ ಜಗತ್ತಿನೊಳಗೆ ಹುಟ್ಟಿ ಬಂದ ಮೇಲೆ ಮಾನವನು ಪರ್ವತ ಗಳ ನಿತಂಬ ಸೇವನೆ ಮಾಡಬೇಕೋ ! ಅಥವಾ ಕಾಮದೇವನ ಬಯಕೆ ಯಿಂದಾಗಿ ಮುಗುಳು ನಗುತ್ತಿರುವ ವಿಲಾಸವತಿಯಾದ ಸ್ತ್ರೀಯರ ನಿತಂಬ ಗಳನ್ನು ಸೇವಿಸಬೇಕೋ ಎಂಬುದನ್ನು ನೀವು, ಪಕ್ಷಪಾತವನ್ನು ಬದಿಗಿಟ್ಟು, ಕರ್ತವ್ಯ ಕರ್ಮದ ವಿಚಾರವನ್ನೇ ತಲೆಯೊಳಗಿರಿಸಿಕೊಂಡು ಶಾಸ್ತ್ರಗಳನ್ನು ನೋಡಿ ಹೇಳಿರಿ. ಅಂದರೆ ಸಂಸಾರಿಗಳಿಗೆ ನವಯುವತಿಯರೊಂದಿಗೆ ಭೋಗವೂ, ವಿರಕ್ತರಿಗೆ ಪರ್ವತ ಪ್ರದೇಶದೊಳಗಿನ ಗುಹೆಗಳಲ್ಲಿ ದೇವ ಚಿಂತ ನೆಯೂ ಉಚಿತವಾಗಿದೆ. ಇವೆರಡರಲ್ಲಿ ಯಾವುದೊಂದು ಕಾರ್ಯವನ್ನು ಅವನು ಭೋಗಿಯಾದರೂ ಆಗಬಹುದು ಇಲ್ಲವೆ ಯೋಗಿಯಾದರೂ ಆಗ ಬಹುದು—ಮಾಡದಿದ್ದರೆ ಅವನ ಜನ್ಮವು ವ್ಯರ್ಥವೆಂದೇ ತಿಳಿಯಬೇಕು.

ಸಂಸಾರೇಽಸ್ಮಿನ್ನಸಾರೇ ಪರಿಣತಿ ತರಲೇ ದ್ವೇಗತಿ ಪಂಡಿತಾನಾಂ
ತತ್ವಜ್ಞಾನಾಮೃತಾಂಭಃ ಕೃತ ಲಲಿತ ಧಿಯಾಂಯಾಂತು ಕಾಲಃ
ಕದಾಚಿತ್ ।
ನೋ ಚೇನ್ಮುಗ್ಧಾಂಗನಾನಾಂಸ್ತನ ಜಘನ ಭರಾಭೋಗ ಸಂಭೋಗಿ
ನೀನಾಂ
ಸ್ಥೂಲೋಪಸ್ಥ ಸ್ಥಲೀಷು ಸ್ಥಗಿತ ಕರತಲ ಸ್ಪರ್ಶಲೋಲೋದ್ಯ
ತಾನಾಂ ॥ ೧೯ ॥

ಸಾರವಿಲ್ಲದ ಈ ಸಂಸಾರದೊಳಗೆ ಅಂತಿಮ ಅವಸ್ಥೆಯು ಅತೀವ ಚಂಚಲವಾಗಿರುವಂಥ ಬುದ್ಧಿವಂತರ ಸಮಯವು ಬಹು ಚನ್ನಾಗಿ ಕಳೆಯು ವದು. ತತ್ವಜ್ಞಾನ ರೂಪದ ಅಮೃತ ಸರೋವರದೊಳಗೆ ಮೇಲಿಂದ ಮೇಲೆ ಮುಳುಗು ಹಾಕಿ ಬುದ್ಧಿಯನ್ನು ನಿರ್ಮಲಗೊಳಿಸಿಕೊಂಡಿರುವಂಥ ವರ ವೇಳೆಯು ಚನ್ನಾಗಿ ಕಳೆಯುವದು. ಹಾಗು ನವಯುವತಿಯರ ಕಠಿಣ ಹಾಗು ಪುಷ್ಟವಾದ ಸ್ತನಗಳು; ಮತ್ತು ತುಂಬಿದ ತೊಡೆಗಳನ್ನು ಉದ್ದೇಶ

ಪೂರ್ಣವಾಗಿ ಸ್ಪರ್ಶಿಸುತ್ತ ಕಾಮದೇವನ ಸುಖೋಪಭೋಗಗಳನ್ನು ಪಡೆಯುವವರಿಗೆ ಸಮಯವು ಕಳೆದದ್ದು ಗೊತ್ತಾಗುವದೇ ಇಲ್ಲ. ಅಂದರೆ :

ಮಿಥ್ಯವಾದ ಈ ಸಂಸಾರದೊಳಗೆ ವೇಳೆಯನ್ನು ಕಳೆಯುವ ಸಾಧನಗಳು ಎರಡೇ ಎರಡಿವೆ. ಮೊದಲನೆಯದಾಗಿ ಬ್ರಹ್ಮ ವಿದ್ಯೆಯೊಳಗೆ ವಿಶಾರದರಾಗಿ ಅದರೊಳಗೇ ತಲ್ಲೀನರಾಗುವದರಿಂದ ಅವರ ಸಮಯವು ಚನ್ನಾಗಿ ಕಳೆಯುತ್ತದೆ. ಇಲ್ಲವೆ ದಪ್ಪಗಿನ ಹಾಗು ಬಿರುಸಾದ ಕುಚಗಳನ್ನು ಮತ್ತು ಬಾಳೆಯ ದಿಂಡಿನಂತಿರುವ ತೊಡೆಗಳುಳ್ಳ ನವಯುವತಿಯನ್ನು ಎದೆಗವಚಿಕೊಂಡು ಕಾಮೇಚ್ಛೆಯಿಂದ ಉನ್ಮತ್ತರಾಗಿ ಅವರೊಂದಿಗೆ ಭೋಗವಿಲಾಸಗಳಲ್ಲಿ ತನ್ಮಯರಾಗುವದರಿಂದ ಸಮಯವು ಚನ್ನಾಗಿ ಕಳೆಯುವದು.

ಹರಿಣಾಕ್ಷಿಯರಾದ ಕಾಮಿನಿಯರೊಂದಿಗೆ ಭೋಗಿಸುವವನಿಗೆ ದಿನಗಳು ಉರುಳಿದ್ದು ಗೊತ್ತಾಗುವದೇ ಇಲ್ಲ. ಇಷ್ಟೇ ಅಲ್ಲ, ಅವನಿಗೆ ಹಗಲು ಹೇಗೆ ಹೋಯಿತು ? ರಾತ್ರಿಯು ಹೇಗೆ ಕಳೆಯಿತು ? ಎಂಬುದು ಕೂಡ ಗೊತ್ತಾಗುವದಿಲ್ಲ. ಹೀಗಾಗಿ ಅವನಿಗೆ ಯಾವುದೂ ಗೊತ್ತಾಗುವದಿಲ್ಲ. ಆದರೆ ಕಾಮಿನಿಯರೊಂದಿಗೆ ಭೋಗಿಸದಂಥವನಿಗೆ ಮಾತ್ರ ದಿನಗಳನ್ನು ನೂಕುವದು ಮಹಾ ದುಸ್ತರವಾಗುವದು. ಅವನಿಗೆ ಒಂದೊಂದು ದಿನವು ಒಂದೊಂದು ವರ್ಷದಂತೆ ಭಾಸವಾಗುವದು.

ಮುಖೇನ ಚಂದ್ರಕಾಂತೇನ ಮಹಾ ನೀಲೈಃ ಶಿರೋರು ಹೈಃ ।
ಪಾಣಿಭ್ಯಾಂ ಪದ್ಮ ರಾಗಾ ಭ್ಯಾಂ ರೇಜೇ ರತ್ನಮಯೀವ ಸಾ ॥೨೦॥

ಚಂದ್ರಕಾಂತ ಮಣಿಯಂತಹ ಮುಖ, ನೀಲವರ್ಣದ ದಟ್ಟವಾದ ನೀಳ ಕೇಶರಾಶಿ, ಹಾಗು ಪದ್ಮರಾಗದಂತಹ ಎರಡೂ ಕೈಗಳಿಂದ ಆ ಯುವತಿಯು ರತ್ನಮಯಿಯಾಗಿ ಕಾಣಿಸುತ್ತಿದ್ದಾಳೆ. ಇದಕ್ಕೆ ಈ ಕೆಳಗೆ ಹೇಳಿದ ಬೇರೊಂದು ರೀತಿಯಲ್ಲಿಯೂ ಅರ್ಥವನ್ನು ಮಾಡಬಹುದು.

ಆ ತರುಣಿಯು ಚಂದ್ರಬಿಂಬದಂತೆ ಕಾಂತಿಯುತವಾದ ತನ್ನ ಮುಖಕಮಲದಿಂದ, ದಟ್ಟ ನೀಲವರ್ಣದ ಕೇಶಗಳು ಹಾಗು ಕಮಲದಂತೆ ಕೆಂಪಗಿ

ರುವ ಕೈಗಳಿಂದ ಅಪೂರ್ವ ಸುಂದರಿಯಾಗಿ ಕಾಣುತ್ತಿರುವಳು. ಅಂದರೆ ಈ ಶ್ಲೋಕದ ಅರ್ಥವಿಷ್ಟೆ ! ತರುಣಿಯರು ರತ್ನದ ಖಣಿಗಳಿದ್ದಂತೆ. ಅವರಲ್ಲಿ ರತ್ನಗಳ ಕಾಂತಿಯು ಯಾವಾಗಲೂ ಇರುತ್ತದೆ.

ಸಮ್ಮೋಹಯಂತಿ ಮದಯಂತಿ ವಿಡಂಬಯಂತಿ
ನಿರ್ಭತ್ಸ೯ಯಂತಿ ರಮಯಂತಿ ವಿಷಾದಯಂತಿ |
ಏತಾಃ ಪ್ರವಿಶ್ಯ ಸದಯಂ ಹೃದಯಂ ನರಾಣಾಂ
ಕಿಂ ನಾಮ ವಾಮನಯನಾ ನ ಸಮಾಚರಂತಿ ||೨೧||

ಮೃಗನಯನೆಯರಾದ ಚತುರ ತರುಣಿಯರು ಒಂದು ಸಲ ಪುರುಷರ ಹೃದಯದೊಳಗೆ ದಯೆಯಿಂದ ಸೇರಿಕೊಂಡು ಅರ್ಥಾತ್ ಪ್ರವೇಶಿಸಿ, ಅವರನ್ನು ಮೋಹಿತಗೊಳಿಸುವರು. ಮದೋನ್ಮತ್ತನನ್ನಾಗಿ ಮಾಡುವರು. ಅವರಿಗೆ ಪೀಡಿಸುವರು, ಬೆದರಿಸುವರು, ಭೋಗಕ್ಕಾಗಿ ಬೆರೆಯುವರು. ಹಾಗು ವಿರಹ ವೇದನೆಯಿಂದ ಬಳಲಿಸುವರು. ಅಂದಾಗ ಆ ಅಪೂರ್ವ ಸುಂದರಿಯರು ಮಾಡದಂಥ ಕಾರ್ಯಗಳು ಯಾವುದಾದರೂ ಇವೆಯೆ ?
ಅಂದರೆ—

ಸ್ತ್ರೀಯರು ಯಾವನ ಹೃದಯದೊಳಗೆ ಪ್ರವೇಶಿಸುವರೊ ಅವನ ಅವಸ್ಥೆಯು ಸನ್ನಿಪಾತ ಜ್ವರದಿಂದ ಬಳಲುವಂಥ ರೋಗಿಯಂತಾಗುವದು. ಸನ್ನಿಪಾತದ ರೋಗಿಯ ಅವಸ್ಥೆಯು ಯಾವ ರೀತಿಯದಿರುತ್ತದೆಂಬುದನ್ನು ವಿವರಿಸಿ ಬರೆಯುವ ಆಗತ್ಯವಿಲ್ಲ. ಏಕೆಂದರೆ ಬಹುತರವಾಗಿ ಆ ರೋಗದ ಬಗ್ಗೆ, ಅದರ ಲಕ್ಷಣಗಳ ಬಗ್ಗೆ ಎಲ್ಲರಿಗೂ ಗೊತ್ತೇ ಇರುತ್ತದೆ. ಇರಲಿ. ತರುಣಿಯರು ತಾವು ಪ್ರೀತಿಸುವಂಥ ತರುಣರನ್ನು ಅರೆ ಹುಚ್ಚರಂತೆ ಮಾಡುತ್ತಾರೆ. ಹಾಗು ಗಾರುಡಿಗನು ಬುಟ್ಟಿಯೊಳಗಿನ ತನ್ನ ಹಾವನ್ನು, ಭಿಕ್ಷುಕನು ತನ್ನ ಮಂಗವನ್ನು ಯಾವರೀತಿಯಿಂದ ಕುಣಿಸಿ, ಆಡಿಸಿ ತನ್ನ ಹೊಟ್ಟೆಯನ್ನು ತುಂಬಿಕೊಳ್ಳುವರೋ ಅದೇ ರೀತಿಯಾಗಿ ತರುಣಿಯರು ತಾವು ಮೆಚ್ಚಿದ ಪುರುಷರನ್ನು ಆಡಿಸಿ, ಪೀಡಿಸಿ, ಭೇಡಿಸಿ ಕೊನೆಗೆ ಅವರಿಂದ ತಮ್ಮ

ಕಾಮದ ಹಸಿವನ್ನು ಹಿಂಗಿಸಿಕೊಳ್ಳುವರು. ಕೆಲ ಕೆಲವು ಸಂದರ್ಭಗಳಲ್ಲಿ ಮುಂತೂ ಆ ತರುಣಿಯರು ವಿರಹ ವೇದನೆಯನ್ನು ಅಂಟಿಸಿ ತರುಣರನ್ನು ಕೊಂದು ಹಾಕುವುದೂ ಉಂಟು. ಇಂದಾಗ ಅವರು ಮಾಡುವ ಕಾರ್ಯವು ಯಾವುದೂ ಉಳಿದಿಲ್ಲವೆಂಬುದು ವ್ಯಕ್ತವಾಗುವದು.

ವಿಶ್ರಮ್ಯ ವಿಶ್ರಮ್ಯ ವನೇ ದ್ರುಮಾಣಾಂ
ಛಾಯಾಸು ತನ್ವಿ ವಿಚಚಾರ ಕಾಚಿತ್ |
ಸ್ತನೋತ್ತರೀಯೇಣ ಕರೋದ್ಧೃತೇನ
ನಿವಾರಯಂತಿ ಶಶಿನೊ ಮಯೂಖಾನ್ ||೨೬||

ವನ ದೊಳಗಿನ ವೃಕ್ಷದ ನೆರಳಿನಲ್ಲಿ ಮೇಲಿಂದ ಮೇಲೆ ವಿಶ್ರಾಂತಿಯನ್ನು ಪಡೆಯುತ್ತಿರುವಂಥ ವಿರಹಿಣಿ ಸ್ತ್ರೀಯು, ತನ್ನ ಕೋಮಲ ಶರೀರವನ್ನು ಸಂರಕ್ಷಿಸಿ ಕೊಳ್ಳುವದಕ್ಕಾಗಿ, ತನ್ನ ಮುಂದಲೆಯ ಮೇಲಿನ ಸೆರಗನ್ನು ಕೈಯಿಂದ ಕೊಂಚ ಮೇಲಕ್ಕೆ ಎತ್ತಿ ಹಿಡಿದು ಅದರಿಂದ ಚಂದ್ರನ ಕಿರಣಗಳನ್ನು ತಡೆ ಹಿಡಿಯುತ್ತ ಮುನ್ನಡೆಯುತ್ತಿದ್ದಾಳೆ.

ಈ ಶ್ಲೋಕದೊಳಗೆ ವರ್ಣಿಸಲ್ಪಟ್ಟಿರುವಂಥ ಅಭಿಸಾರಿಕೆಯು—ಪ್ರಿಯತಮನ ನಿರೀಕ್ಷೆಯಲ್ಲಿ ಕಾತುರಗೊಂಡಂಥವಳ ಶರೀರವು ಅತ್ಯಂತ ಸೂಕ್ಷ್ಮವಾದುದಾಗಿದೆ. ಅಂದರೆ ಚಂದ್ರನ ಶೀತಲ ಕಿರಣಗಳನ್ನು ಕೂಡ ಸಹಿಸಲಾರದಷ್ಟು ಸುಕೋಮಲವಾಗಿದೆ. ಅಂತೆಯೇ ಅವಳು ಚಂದ್ರನ ಕಿರಣಗಳಿಂದ ತನ್ನ ಕೋಮಲ ಶರೀರವನ್ನು ರಕ್ಷಿಸಲು ಸೆರಗೆನ್ನೆಳೆದು ಕೊಳ್ಳುತ್ತಾಳೆಂಬುದು ವ್ಯಕ್ತವಾಗುವದು

ಸ್ತ್ರೀ ಪ್ರಶಂಸೆಯು ಮುಗಿಯಿತು.



# ಭೋಗಾದಿ ಲಕ್ಷಣ

ಅದರ್ಶನೇ ದರ್ಶನ ಮಾತ್ರ ಕಾಮಾ ದೃಷ್ಟ್ವಾ ಪರಿಷ್ವಂಗ ರಸೈಕ
ಲೋನಾ ।

ಆಲಿಂಗಿತಾಯಾಂ ಪುನರಾಯತಾ ಕ್ಷ್ಯಾಮಾ ಶಾಸ್ಮಹೇ ವಿಗ್ರಹಯೋರ-
-ಭೇದಂ ॥೨೩॥

ವಿಶಾಲ ನೇತ್ರೆಯರಾದ ಕಾಮಿನಿಯರನ್ನು ನಾವು ಎಲ್ಲಿಯವರೆಗೆ ನೋಡುವದಿಲ್ಲವೋ ಅಲ್ಲಿಯವರೆಗೆ ಅವರನ್ನು ನೋಡುವ ಇಚ್ಛೆಯು ಅತಿ ಪ್ರಬಲವಾಗಿರುತ್ತದೆ. ಆದರೆ ಒಂದು ಸಲ ಅಂಥವಳನ್ನು ನೋಡಿದ ಕೂಡಲೆ, ಅವಳನ್ನು ಆಲಿಂಗಿಸಬೇಕು ಅಪ್ಪಿಕೊಳ್ಳಬೇಕು ಎಂಬ ಲಾಲಸೆಯು ಬಲವತ್ತರವಾಗುವದು. ಆ ತರುಣಿಯ ಆಲಿಂಗನ ಸುಖವನ್ನು ಪಡೆದ ನಂತರವಂತೂ, 'ಈ ತರುಣಿಯು ನನ್ನ ಶರೀರದಿಂದ ಬೇರ್ಪಡುವದೇ ಬೇಡ, ನಾವೀರ್ವರೂ ಒಂದೇ ಶರೀರದವರಾಗಬೇಕು' ಎಂಬ ಇಚ್ಛೆಯು ಉತ್ಪನ್ನರಾಗುವದು ಅಂದರೆ:

ನವ ತಾರುಣ್ಯವತಿಯಾದ ಕಾಮಿನಿಯು ತನ್ನ ಪಕ್ಕದಲ್ಲಿ ಬಂದ ಕೂಡಲೆ ಕಾಮುಕ ಪುರುಷನಿಗೆ—ಅವನು ಯಾವನೇ ಇರಲಿ— ಅರೆಕ್ಷಣವೂ ಅವಳನ್ನು ಅಗಲಿ ಇರುವದು ಸಾಧ್ಯವಾಗುವದಿಲ್ಲ. ಅಥವ ಒಂದು ಸಲ ತರುಣಿಯ ಚಂದ್ರವದನವನ್ನು ನೋಡಿದ ನಂತರ ಅವಳ ಜಾಲದೊಳಗೆ ಸಿಕ್ಕಿ ಬೀಳದಿರುವದು ಅಸಂಭವವೆಂದೇ ಹೇಳಬೇಕು.

ಮಾಲತೀ ಶಿರಸಿ ಜೃಂಭಣೋ ನ್ಮುಖಿ
ಚಂದನಂ ವಪುಷಿ ಕುಂಕು ಮಾನ್ವಿತಮ್ ।
ವಕ್ಷಸಿ ಪ್ರಿಯತಮಾ ಮನೋಹರಾ
ಸ್ವರ್ಗ ಏಷ ಪರಿಶಿಷ್ಟ ಆಗತಃ ।। ೨೪ ।।

ಅರ್ಥ ಅರಳಿದ ಸುಗಂಧಮಯವಾದ ಮಾಲತೀ ಪುಷ್ಪಗಳ ಮಾಲೆಯು ಕೊರಳೊಳಗೆ ಶೋಭಿಸುತ್ತಿರಲು, ಕೇಶರ ಮಿಶ್ರಿತ ಚಂದನವನ್ನು ಶರೀರಕ್ಕೆ ಲೇಪಿಸಿಕೊಂಡಿರಲು, ಅಂಥ ಸಮಯದಲ್ಲಿ ಹೃದಯಹಾರಿಣಿಯಾದ ಪ್ರಿಯತಮೆಯು ಎದೆಗಾತುಕೊಂಡು ನಿಂತುಕೊಂಡರೆ; ಸ್ವರ್ಗ ಸುಖವೆಲ್ಲವೂ ಇಲ್ಲಿಯೇ; ಭೂಲೋಕದಲ್ಲಿಯೇ ದೊರೆತವೆಂದು ಭಾವಿಸಿಕೊಳ್ಳಿರಿ. ಅಂದರೆ :

ಕೋಮಲಾಂಗಿಯರಾದ ತರುಣಿಯರನ್ನು ಭರದಿಂದ ಎದೆಗಪ್ಪಿ ಕೊಂಡಾಗ ಆಗುವಂಥ ಮಹದಾನಂದವು ಬೇರಾವುದೂ ಇಲ್ಲವೆಂಬುದು ಈ ಶ್ಲೋಕದ ಅರ್ಥವಾಗಿರುವದು.

ಪ್ರಾಙಮಾಮೇತಿ ಮನಾಗಮಾ ನಿತಗುಣಂ ಜಾತಾಭಿಲಾಷಂ ತತಃ
ಸವ್ರೀಡಂ ತದನು ಶ್ಲತೋದ್ಯತಮನು ಪ್ರತ್ಯಸ್ತ ಧೈರ್ಯಂ ಪುನಃ ।
ಪ್ರೇಮಾದ್ರ್ರಂ ಸ್ಪೃಹಣೀಯ ನಿರ್ಭರರಹಃ ಕ್ರೀಡಾಪ್ರಗಲ್ಭಂ ತತೋ
ನಿಃಶಂಕಾಂಗ ವಿಕರ್ಷಣಾಧಿಕ ಸುಖಂ ರಮ್ಯಂ ಕುಲಸ್ತ್ರೀರತಂ ।।೨೫।।

ತರುಣಿಯು ಎಲ್ಲಕ್ಕೂ ಮೊದಲು "ಉಹ್ಞೂ" ಅರ್ಥಾತ್ ಒಲ್ಲೆ, ಬೇಡ ಎನ್ನುವಳು. ಅನಂತರ ಕೊಂಚ—ಕೊಂಚವಾಗಿ ತನ್ನ ಮನದೊಳಗಿನ ಅಭಿಲಾಷೆಯನ್ನು ವ್ಯಕ್ತಗೊಳಿಸುವಳು. ಅದಕ್ಕೂ ಮೊದಲು ನಾಚಿಕೆಯಿಂದ ತನ್ನ ಶರೀರವನ್ನು ಸಡಿಲುಗೊಳಿಸುವಳು. ಅನಂತರ ಮತ್ತೆ ಅಧೀರಳಾಗಿ ಪ್ರೇಮರಸದೊಳಗೆ ಲೋಲಾಡತೊಡಗುವಳು ಆಗ ಒಳಗೊಳಗೇ ಆವಳ ಮನದಲ್ಲಿ ಏಕಾಂತ ಕ್ರೀಡೆಯ ಇಚ್ಛೆಯುಂಟಾಗುವದು. ಮತ್ತು ಭೋಗ ವಿಲಾಸದ ಸಮಯದಲ್ಲಿ ನಾನಾ ಬಗೆಯ ಚಾತುರ್ಯವನ್ನು

ವ್ಯಕ್ತಪಡಿಸುತ್ತ ನಿಸ್ಸಂಕೋಚಳಾಗಿ ಮರ್ದನ—ಚುಂಬನಾದಿಗಳಿಂದ ಅಸಾಧಾರಣವಾದ ಸುಖವನ್ನೀಯುವಳು. ಇವೆಲ್ಲ ಮನೋಹರ ಗುಣಗಳು ಸತ್ಕುಲವತಿಯರಾದ ಯುವತಿಯರಲ್ಲಿಯೇ ಇರುತ್ತವೆ. ಆದಕ್ಕಾಗಿ ಯಾವಾಗಲೂ ಸತ್ಕುಲವತಿಯರೊಂದಿಗೇ ಬೆರೆಯತಕ್ಕದ್ದು. ಅರ್ಥಾತ್ ಅಂಥವರನ್ನೇ ಮದುವೆಯಾಗತಕ್ಕದ್ದು.

ಉರಸಿ ನಿಪತಿತಾನಾಂ ಸ್ರಸ್ತಧಮ್ಮಿಲ್ಲಕಾನಾಮ್ ।
ಮುಕುಲಿತ ನಯನಾನಾಂ ಕಿಂಚಿದುನ್ಮಿಲಿತಾನಾಮ್
ಸುರತ ಜನಿಕ ಖೇದಸ್ವಿನ್ನ ಗಂಡಸ್ಥಲೀನಾ—
ಮಧರಮಧು ವಧೂನಾಂ ಭಾಗ್ಯವಂತಃ ಪಿವಂತಿ ॥ ೨೬ ॥

ವಿಶಾಲವಾದ ಎದೆಯ ಮೇಲೆ ಒರಗಿಕೊಂಡಿದ್ದಾಳೆ, ಅವಳ ಕೇಶರಾಶಿಯು ಸಡಿಲಾಗತೊಡಗಿದೆ, ಬಿಚ್ಚತೊಡಗಿದೆ ಹಾಗು ಮೈಥುನ ಸಮಯದಲ್ಲಾದ ಅತೀವ ಪರಿಶ್ರಮದಿಂದಾಗಿ ಬೆವರಿನ ಹನಿಗಳು ಗಲ್ಲಗಳ ಮೇಲೆ ಶೋಭಿಸುತ್ತವೆ. ಅಂಥ ತರುಣಿಯರ ಅಧರಾಮೃತವನ್ನು ಪಾನಮಾಡುವವರು ನಿಜವಾಗಿಯೂ ಭಾಗ್ಯಶಾಲಿಗಳೆಂದೇ ಹೇಳಬೇಕು. ಅರ್ಥಾತ್ ಭಾಗ್ಯವಂತರಿಗೇ ಅಂತಹ ಅಧರಾಮೃತಪಾನವು ದೊರೆಯುವದು. ಅಂದರೆ:

ತರುಣಿಯು—ಪುರುಷನ—ಎದೆಯಮೇಲೊರಗಿದ್ದಾಳೆ. ಅವಳ ಕೂದಲಿನ ಕಟ್ಟು ಅರ್ಧ ಸಡಿಲಾಗಿದೆ. ಅವಳ ಗುಲಾಬೀ ವರ್ಣದ ಗಲ್ಲಗಳ ಮೇಲೆ ಆದೇ ತಾನೇ ಮುಗಿಸಿದಂಥ ಸಂಭೋಗಕ್ರಿಯೆಯಲ್ಲಾದ ದಣಿವು ಬೆವರಿನ ಹನಿಗಳ ಮುಖಾಂತರ ಎದ್ದು ಕಾಣುತ್ತದೆ. ಅಂಥ ಪರಿಸ್ಥಿತಿಯಲ್ಲಿ ಭಾಗ್ಯಶಾಲಿಯಾದ ಪುರುಷನೇ ತನ್ನ ಪ್ರಿಯತಮೆಯ ಅಧರಾಮೃತವನ್ನು ಪಾನಮಾಡುವನು.

ಆಮೀಲಿತ ನಯನಾನಾಂಯಃ ಸುರತಸೋಽನುಸಂವಿದಂ ಕುರುತೇ
ಮಿಥುನೈರ್ಮಿಥೋ ವಧಾರಿತಥ ಮಿದಮೇವಕಾಮ
ನಿರ್ವಹಣಂ ॥ ೨೭ ॥

ಆಲಸ್ಯವು ಕಣ್ಣುಗಳಲ್ಲಿ ಮನೆ ಮಾಡಿಕೊಂಡಿರುವಂಥ ಸ್ತ್ರೀಯರ ಕಾಮವನ್ನು ಶಾಂತಿಗೊಳಿಸುವದು ಸ್ತ್ರೀ—ಪುರುಷರೀರ್ವರ ಪರಸ್ಪರ ಕಾಮ ಪೂಜೆಯಾಗಿರುವದು. ಈ ಮಾತನ್ನು ಕಾಮ—ಕ್ರೀಡೆಯಲ್ಲಿ ಬಲ್ಲಿದರಾದ ಸ್ತ್ರೀ—ಪುರುಷರೀರ್ವರೂ ಚನ್ನಾಗಿ ಬಲ್ಲರು. ಅಂದರೆ :

ಕಾಮದ ಮದವು ಹೆಚ್ಚಾಗಿರುವದರಿಂದ ಸ್ತ್ರೀಯರ ಕಣ್ಣುಗಳೊಳಗೆ ಆಲಸ್ಯವು ತುಂಬಿಕೊಂಡಿದೆ. ಅಂತೆಯೇ ಅವು ಅರ್ಧ ತೆರೆದುಕೊಂಡಿವೆ. ಇಂಥ ಸ್ತ್ರೀಯರ ಕಾಮವನ್ನು ಶಮನಗೊಳಿಸುವದು ಪುರುಷರ ಆದ್ಯ ಕರ್ತವ್ಯವಾಗಿದೆ. ಇಷ್ಟೇ ಅಲ್ಲ ಅದುವೇ ನಿಜವಾದ ಪುರುಷಾರ್ಥವಾಗಿದೆ. ಇಂಥ ಸ್ತ್ರೀಯರೊಂದಿಗೆ ಸಂಭೋಗಿಸುವಾಗ ದೊರೆಯುವಂಥ ಆನಂದವನ್ನು ವರ್ಣಿಸುವದು ಯಾವನಿಂದಲೂ ಸಾಧ್ಯವಿಲ್ಲ. ಆದರೂ ಅದನ್ನು—ಆ ಸುಖವನ್ನು—ಅಂಥ ಪರಿಸ್ಥಿತಿಯಲ್ಲಿ ಸಂಭೋಗಿಸಿದಂಥ ಸ್ತ್ರೀ—ಪುರುಷರು ಮಾತ್ರ ಚನ್ನಾಗಿ ಬಲ್ಲರು.

ಇದ ಮನುಚಿತಮ್‌ಕ್ರಮಶ್ಚ ಪುಂಸಾಮ್
ಯದಿಹ ಜರಾಸ್ವಪಿ ಮಾನ್ಮಥಾ ವಿಕಾರಾಃ ।
ಯದಪಿ ಚ ನ ಕೃತಂ ನಿತಂಬಿನೀನಾಮ್
ಸ್ತನಪತನಾವಧಿ ಜೀವಿತಂ ರತಂ ವಾ ॥ ೨೮ ॥

ವಿಧಾತನು—ಭಗವಂತನು—ಎರಡು ತೀರ ಅನುಚಿತ ಕಾರ್ಯಗಳನ್ನು ಮಾಡಿರುವನು. ಮೊದಲನೆಯದು : ಪುರುಷರಲ್ಲಿ, ತೀರ ಹಣ್ಣು ಹಣ್ಣು ಮುದುಕರಲ್ಲಿಯೂ ಕಾಮವಿಕಾರವನ್ನು ಹುಟ್ಟಿಸುವದು; ಎರಡನೆಯದು : ತಮ್ಮ ಕುಚ—ಸ್ತನ—ಗಳು ಜೋಲುಬಿದ್ದ ನಂತರವೂ ಸ್ತ್ರೀಯರು ಜೀವಿಸಿರುವದು ಹಾಗು ಕಾಮ ಚೇಷ್ಟೆಗಳನ್ನು ಮಾಡುವದು. ಅಂದರೆ :

ಸ್ತ್ರೀ—ಸಂಭೋಗದ ನಿಜವಾದ ಆನಂದವು ಪುರುಷರಿಗೆ ತಾರುಣ್ಯವಿದ್ದಾಗ ದೊರೆಯುವದು. ಹಾಗು ಸ್ತನಗಳು ಎಲ್ಲಿಯವರೆಗೆ ಬಿರುಸಾಗಿರು

ವವ್ರೋ ಅಲ್ಲಿಯವರೆಗೆ ಸ್ತ್ರೀಯರಿಗೆ ದೊರೆಯುವದು ಎಂಬುದು ಈ ಶ್ಲೋಕದ ಅರ್ಥವಾಗಿರುವದು, ಅರ್ಥಾತ್ ಮುದುಕನು ಹಾಗು ಜೋಲು ಬಿಪ್ಪ ಮೊಲೆಯುವಳು ನಡೆಸುವಂಥ ಸಂಭೋಗಕ್ರಿಯೆಯಿಂದ ಯಾರಿಗೂ ಸಂತೋಷವು ದೊರೆಯುವದಿಲ್ಲ. ಅಂಥದು ಕೇವಲ ಹೃದಯಪಿಪಾಸೆಯನ್ನು ತೀರಿಸಿಕೊಳ್ಳಲೋಸುಗ ನಡೆಸುವಂಥದಾಗಿರುವದು.

ಏತತ್ ಕಾಮ ಫಲಂ ಲೋಕೇಯದ್ ದ್ವಯೋರೇಕ ಚಿತ್ತತಾ |
ಅನ್ಯಾಚಿತ್‌ಕೃತೇ ಕಾಮೇ ಶವಯೋರಿವ ಸಂಗಮಃ || ೨೯ ||

ಸಮಾಗಮದ ಸಮಯದಲ್ಲಿ ಸ್ತ್ರೀ—ಪುರುಷರು ಏಕಚಿತ್ತರಾಗುವದು ಅತ್ಯಾವಶ್ಯಕವಾಗಿರುವದು. ಒಂದು ವೇಳೆ ಸಂಭೋಗದ ಸಮಯದಲ್ಲಿ ಅವರ—ಸ್ತ್ರೀಪುರುಷರ—ಚಿತ್ತಗಳು ಒಂದಾಗಿರದಿದ್ದರೆ ಅಂಥ ಸಂಭೋಗವು ಸಂಭೋಗವೆನ್ನಿಸುವದೇ ಇಲ್ಲ. ಅದು ಶವಗಳ ಸಂಭೋಗವೆನ್ನಿಸುವದು.

ಈ ಶ್ಲೋಕದ ಸಾರಾಂಶವಿಷ್ಟೆ : ಚುಂಬನದ ಸಮಯದಲ್ಲಿ ತರುಣ—ತರುಣಿಯರ ಹೃದಯಗಳು ಒಂದಾಗಿರದಿದ್ದರೆ ಚುಂಬನದಲ್ಲಿ ಆನಂದವು ಹೇಗೆ ದೊರೆಯುವದಿಲ್ಲವೋ ಹಾಗೆ ಸಮಾಗಮದ ಸಮಯದಲ್ಲಿಯೂ ಅವರೀರ್ವರೂ ಏಕಚಿತ್ತರಾಗಿರದಿದ್ದರೆ ಸಮಾಗಮದ ಆನಂದವು ದೊರೆಯದೇ ಹೋಗುವದು. ಏಕೆಂದರೆ ಸಮಾಗಮದ ಸಮಯದಲ್ಲಿ ಅವರೀರ್ವರ ಚಿತ್ತಗಳು ಒಂದಾಗುವದು ಅವಶ್ಯವಾಗಿದೆ. ಅಂತೆಯೇ ಕಾಮಶಾಸ್ತ್ರಕಾರರು ಆಬಗ್ಗೆ ಬಹಳಷ್ಟು ವ್ಯಾಖ್ಯೆಗಳನ್ನು ಕೊಟ್ಟಿರುವರು. *

ಪ್ರಣಯ ಮಧುರಾಃ ಪ್ರೇಮೋದ್ ಗಾಢಾ ರಸಾದಲಸಾಸ್ಥಥಾ
ಭಣಿತಿ ಮಧುರಾ ಮುಗ್ಧಪ್ರಾಯಾಃ ಪ್ರಕಾಶಿತಸಮ್ಮದಾಃ |

* ಈ ಬಗ್ಗೆ ಹೆಚ್ಚಿನ ವಿವರಗಳನ್ನು ಬಯಸುವವರು ಇದೇ ಪ್ರಕಾಶಕರಿಂದ ಪ್ರಕಟಿತವಾದಂಥ "ರತಿ ವಿಜ್ಞಾನ, ದಾಂಪತ್ಯ ರಹಸ್ಯ ಹಾಗು ರತಿವಿಹಾರ"ಗಳನ್ನು ಓದಿರಿ

ಪ್ರಕೃತಿ ಸುಭಗಾ ವಿಶ್ರಂಭಾಹರ್ಾಃ ಸ್ಮರೋದಯದಾಯಿನೋ
ರಹಸಿಕಿಮಪಿ ಸ್ವೈರಾಲಾಪಾ ಹರಂತಿ ಮೃಗೀದೃಶಾಮ್ || ೩೦ ||

ಹರಿಣಾಕ್ಷಿಯರಾದ ಕಾಮಿನಿಯರ ಪ್ರಣಯ ಪ್ರೀತಿಯಿಂದ ಮಧುರ ಪ್ರೇಮರಸದಿಂದ ಶಿಥಿಲ, ಅಧಿಕ ಕಾಮದಿಂದಾಗಿ ಮಂದ, ಕೇಳಲು ಆನಂದ ಪ್ರದ, ಬಹುಶಃ ಅಸ್ಪಷ್ಟ ಹಾಗು ಸರಿಯಾಗಿ ತಿಳಿಯಲಾರದಂಥ, ಸಹಜ ಸುಂದರ, ವಿಶ್ವಾಸ ಯೋಗ್ಯ ಮತ್ತು ಕಾಮೋದ್ದೀಪನಗೊಳಿಸುವಂಥ ಮಾತುಗಳನ್ನು ಸ್ವಚ್ಛಂದಪೂರ್ವಕವಾಗಿ ಏಕಾಂತದ ಸಮಯದಲ್ಲಿ ಹೇಳಿದ್ದಾದರೆ ಕೇಳುವವರ ಮನವನ್ನು ಖಂಡಿತಕ್ಕೂ ಗೆಲ್ಲಬಹುದಾಗಿದೆ. ಅಂದರೆ :

ಹರಿಣಾಕ್ಷಿಯರ ಮಧುವಿನಂತಹ ಮಧುರವಾಣಿಯಲ್ಲಿ ಮೋಡಿಯ ಸಾಮರ್ಥ್ಯವಿರುತ್ತದೆ. ಅವರ ಅಮೃತಮಯ ವಾಕ್ಯಗಳು ಕಾಮುಕ ಪುರುಷರ ಮೇಲೆ ಭಯಂಕರ ಪರಿಣಾಮವನ್ನುಂಟು ಮಾಡುವವು. ಹಾಗು ಸ್ತ್ರೀಯು ಹೇಳಿದಂತೆ ಕೇಳಲು ಅವರು; ಹಿಂದೆ ಮುಂದೆ ನೋಡುವುದೇ ಇಲ್ಲವೆಂಬುದು ಈ ಶ್ಲೋಕದ ಅರ್ಥವಾಗಿರುವುದು.

ಆವಾಸಃ ಕ್ರಿಯತಾಂ ಗಾಂಗೇ ಪಾಪಹಾರಿಣಿ ವಾರಿಣಿ |
ಸ್ತನ ಮಧ್ಯೇ ತರುಣ್ಯಾ ವಾ ಮನೋ ಹಾರಿಣಿ ಹಾರಿಣಿ ||೩೧||

ಪಾಪ ಹಾಗು ತಾಪ ನಾಶಿನಿಯಾದ ಗಂಗಾ ತೀರದಲ್ಲಿ ಕುಳಿತುಕೊಳ್ಳಬೇಕು. ಇಲ್ಲವೆ ಮನೋಹರವಾದ ಹಾರವನ್ನು ಧರಿಸಿಕೊಂಡಿರುವ ತರುಣಿಯರ ಸ್ತನಗಳ ಮಧ್ಯದಲ್ಲಾದರೂ ವಾಸಿಸತಕ್ಕದ್ದು. ಅಂದರೆ:

ಎರಡರಲ್ಲಿ ಯಾವುದಾದರೊಂದು ಕಾರ್ಯವನ್ನು ಮಾಡತಕ್ಕದ್ದು. ಪಾಪ ನಾಶಿನಿಯಾದ ಗಂಗೆಯ ತೀರದಲ್ಲಿ ಕುಳಿತುಕೊಂಡು ಭಗವಂತನ ಚಿಂತನೆಯಲ್ಲಿ ಮಗ್ನರಾಗಬೇಕು. ಇಲ್ಲವೆ ಮುತ್ತಿನ ಹಾರಗಳನ್ನು ಧರಿಸಿ

ದಂಥ ಹೃದಯ ಹಾರಿಣಿಯರ ಕಠೋರ ಕುಚಗಳ ಮಧ್ಯದಲ್ಲಿ ತಲೆಯನ್ನಿರಿಸಿ ಕಾಮ ದೇವನ ಚಿಂತನೆಯನ್ನು ಮಾಡಬೇಕು. ಇವೆರಡರಲ್ಲಿ ಯಾವುದಾದ ರೊಂದನ್ನು ಮಾಡತಕ್ಕದ್ದು.

ಈ ಜಗತ್ತಿನಲ್ಲಿ ಕಾಮುಕ ಪುರುಷರಿಗಾಗಿ ನವ ಯುವತಿಯರ ಬಿರು ಸಾದ ಕುಚಗಳು ಹಾಗು ಸ್ಥೂಲವಾದ ಜಘನಗಳು ಇವುಗಳಿಗಿಂತ ಹೆಚ್ಚಿನ ಸುಖವನ್ನಿಯುವ ವಸ್ತುಗಳು ಬೇರೊಂದಿಲ್ಲವೆಂದು ಹೇಳಬಹುದು. ಆದ ಕ್ಕಾಗಿ ಅವನು ತನಗೆ ಬೇಕಾದ ವಸ್ತುಗಳನ್ನೇ ಸೇವಿಸಿ ಆನಂದ ಪಡೆಯ ಬೇಕು. ಹಾಗು ತನ್ನ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಬೇಕು. ಅದೇ ರೀತಿಯಾಗಿ ಯಾವನಿಗೆ ಈ ಸಂಸಾರವು ನಿಃಸಾರವೂ, ಅಪ್ರಯೋಜಕವೂ ಎಂದು ಕಂಡು ಕಂಡು ಬಂದಿರುವುದೋ ಅವರು ಹೆಣ್ಣನ್ನು ತ್ಯಜಿಸಿ ಈಶ ಚಿಂತ ನೆಯಲ್ಲಿ ಕಾಲಯಾಪನೆ ಮಾಡಬೇಕು.

ಪ್ರಿಯ ಪುರತೋ ಯುವತಿನಾಂ ತಾರತ್ವದ ಮಾತನೋತು ಹೃದಿ
ಮಾನಃ ।
ಭವತಿ ನ ಯಾವಚ್ಚಂದನ ತರುಸುರ ಭಿರ್ಮದು ಸುನಿರ್ಮಲ—
—ಪವನಃ ॥೩೨॥

ಮಾನಿನಿಯರಾದ ಕಾಮಿನಿಯರ ಹೃದಯಗಳಲ್ಲಿ, ಮಲಯಾಚಲದ ಮಂದ ಮಾರುತನು ಚಂದನದ ವೃಕ್ಷಗಳ ಪರಿಮಳವನ್ನು ಹೊತ್ತುಕೊಂಡು ಎಲ್ಲಿಯವರೆಗೆ ಬೀಸುವದಿಲ್ಲವೋ ಅಲ್ಲಿಯವರೆಗೆ ತಮ್ಮ ಪ್ರಿಯತಮರ ಬಗ್ಗೆ ಸಮ್ಮಾನವು ಉಳಿಯುವದು.

ತರುಣಿಯರು ಎಂಥ ಕಠೋರ ಹೃದಯಿಗಳೇ ಆಗಿರಲಿ, ಎಷ್ಟೊಂದು ಸಾಂತ್ವನಗೊಳಿಸಿದರೂ ತಮ್ಮ ಬಿಂಕವನ್ನು ಬಿಡಲಾರದಂಥವರಿರಲಿ. ಅಂಥ ವರಿಗೆ ಒಂದು ಸಳಿ ಕೋಗಿಲೆಯ ಕಿಲರವವು, ಹಾಗು ಮಲಯಾಚಲದ ಪರಿ ಮಳ ಪೂರಿತ ಮಂದ ಮಾರುತವು ಕೊಂಚ ಸ್ಪರ್ಶಿಸಿದರೆ ಸಾಕು. ಅವರು

–ತರುಣಿಯರು—ಕರಗಿ ನೀರಾಗಿ ಬಿಡುವರು. ತಾವಾಗಿಯೆ ತಮ್ಮ ಪ್ರಿಯತಮರನ್ನು ಅರಸುತ್ತ ಹೋಗಿ ಅವರ ಎದೆಯ ಮೇಲೊರಗುವರು. ಒಟ್ಟಿನ ಮೇಲೆ ತಾತ್ಪರ್ಯ ವಿಷ್ಟೆ. ಎಂಥ ಕತೋರ ಹೃದಯದ ಸ್ತ್ರೀ ಇದ್ದರೂ ಮಲಯಪವನವು ಬೀಸುತ್ತಲೆ ತಂತಾನೆ ದಾರಿಗೆ ಬರುವಳು.

ಭೋಗಾದಿ ಲಕ್ಷಣ ಮುಗಿಯಿತು.



# ವಸಂತ ಋತು ವರ್ಣನೆ

ಪರಿಮಲ ಭೃತೋ ವಾತಾಃ ಶಾಖಾ ನವಾಂಕುರ ಕೋಟಯೋ
ಮಧುರವಿ ರುತೋತ್ಕಂಠಾ ವಾಚಾಃ ಪ್ರಿಯಾಃ ಪಿಕ ಪಕ್ಷಿಣಾಮ್ ।
ವಿರಲ ಸುರತ ಸ್ವೇದೋದ್ ಗಾರಾ ವಧು ವದನೇ ನ್ದವಃ
ಪ್ರಸರತಿ ಮಧೌ ರಾತ್ರ್ಯಾಂ ಜಾತೋ ನ ಕಸ್ಯ ಗುಣೋದಯಃ ॥೩೩॥

ಪರಿಮಳಯುಕ್ತ ಪವನವು ಸುಳಿಯಲು ಪ್ರಾರಂಭಿಸಿದೊಡನೆ ವೃಕ್ಷಗಳ ಶಾಖೋಪ ಶಾಖೆಗಳಲ್ಲಿ ನವ—ನವೀನ ಪಲ್ಲವಗಳು-ಚಿಗುರೆಲೆಗಳು-ಕಾಣಿಸಿ ಕೊಳ್ಳ ತೊಡಗುವವು. ಕೋಗಿಲೆಗಳು ಮತ್ತಗೊಂಡ ಮಧುರ ಕಲರವವನ್ನು ಮಾಡತೊಡಗುತ್ತವೆ. ಸ್ತ್ರೀಯರ ಮುಖ ಕಮಲದ ಮೇಲೆ ಮೈಥುನ ಪರಿ ಶ್ರಮದಿಂದ ಹೊರಟ ಬೆವರಿನ ಚಿಕ್ಕ ಚಿಕ್ಕ ಬಿಂದುಗಳು ಉಲ್ಲಾಸವನ್ನೀಯು ತೊಡಗಿವೆ. ಈ ರೀತಿಯಾಗಿರುವಂಥ ಆ ವಸಂತದ ರಾತ್ರಿಯಲ್ಲಿ ಕಾಮವು ಯಾರನ್ನು ಪೀಡಿಸಲಿಕ್ಕಿಲ್ಲ ?

ವಸಂತನು ಕಾಮದೇವನ ಜೊತೆಗಾರನಾಗಿದ್ದಂತೆ ಋತುಗಳ ಒಡೆಯನೂ ಆಗಿರುವನು. ಆ ಋತುವಿನಲ್ಲಿ ಸುಗಂಧ ಮಿಶ್ರಿತ ಪವನವು ಬೀಸ ತೊಡಗುವದು. ವೃಕ್ಷಗಳು ಚಿಗುರೆಲೆ, ಹೂವು ಹಾಗು ಮೊಗ್ಗುಗಳಿಂದ ಪರಿಶೋಭಿಸ ತೊಡಗುತ್ತವೆ. ಆ ಋತುವಿನಲ್ಲಿಯ ಸಾಯಂಕಾಲದ ಸಮಯ ವಂತೂ ತೀರ ರಮಣೀಯವಾಗಿರುತ್ತದೆ. ಅಂತೆಯೇ ಎಂಥ ಸ್ತ್ರೀಯರೂ ಆಗ ಅನುರಾಗ ಪ್ರೇರಿತರಾಗುವರು. ತಮ್ಮ ಪ್ರಿಯರತ್ತ ಒಲಿಯುವರು. ಆ ಋತುವಿನಲ್ಲಿ ಪ್ರತಿಯೊಂದು ವಸ್ತುವೂ ಸುಮನೋಹರವಾಗಿ ಕಾಣಿಸು ವದು. ತಾತ್ಪರ್ಯವಿಷ್ಟೆ : ವಸಂತಕಾಲದಲ್ಲಿ ಎಲ್ಲರ—ಎಲ್ಲ ಪ್ರಾಣಿಗಳ ಅಭಿಲಾಷೆಯು ಹೆಚ್ಚಿದಂತೆ ಕಾಮವಾಸನೆಯೂ ಹೆಚ್ಚಾಗುವದು.

ಮಧುರಯಂ ಮಧುರೈರಪಿ ಕೋಕಿಲಾ
ಕಲ ಕಲೈರ್ಮಲಯಸ್ಯ ಚ ವಾಯು ಭಿಃ ।
ವಿರಹಿಣಃ ಪ್ರಣಿಹಂತಿ ಶರೀರಿಣೋ
ವಿಪದಿ ಹಂತ ಸುಧಾಪಿ ವಿಷಾಯತೇ ॥೩೪॥

ಋತುಗಳೊಡೆಯನಾದ ವಸಂತನ ಆಗಮನ, ಕೋಗಿಲೆಗಳ ಮಧುರ ಕೂಗು ಹಾಗು ಮಲಯಾಚಲದಿಂದ ಬೀಸುವ ಪರಿಮಳಯುಕ್ತ ಪವನ ಇವು ಗಳು ವಿರಹಿಗಳಾದಂಥ ಸ್ತ್ರೀ—ಪುರುಷರ ಪ್ರಾಣಗಳನ್ನು ನಾಶಮಾಡುವವು. ಪ್ರಾಣಿಗಳ ವಿಪತ್ತಿನ ಸಮಯದಲ್ಲಿ ಅಮೃತವೂ ವಿಷವಾಗುವದು; ಅತ್ಯಂತ ದುಃಖದ ವಿಷಯವಾಗಿರುವದು.

ಕೋಗಿಲೆಗಳ ಮಧುರ ಕಲರವ ಹಾಗು ಮಲಯಾಚಲದ ಸುಗಂಧ ಮಿಶ್ರಿತ ಸುಳಿಗಾಳಿ ಇವುಗಳು ಪ್ರಾಣಿ ಮಾತ್ರರಲ್ಲಿ ನವಜೀವನವನ್ನು, ನವ ಚೈತನ್ಯವನ್ನು ಉದಯಗೊಳಿಸುತ್ತವೆ. ಅಂದರೆ ಅವು ಎಂಥ ಕಟುಕರ ಹೃದಯ ದಲ್ಲಿಯೂ ಅನುರಾಗವನ್ನು ಹುಟ್ಟಿಸುವವು. ಎಲ್ಲರ ಮುಖದ ಮೇಲೆ ಪ್ರಸನ್ನತೆಯನ್ನು ತರುವದು. ಆದರೆ ವಿರಹಿಗಳಿಗೆ ಮಾತ್ರ—ಪರಸ್ಪರರು ಅಗಲಿದಂಥ ಸ್ತ್ರೀ—ಪುರುಷರಿಗೆ ಮಾತ್ರ—ಇದು ಅತ್ಯಂತ ಶೋಕದಾಯಕ ಸನ್ನಿವೇಶವನ್ನು ತರುವದು. ವಸಂತ ಮಾಸದಲ್ಲಿ ವಿರಹಿಗಳಾದ ತರುಣ-ತರು ಣಿಯರು ನೀರಿನಿಂದ ಹೊರಗೆ ತೆಗೆದ ಮೀನುಗಳಂತೆ ಚಡಪಡಿಸುವರು. ವಿಪತ್ತು ಬಂದೊದಗಿದಾಗ ಚಿನ್ನಕ್ಕೆ ಕೈಹಚ್ಚಿದರೆ ಅದು ಮಣ್ಣಾಗುತ್ತದೆಂದು ಹೇಳುವ ಮಾತು ಸುಳ್ಳಲ್ಲ. ಅಂತೆಯೇ ಎಲ್ಲರಲ್ಲಿ ಚೈತನ್ಯವನ್ನು ಹುಟ್ಟಿ ಸುವಂಥ ಅಮೃತಮಯವಾದ ವಸಂತಮಾಸವು ವಿರಹಿಗಳಿಗೆ ಮಾತ್ರ ವಿಷ ವಾಗಿ ಪರಿಣಮಿಸುವದು.

ಆವಾಸಃ ಕಿಲ ಕಿಂಚಿದೇವ ದಯಿತಾ ಪಾರ್ಶ್ವೆ ವಿಲಾಸಾಲಸಃ
ಕರ್ಣೇ ಕೋಕಿಲ ಕಾಕಲೀಕ ಸ್ಮೇರೋ ಲತಾಮಂಡಪಃ ।

ಗೋಷ್ಟಿ ಸತ್ಕವಿಭಿಃ ಸಮಂ ಕತಿಪಯೈಃ ಸೇವ್ಯಾಃ ಸಿತಾಂಶೋಃ ಕರಾಃ
ಕೇಷಾಂಚಿತ್ಸುಖಯಂತಿ ನೇತ್ರ ಹೃದಯೇ ಚೈತ್ರೇ ವಿಚಿತ್ರಾಃ
ಕ್ಷಪಾಃ ||೩೫||

ಭೋಗ ವಿಲಾಸದಿಂದಾದ ಶ್ರಮದಿಂದ ಶಿಥಿಲ ದೇಹಿಯಾಗಿ ಕೊಂಚ ಸಮಯದವರೆಗೆ ತನ್ನ ಪ್ರಿಯತಮೆಯ ಬಳಿ ವಿಶ್ರಾಂತಿ ಪಡೆಯುವದು, ಕೋಗಿಲೆಗಳ ಮಧುರ ಸ್ವರವನ್ನು ಆಲಿಸುವದು, ಪ್ರಪುಲ್ಲಿತವಾದ, ಸುಮನೋಹರವಾದ ಲತಾಮಂಟಪದ ಕೆಳಗೆ ತಿರುಗಾಡುವದು, ಸುಂದರ ಕವಿಗಳೊಂದಿಗೆ ಚರ್ಚೆ ಮಾಡುವದು, ಹಾಗು ಚಂದ್ರನ ಶೀತಲವಾದ ಬೆಳಕನ್ನು ವೀಕ್ಷಿಸುವದೇ ಮೊದಲಾದ ಸಾಮಗ್ರಿಗಳಿಂದ ಕೂಡಿದಂಥ ಚೈತ್ರ ಮಾಸದ ವಿಚಿತ್ರ ರಾತ್ರಿಗಳು ಎಲ್ಲಿಯೋ ಒಬ್ಬ ಭಾಗ್ಯವಂತನಿಗೆ ದೊರೆಯುತ್ತವೆಯೇ ವಿನಾ ಎಲ್ಲರಿಗೂ ದೊರೆಯುವದು ಸಾಧ್ಯವಿಲ್ಲ.

ಕೋಗಿಲೆಗಳ ಮಧುರ ನಿನಾದ, ಪುಷ್ಪಭರಿತವಾದ ತರು—ಲತೆಗಳು, ತಿಂಗಳಿನ ತಂಬೆಳಕು, ಶ್ರೇಷ್ಠ ಕವಿವರ್ಯರೊಬ್ಬರು ಮಾಡುತ್ತಿರುವ ಕಮ್ಮ ಕವಿತೆಗಳ ಉಜಳಣಿ ಇವುಗಳನ್ನೆಲ್ಲ ಸಂಭೋಗ ಕ್ರಿಯೆಯಿಂದ ದಣಿದು ತನ್ನ ಪ್ರಿಯತಮೆಯೊಂದಿಗೆ ವಿಶ್ರಾಂತಿ ಪಡೆಯುತ್ತಿರುವವನಿಗೆ ಕಂಡು ಬಂದರೆ ಅರ್ಥಾತ್ ವಸಂತಮಾಸದ ರಾತ್ರಿಯಲ್ಲಿ ಇಂಥವುಗಳೆಲ್ಲ ಗೋಚರವಾದರೆ ನಿಜಕ್ಕೂ ಅವನು ಭಾಗ್ಯಶಾಲಿಯೆಂದು ಭಾವಿಸಬೇಕು. ಅಂಥ ಸ್ವರ್ಗೀಯ ಸನ್ನಿವೇಶವು ಪೂರ್ವಜನ್ಮದಲ್ಲಿ ಪುಣ್ಯ ಮಾಡಿದವನಿಗೇ ದೊರೆಯುವದು. ಒಟ್ಟಿನಲ್ಲಿ ಈ ಶ್ಲೋಕದ ಅರ್ಥವಿಷ್ಟೆ: ಚೈತ್ರಮಾಸದ ಬೆಳದಿಂಗಳಿನ ರಾತ್ರಿಯಲ್ಲಿ ತನ್ನ ಪತ್ನಿಯೊಂದಿಗೆ ಮನೆಯ ಮಾಳಿಗೆಯ ಮೇಲೆ ಕುಳಿತು ಆನಂದವನ್ನು ಪಡೆಯುವದು ಭಾಗ್ಯವಂತರಿಗೆ ಮಾತ್ರ ಸಾಧ್ಯ.

ಪಾಂಥ ಸ್ತ್ರೀ ವಿರಹಾನ ಲಾಹುತಿ ಕಥಾ ಮಾಡನ್ವತಿ ಮಂಜರಿ
ಮಾಕಂದೇಷು ಪಿಕಾಂಗನಾ ಭಿರುಧುನಾ ಸೋತ್ಕಂಠ ಮಾಲೋಕ್ಯತೇ|
ಅಪ್ಯೇತೇ ನವಪಾಮಾ ಪರಿಮಲ ಪ್ರಾಗ್ಭಾರ ಪಾಟಚ್ಚರಾ
ವಾಂತಿಕ್ಲಾಂತಿ ವಿತಾನತಾನ ವಕೃತಾಃ ಶ್ರೀಖಂಡ ಶೈಲಾ ನಿಲಾಃ||೩೬||

ಈ ವಸಂತ ಮಾಸದೊಳಗೆ ವೃಷ್ಟಿಹಾಯಿಸಿದತ್ತ ವಿರಹ ವ್ಯಾಕುಲರಾದ ತರುಣಿಯರ ವಿರಹಾಗ್ನಿಯೊಳಗೆ ಆಹುತಿಯ ಕಾರ್ಯವನ್ನೀಯುವಂಥ ಮಾವಿನಮರದ ಶಾಖೆ-ಶಾಖೆಗಳು ಚಿಗಿತು ಹೂಗೊಂಚಲಗಳು ಅರಳತೊಡಗಿವೆ. ನೇರಿಳೆವೃಕ್ಷದ ಮೇಲೆ ಕುಳಿತ ಕೋಗಿಲೆಯು ಆ ಹೂಗೊಂಚಲಗಳನ್ನು ತದೇಕಚಿತ್ತದಿಂದ ನೋಡ ತೊಡಗಿದೆ. ಪುಷ್ಪಗಳ ಸುಗಂಧವನ್ನು ಹರಣ ಮಾಡುವಂಥ ಹಾಗು ಮಾರ್ಗಾಯಾಸದ ಬಳಲಿಕೆಯನ್ನು ಹೋಗಲಾಡಿಸುವಂಥ ಶ್ರೀಶೈಲಖಂಡ*ದಿಂದ ಬರುವ ಮಲಯ ಪವನವು ಬೀಸತೊಡಗಿರುವದು.

ಈ ಶ್ಲೋಕದಲ್ಲಿ ಋತುಗಳೊಡೆಯನಾದ ವಸಂತನ ಸ್ವಾಭಾವಿಕವಾದ, ಸಹಜವಾದ ಮಹಿಮೆಯ-ವರ್ಣನೆಯನ್ನು ಚಿತ್ರಿಸಲಾಗಿರುವದು. ನಿಜಕ್ಕೂ ವಸಂತ ಮಾಸವು ಅಷ್ಟೊಂದು ಮೋಹಕವಾದುದಾಗಿರುತ್ತದೆ. ಅಲ್ಲದೆ ಆಗ ಮಾವಿನಗಿಡಗಳಿಗೆ ಒಂದು ಬಗೆಯ ನೂತನ ಸೌಂದರ್ಯವೇ ಪ್ರಾಪ್ತವಾಗಿರುತ್ತದೆ. ವಸಂತಮಾಸದ ಮಾವಿನಗಿಡಗಳ ಸೌಂದರ್ಯವನ್ನು ಕನ್ನಡ ಕವಿಗಳೂ ಸಾಕಷ್ಟು ವರ್ಣಿಸಿದ್ದು ಅವರಲ್ಲಿ "ಕಾದಂಬರಿ"ಯ ಕರ್ತೃ ನಾಗವರ್ಮನು ಮುಖ್ಯನಾಗಿದ್ದಾನೆ. ಇರಲಿ. ಮಾವಿನ ಮರದ ಮಂಜರಿಗಳು ಅರಳುವದು, ಕೋಗಿಲೆಗಳು ಅವುಗಳನ್ನು—ಅರಳಿದ ಆ ಮಂಜರಿಗಳನ್ನು—ಉತ್ಕಂಠೆಯಿಂದ ನೋಡುವದು, ಹಾಗು ಮಲಯಾಚಲದ ಶೀತಲ ಪವನವು ಬೀಸುವದು; ಇವುಗಳೆಲ್ಲ ವಸಂತಾಗಮನದ ಚಿಹ್ನೆಗಳಾಗಿರುವವು.

---

* ಮಲಯಾಚಲ ಪರ್ವತವನ್ನು ಶ್ರೀಖಂಡಶೈಲವೆಂಬ ಬೇರೊಂದು ಹೆಸರಿನಿಂದಲೂ ಕರೆಯುವರು. ಮಲಯಾಚಲವು ಭಾರತದ ಪ್ರಮುಖ ಏಳು ಪರ್ವತ ಶ್ರೇಣಿಗಳಲ್ಲೊಂದಾಗಿರುವದು. ಮಲಯಾಚಲವು ಮೈಸೂರಿನ ದಕ್ಷಿಣದಿಂದ ಪ್ರಾರಂಭವಾಗಿ ತ್ರಾವಣಕೋರದ ಪೂರ್ವದಿಶೆಗೆ ಮುಕ್ತಾಯವಾಗಿರುವಂಥ ಪರ್ವತಾವಳಿಯೇ ಆಗಿರುವದೆಂದು ಕೆಲವರ ಅಭಿಪ್ರಾಯವಾಗಿರುವದು. ಮತ್ತೆ ಕೆಲವರು ಬೇರೆಯುದನ್ನು ತೋರಿಸುವರು. ಈ ಬಗ್ಗೆ ಯಾವುದೂ ನಿರ್ದಿಷ್ಟವಾಗಿಲ್ಲ.

ಸಹಕಾರ ಕುಸುಮ ಕೇಸರ ನಿಕರ ಭರಾ ಮೋದ ಮೂರ್ಚ್ಛಿತ
ದಿಗಂತೇ |
ಮಧುರ ಮಧು ವಿಧುರ ಮಧುಪೇ ಮಧೌ ಭವೇತ್ಕಸ್ಯ
ನೋತ್ಕಂಠಾ || ೩೭ ||

ಮಾವಿನ ಮಂಜರಿಗಳ ಕೇಶರದ ದಟ್ಟವಾದ ಪರಿಮಳದಿಂದ ದಶದಿಕ್ಕು ಗಳೂ ಸುಗಂಧಮಯವಾಗತೊಡಗಿವೆ. ಭ್ರಮರಗಳು ಮಧುರವಾದ ಮಧು-ಮಕರಂದಗಳನ್ನು ಕುಡಿ-ಕುಡಿದು ಮತ್ತವಾಗತೊಡಗಿವೆ. ಇಂತಹ ವಸಂತ ಮಾಸದಲ್ಲಿ ಯಾವನ ಮನದೊಳಗೆ ಕಾಮವಾಸನೆಯು ಉತ್ಪನ್ನವಾಗಲಿಕ್ಕಿಲ್ಲ? ಅರ್ಥಾತ್ ಎಂಥವರ ಮನದೊಳಗೂ ಉತ್ಪನ್ನವಾಗುವದು; ಸಹಜವಾಗಿದೆ.

ಮಾವಿನ ಪುಷ್ಪಗಳ ಸುಗಂಧದಿಂದ ದಶದಿಕ್ಕುಗಳು ಪರಿಮಳಯುಕ್ತ ವಾಗತೊಡಗುವವು. ಪರಾಗ ಪ್ರೇಮಿಗಳಾದ ಭ್ರಮರಗಳು ಮಧುವನ್ನು ಕುಡಿದು ಉನ್ಮತ್ತವಾಗುವವು. ಅಂಥ ಸಮಯದಲ್ಲಿ ಬಹುಶಃ ಎಲ್ಲ ಪ್ರಾಣಿ ಗಳಲ್ಲಿಯೂ ಕಾಮವಾಸನೆಯು ಜಾಗ್ರತವಾಗುವದು. ಅಂದಾಗ ಮಾನವರ ಪಾಡೇನು ? ಅಂತೆಯೇ ವಸಂತ ಮಾಸದಲ್ಲಿ ಪುರುಷರು ಸ್ತ್ರೀಯರತ್ತ, ಸ್ತ್ರೀಯರು ಪುರುಷರತ್ತ ಸ್ವಾಭಾವಿಕವಾಗಿಯೇ ಆಕರ್ಷಿತರಾಗುವರು; ಎಂಬುದು ಈ ಶ್ಲೋಕದ ಸಾರವಾಗಿದೆ.

ವಸಂತ ಋತು ವರ್ಣನೆ ಮುಗಿಯಿತು.



# ಗ್ರೀಷ್ಮ ಋತು ವರ್ಣನೆ

ಅಚ್ಛಾಚ್ಛ ಚಂದನ ರಸಾರ್ದ್ರ ಕರಾ ಮೃಗಾ ಕ್ಷ್ಯೋ
ಧಾರಾಗೃಹಾಣಿ ಕುಸುಮಾನಿ ಚ ಕೌಮುದಿ ಚ ।
ಮಂದೋ ಮರುತ್ಸು ಮನಸಃ ಶುಚಿ ಹರ್ಮ್ಯ ಪೃಷ್ಠಮ್
ಗ್ರೀಷ್ಮೇಮಂದಚ ಮದನಂಚ ವಿವರ್ಧಯಂತಿ ||೩೮||

ಅತ್ಯಂತ ಶುಭ್ರವಾದ ಚಂದನವನ್ನು ಕೈಗೆ ಲೇಪಿಸಿಕೊಂಡಿರುವಂಥ ಹರಿಣಾಕ್ಷಿಯರಾದ ಸುಂದರಿಯರು, ವಿಶಾಲವಾದ ಹರ್ಮ್ಯ, ಪುಷ್ಪಗಳು, ಬೆಳದಿಂಗಳು, ಮಂದವಾದ ಶೀತಲ ಪವನ ಹಾಗು ಸ್ವಚ್ಛವಾದ ಮಾಳಿಗೆ–ಬಿಸಿಲು ಮಚ್ಚಿ—ಇವುಗಳೆಲ್ಲ ಬೇಸಿಗೆಯ ಕಾಲದಲ್ಲಿ ಮದ ಮತ್ತು ಮದನ ಇವೆರಡನ್ನೂ ವೃದ್ಧಿಗೊಳಿಸುತ್ತಿರುತ್ತವೆ.

ಸುಂದರಿಯ; ಕಮಲದಂತೆ ಮೃದುವಾಗಿರುವ ಕೈಗಳಿಗೆ ಚಂದನವು ತೆಳುವಾಗಿ ಲೇಪಿಸಲಾಗಿದೆ. ಮಂದ ಪವನವು ಸುಳಿಯುತ್ತಿದೆ. ಪುಷ್ಪಗಳಿಂದ ಆಚ್ಛಾದಿತವಾದ ಹಾಸುಗೆಯು ಸಿದ್ಧವಾಗಿದೆ. ಬೆಳದಿಂಗಳು ಹಿಟ್ಟು ಚಲ್ಲಿದಂತೆ ಬಿದ್ದಿದೆ. ವಿಶಾಲವಾದ ಭವನದ ಮೇಲ್ಭಾಗದಲ್ಲಿ ಪಲ್ಲಂಗವು ಸಿದ್ಧವಾಗಿದೆ. ಇಂಥ ಸಮಯದಲ್ಲಿ ನೀರಿನಲ್ಲಿ ತೋಯಿಸಿದಂಥ ಗಂಧದ ಬೀಸಣಿಕೆಯ ಗಾಳಿಯಿಂದ, ಎದುರಿಗೆ ಕುಳಿತಂಥ ಸುಂದರಿಯ ಸ್ತನ ಮಂಡಲಗಳನ್ನು ಎದೆಗಾನಿಸಿಕೊಳ್ಳುವದರಿಂದ ಹಾಗು ವೀಣೆಯ ಮಧುರ ಸ್ವರದ ಜೊತೆಗೆ ಹಾಡುಗಳನ್ನು ಕೇಳುವದರಿಂದ ದೀರ್ಘ ನಿದ್ರೆಯಲ್ಲಿದ್ದ ಕಾಮದೇವನು ಕೂಡ ಜಾಗ್ರತನಾಗುವನು, ಎಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ಸ್ರಜೋ ಹೃದ್ಯಾ ಮೋದಾ ವ್ಯಜನ ಪವನಶ್ಚಂದ್ರ ಕಿರಣಾಃ
ಪರಾಗಃ ಕಾಸಾರೋ ಮಲಯಜರಜಃ ಸೀಧು ವಿಶದಂ ।

ಶುಚಿಃ ಸೌಧೋತ್ಸಂಗಃ ಪ್ರತನುವಸನಂ ಪಂಕಜದೃಶೋ
ನಿದಾ ಘಾತರ್ತಾ ಹ್ಯೆತತ್ಸುಖ ಮುಪಲ ಭಂತೇ ಸುಕೃತಿನಃ ॥ ೩೯ ॥

ಮನೋಹರವಾದ ಸುಗಂಧಿತ–ಪರಿಮಳಯುಕ್ತ-ಮಾಲೆ, ಬೀಸಣಿಕೆಯ ಗಾಳಿ, ಚಂದ್ರನ ಶೀತಲ ಕಿರಣಗಳು, ಪುಷ್ಪಗಳ ಪರಾಗ, ವಿಶಾಲ ಸರೋವರ, ಚಂದನದ ಗಂಧ, ಉತ್ತಮವಾದ ಮದಿರೆ, ಭವನದ ಸ್ವಚ್ಛವಾದ ಮೇಲ್ಮಾಳಿಗೆ, ತೆಳ್ಳಗಿನ ಬಟ್ಟೆಗಳನ್ನು ಧರಿಸಿದ ಕಮಲನೇತ್ರೆಯಾದ ಸುಂದರಿ, ಇವೆಲ್ಲ ಉತ್ತಮೋತ್ತಮ ಪದಾರ್ಥಗಳನ್ನು ಎಲ್ಲಿಯೋ ಒಬ್ಬ—ಎಲ್ಲರೂ ಅಲ್ಲ—ಭಾಗ್ಯವಂತ ಪುರುಷನು ಉಪಯೋಗ ಮಾಡಿಕೊಳ್ಳುತ್ತಾನೆ.

ಬೇಸಿಗೆಯ ಕಾಲದಲ್ಲಿ ಮನೆಯ ಬಿಸಿಲು ಮಚ್ಚೆಯ ಮೇಲೆ ಕುಳಿತುಕೊಂಡಾಗ—ಕೊರಳೊಳಗೆ ಸುಗಂಧ ಪುಷ್ಪದ ಹಾರವನ್ನು ಹಾಕಿಕೊಂಡು–ಎದುರಿಗೆ ತೆಳುವಾದ ಶುಭ್ರ ಬಟ್ಟೆಗಳನ್ನು ಧರಿಸಿದಂಥ ರಮಣಿಯು ತನ್ನ ಕೋಮಲಕರದಿಂದ ನೀರಿನಲ್ಲಿ ಎದ್ದಿ ತೆಗೆದಂಥ ಗಂಧದ ಬೀಸಣಿಕೆಯಿಂದ ಗಾಳಿಯನ್ನು ಹಾಕುತ್ತಿರಬೇಕು. ಚಂದ್ರಮನ ಶೀತಲ ಬೆಳಕು ಎಲ್ಲ ಕಡೆಗೂ ಹರಡಿರಬೇಕು. ಅಂಥ ಸಮಯದಲ್ಲಿ ತರುಣಿಯೊಂದಿಗೆ ಸಮಾಗಮ ಸುಖವನ್ನು ಪಡೆಯುವಂಥ ಪುರುಷರು ಪೂರ್ವಜನ್ಮದಲ್ಲಿ ಬಹಳಷ್ಟು ಪುಣ್ಯವನ್ನು ಮಾಡಿರಬೇಕು. ಎಲ್ಲರಿಗೂ ಇಂಥ ಭಾಗ್ಯವು ದೊರೆಯುವದು ಸಾಧ್ಯವಿಲ್ಲ.

ಸುಧಾ ಶುಭ್ರಂ ಸ್ಫುರದಮಲ ರಶ್ಮಿಃ ಶಶಧರಃ
ಪ್ರಿಯಾ ವಕ್ತ್ರಾಂ ಭೋಜಂ ಮಲಯಜರಜಶ್ಚಾತಿ ಸುರಭಿಃ।
ಸ್ರಜೋ ಹೃದ್ಯಾಮೋದಾತದಿ ದಮಖಿಲಂ ರಾಗಿಣಿ ಜನೇ
ಕರೋತ್ಯಂತಃ ಕ್ಷೋಭಂ ನ ತು ವಿಷಯ ಸಂಸರ್ಗ
ವಿಮುಖೇ ॥ ೪೦ ॥

ಚೊಕ್ಕಟಗೊಳಿಸಿದ ಮನೆ, ನಿರ್ಮಲ ಕಿರಣಗಳುಳ್ಳ ಚಂದ್ರಬಿಂಬ, ಪ್ರಿಯತಮೆಯ ಮುಖ ಕಮಲ, ಚಂದನದ ಗಂಧ ಹಾಗು ಸುಗಂಧ ಪುಷ್ಪ

ಗಳ ಮಾಲೆ ಇವೆಲ್ಲ ವಸ್ತುಗಳು ಕಾಮುಕ ಪುರುಷನ ಮನದೊಳಗೆ ಅತ್ಯಂತ ಕ್ಷೋಭೆಯನ್ನುಂಟು ಮಾಡುವವು. ಆದರೆ ಇವು ವಿಷಯ ವಾಸನೆಯಿಂದ ವಿಮುಖರಾದ ಪುರುಷರ ಹೃದಯದೊಳಗೆ ಮಾತ್ರ ಯಾವುದೇ ಬಗೆಯ ಕ್ಷೋಭೆಯನ್ನು ಹುಟ್ಟಿಸಲಾರವು.

ಕಾಮುಕ ಪುರುಷರಿಗೆ, ಸುಂದರವಾದ ಮನೆ, ಪೂರ್ಣಚಂದ್ರನ ತಂಬೆಳಕು, ನಾನಾ ಬಗೆಯ ಪುಷ್ಪಗಳು, ಚಂದನವ ಗಂಧಗಳಂತಹ ಕಾಮೋತ್ತೇಜಕ ವಸ್ತುಗಳು ಸನಿಹದಲ್ಲಿದ್ದರೆ, ಅದೂ ಸುರಸುಂದರಿಯಾದ ಪ್ರಿಯತಮೆಯು ಪಕ್ಕದಲ್ಲಿದ್ದರೆ ಕೇಳುವದೇನು ? ಭೋಗವಿಲಾಸದ ಇಚ್ಛೆಯು ನಿಮಿಷ—ನಿಮಿಷಕ್ಕೆ ಹೆಚ್ಚುತ್ತಲೇ ಹೋಗುವದು. ಆದರೆ -

ಸಂಸಾರದ ಬಗೆಗೆ ಉದಾಸೀನತೆಯನ್ನು ತಳೆದವನಿಗೆ, ಚಂಚಲಮಯವಾದ ಸಂಸಾರವು ನಿಃಸಾರವಾದುದು; ಎಂಬುದನ್ನರಿತುಕೊಂಡು ವಿರಕ್ತನಾದಂಥವನಿಗೆ ಮೇಲೆ ಹೇಳಿದಂಥ ವಸ್ತುಗಳು ಏನೂ ಮಾಡಲಾರವು. ಅರ್ಥಾತ್ ಕಾಮೋತ್ತೇಜಕ ವಸ್ತುಗಳು ಅಂಥ ವಿರಕ್ತನಿಗೆ ಏನನ್ನೂ ಮಾಡಲಾರವು. ಅಂದರೆ ಅವನ ಮನದಲ್ಲಿ ಯಾವುದೇ ಬಗೆಯ ಕ್ಷೋಭೆಯುಂಟಾಗಲಾರದ ; ಎಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ಗ್ರೀಷ್ಮ ಋತು ವರ್ಣನೆ ಮುಗಿಯಿತು.



# ವರ್ಷಾ ಋತು ವರ್ಣನೆ

ತರುಣಿ ಚೈಷಾ ದೀಪಿತ ಕಾಮಾ ವಿಕಸಿತ ಜಾತೀ ಪುಷ್ಪ ಸುಗಂಧಿಃ |
ಉನ್ನತ ಪೀನ ಪಯೋಧರ ಭಾರಾ ಪ್ರಾವೃಟ್ ಕುರತೇ ಕಸ್ಯನ
ಹರ್ಷಂ ||೪೧||

ಕಾಮದೇವನ ಉದಯಕ್ಕೆ ಕಾರಣವಾದ, ಪ್ರಫುಲ್ಲಿತ ಮಾಲತೀ ಪುಷ್ಪಗಳ ಬಳ್ಳಿಗಳಿಂದ ಶೋಭಿಸುವ, ಅತ್ಯುತ್ತಮ ಸುಗಂಧವನ್ನು ಧಾರಣ ಮಾಡಿರುವ, ಉನ್ನತ ಪೀನ ಪಯೋಧರ ವರ್ಷಾ ಋತುವು ತಾರುಣ್ಯವತಿಯಾದ ಸ್ತ್ರೀಯಂತೆ ಯಾವನ ಮನದೊಳಗೆ ಹರ್ಷವನ್ನುಂಟು ಮಾಡಲಾರದು ?

ಹರಿಣಾಕ್ಷಿಯರಾದ ಸುಂದರ ತರುಣಿಯರು ಪುರುಷರ ಮನದೊಳಗೆ ಹರ್ಷವನ್ನು ಹುಟ್ಟಿಸುವಂತೆ ವರ್ಷಾ ಋತುವು ಕೂಡ ಪುರುಷರ ಮನದಲ್ಲಿ ಅನುರಾಗವನ್ನು ಹುಟ್ಟಿಸುವದು. ಏಕೆಂದರೆ ತರುಣಿಯರ ಭ್ರಮರಗಳ ಸಮು ದಾಯದಂತಹ ನೀಳವಾದ ಕೇಶರಾಶಿಯಿದ್ದಂತೆ ಮಳೆಗಾಲದಲ್ಲಿ ಮಾಲತೀ ಪುಷ್ಪಗಳ ಬಳ್ಳಿಗಳಿರುತ್ತವೆ. ಲೇಪಿಸಿಕೊಂಡ ಸುಗಂಧ ದ್ರವ್ಯಗಳಿಂದಾಗಿ ತರುಣಿಯರ ಶರೀರವು ಪರಿಮಳಯುಕ್ತವಾಗಿದ್ದರೆ, ವರ್ಷಾಋತು ರೂಪದ ತರುಣಿಯು ನಾನಾಬಗೆಯ ಪುಷ್ಪಗಳ ಸುಗಂಧದಿಂದ ಕೂಡಿಕೊಂಡಿರುವಳು. ಹೀಗಾಗಿ ನವ ತಾರುಣ್ಯವತಿಗೂ ಮತ್ತು ವರ್ಷಾಋತುವಿಗೂ ಸಾಕಷ್ಟು ಸಾಮ್ಯವಿರುವದರಿಂದ ಆ ಋತುವು ಪುರುಷರ ಮನದೊಳಗೆ ಅನುರಾಗವನ್ನು ಹುಟ್ಟಿಸುವದು.

ವಿಯದುಪಚಿತ ಮೇಘಂ ಭೂಮಯಃ ಕಂದಲಿನ್ಯೋ
ನವಕುಟಜಕದಂಬಾ ಮೋದಿನೋ ಗಂಧವಾಹಾಃ |
ಶಿಖಿಕುಲ ಕಲಕೇ ಕಾರಾವರಭ್ಯಾ ವನಾಂತಾಃ
ಸುಖಿನಮ ಸುಖಿನಂ ವಾ ಸರ್ವಮುತ್ಕಂಠಯಂತಿ ||೪೨||

ಮೇಘಗಳಿಂದ ಆಚ್ಛಾದಿತವಾದ ಆಕಾಶ, ನವ—ನವೀನ ಅಂಕುರಗಳಿಂದ ಪೂರ್ಣವಾದ ಪೃಥ್ವಿ, ಅದೇ ಅರಳಿದ ಕದಂಬದ ಪುಷ್ಪಗಳಿಂದ ಪರಿಮಳಯುಕ್ತವಾದ ಸುಳಿಗಾಳಿ, ಹಾಗು ನವಿಲಿನ ಹಿಂಡುಗಳ ಮನೋಹರ ವಾಣಿಯಿಂದ ತುಂಬಿಕೊಂಡಂಥ ರಮಣೀಯ ವನಪ್ರದೇಶಗಳು; ವರ್ಷಾ ಋತುವಿನಲ್ಲಿ ಸುಖಿ ಹಾಗು ದುಃಖಿಯಾದಂಥ ಎರಡೂ ಬಗೆಯ ಪುರುಷರಿಗೂ ಲವಲವಿಕೆಯನ್ನು ಹೆಚ್ಚಿಸುವದು.

ವರ್ಷಾ ಋತುವಿನಲ್ಲಿ ಕವಿದು ಬರುವ ಕಾರ್ಮೋಡಗಳಿಂದ, ಹಚ್ಚನೆಯ ಬಣ್ಣದ ಹೊದಿಕೆಯನ್ನು ಹೊದ್ದುಕೊಂಡಂತೆ ಕಾಣುವ ಪ್ರದೇಶಗಳಿಂದ, ಪರಿಮಳಯುಕ್ತವಾದ ಮಂದ ಪವನದಿಂದ ಹಾಗು ನವಿಲುಗಳ ಝೇಂಕಾರದಿಂದ ತುಂಬಿರುವಂಥ ವನ್ಯ ಪ್ರದೇಶಗಳು ಎಂಥವರ ಮನದಲ್ಲಿಯೂ—ಅವನು ಸುಖಿಯೇ ಇರಲಿ, ದುಃಖಿಯೇ ಇರಲಿ—ಸಮಾಗಮದ ಇಚ್ಛೆಯು ಉತ್ಪನ್ನವಾಗುವದು. ಏಕೆಂದರೆ ಆ ಋತುವಿನಲ್ಲಿ ಎತ್ತ ದೃಷ್ಟಿ ಹಾಯಿಸಿದರೂ ಮನಕ್ಕೆ ಉಲ್ಲಾಸವನ್ನೀಯುವಂಥ ದೃಶ್ಯಗಳೇ ಕಂಡುಬರುವವು. ಅಂದಾಗ ಸ್ತ್ರೀ—ಪುರುಷರ ಮನದೊಳಗೆ ಸಮಾಗಮದ ಇಚ್ಛೆಯು ಉದ್ಭವಿಸುವದು ಸ್ವಾಭಾವಿಕವಾಗಿರುವದು. ವರ್ಷಾ ಋತುವಿನಲ್ಲಿ ಈ ರೀತಿಯಾಗುವದೆಂದು ಬಹುತರವಾಗಿ ಎಲ್ಲ ಪ್ರಾಚೀನ ಕವಿಗಳೂ ಒಪ್ಪಿಕೊಂಡಿರುವರು. ವಿಖ್ಯಾತ ಕವಿಯಾದ ಕಾಳಿದಾಸನು ಕೂಡ ತನ್ನ "ಋತು ಸಂಹಾರ' ದಲ್ಲಿ:

ವರ್ಷಾ ಋತುವಿನಲ್ಲಿ ಸ್ತ್ರೀಯರು, ಭಯಂಕರ ಹಾಗು ಗಂಭೀರ ಗರ್ಜನೆಯನ್ನುಂಟು ಮಾಡುವ ಮೇಘಗಳು ಹಾಗು ನಿಮಿಷಕ್ಕೊಮ್ಮೆ ಮಿಂಚಿ ಮಾಯವಾಗುವ ಕೋಲ್ಮಿಂಚುಗಳಿಗೆ ಹೆದರಿ ತಮ್ಮ ಪತಿಗಳಿಗೆ,—ಅವರು ಎಂಥ ಅಪರಾಧಿಗಳಿದ್ದರೂ ಕೂಡ—ಅಪ್ಪಿಕೊಳ್ಳುವರು. ಅಂದರೆ ಹಾಸುಗೆಯ ಮೇಲೆ ಅವರನ್ನು ಬಲವಾದ ಅಪ್ಪುಗೆಯಲ್ಲಿ ಬಂಧಿಸಿಬಿಡುವರು. ಅರ್ಥಾತ್ ಅವರು ಅಂಜಿಕೆಯಿಂದ. ಪುರುಷರಿಂದ—ತಮ್ಮ ಪತಿಗಳಿಂದ—ದೂರವಾಗುವದೇ ಇಲ್ಲವೆಂದು ಹೇಳಿರುವನು. ಇದರ ಮೇಲಿಂದ ವರ್ಷಾ

ಋತುವಿನಲ್ಲಿ ತರುಣಿಯರ ಪರಿಸ್ಥಿತಿಯು ಯಾವ ರೀತಿಯಲ್ಲಿರುತ್ತದೆಂಬುದು ವ್ಯಕ್ತವಾಗುವದು.

ಉಪರಿ ಧನಂ ಘನ ಪಟಲಂ ತಿರ್ಯಗ್ಗಿರಯೋऽಪಿ ನರ್ತಿತ
ಮಯೂರಾಃ ।
ವಸುಧಾ ಕಂದಲ ಧವಲಾ ತುಷ್ಟಿಂ ಪಥಿಕಃ ಕ್ವ ಯಾತು ಸಂತ್ರಸ್ತಃ
॥೪೩॥

ತಲೆಯ ಮೇಲೆ—ಅಂತರಿಕ್ಷದಲ್ಲಿ—ಕಾರ್ಮೋಡಗಳು ಕವಿಯ ತೊಡಗಿವೆ. ಎಡಬಲಕ್ಕೆ ಎರಡೂ ಬದಿಗೂ ದಿನ್ನೆಗಳ—ಗುಡ್ಡಗಳ—ಮೇಲೆ ನವಿಲುಗಳು ನರ್ತಿಸ ತೊಡಗಿವೆ. ಕಾಲ ಕೆಳಗಿನ ಭೂಮಿಯು ನವಾಂಕುರಗಳಿಂದ ಹಸಿರು ವರ್ಣದಲ್ಲಿ ಪರಿವರ್ತಿತವಾಗತೊಡಗಿದೆ. ಈ ರೀತಿಯಾಗಿ ಎಲ್ಲೆಡೆಗೂ ಕಾಮೋದ್ದೀಪನ ಗೊಳಿಸುವಂಥ ವಸ್ತುಗಳು ಕಣ್ಣಿಗೆ ಬೀಳುತ್ತಿರುವಂಥ ಸಮಯದಲ್ಲಿ ವಿರಹ ವ್ಯಾಕುಲನಾದಂಥ ಪಥಿಕನಿಗೆ ಸಂತೋಷವಾಗುವದು ಎಂದಿಗಾದರೂ ಸಾಧ್ಯವಿದೆಯೇ ? ಇಲ್ಲವೇ ಇಲ್ಲ.

ವಿರಹಿಗಳಾದ ಸ್ತ್ರೀ—ಪುರುಷರಿಗೆ ವಸಂತ ಮಾಸವು ಯಾವ ರೀತಿಯಿಂದ ಮನದೊಳಗೆ ವೇದನೆಯನ್ನುಂಟು ಮಾಡುವುದೋ ಅದೇ ರೀತಿಯಾಗಿ ವರ್ಷಾ ಋತುವಿನಲ್ಲಿಯೂ ವಿರಹಿಗಳಿಗೆ ವ್ಯಥೆಯಾಗುವದು. ಅದರಲ್ಲಿಯೂ ಪಥಿಕರಿಗೆ ಅರ್ಥಾತ್ ಮಾರ್ಗಕ್ರಮಣ ಮಾಡುವಂಥವರಿಗೆ ಕಾಮೋದ್ದೀಪನ ಗೊಳಿಸುವಂಥ ದೃಶ್ಯಗಳು ಕಣ್ಣಿಗೆ ಬಿದ್ದರೆ ಅವರ ಗತಿ ಏನಾಗಬೇಕು ? ಅಂಥವರಿಗೆ ಆಗ ಸಂತೋಷವಾಗಬಹುದೇ ? ಸಂತೋಷವಾಗುವದಂತೂ ದೂರ ಉಳಿಯಿತು. ಅವರು ವಿರಹಾಗ್ನಿಯಲ್ಲಿ—ಪುರುಷನು ಸ್ತ್ರೀಯ ವಿರಹಾಗ್ನಿಯಲ್ಲಿ, ಸ್ತ್ರೀಯು ಪುರುಷನ ವಿರಹಾಗ್ನಿಯಲ್ಲಿ—ಬೆಂದು ನೀರಿನೊಳಗಿಂದ ಹೊರಗೆ ತೆಗೆದಂಥ ಮೀನುಗಳಂತೆ ಒದ್ದಾಡುವರು. ಮಾರ್ಗದಲ್ಲಿದ್ದ ಪಥಿಕರ ಪರಿಸ್ಥಿತಿಯು ಈ ರೀತಿಯದಾಗಿದ್ದರೆ ಅವರಿಗಾಗಿ ಕಾಯುತ್ತ, ಅವರ ಮಾರ್ಗ ಪ್ರತೀಕ್ಷೆಯಲ್ಲಿಯೇ ಮನೆಯೊಳಗೆ ಕುಳಿತಿರುವಂಥವರ ಪರಿಸ್ಥಿತಿಯಂತೂ ಇನ್ನೂ ಕರುಣಾಜನಕ ವಾಗುವದು.

ಇತೋ ವಿದ್ಯುದ್ವಲ್ಲೀ ವಿಲಸಿತ ಮಿತಃ ಕೇತಕೀ ತರೋಃ
ಸ್ಫುರದ್ ಗಂಧಃ ಪ್ರೋದ್ಯಜ್ಜಲದ ನಿನದ ಸ್ಫೂರ್ಜಿತ ಮಿತಃ ।
ಇತಃ ಕೇಕಿ ಕ್ರೀಡಾಕಲರವಃ ಪಕ್ಷ್ಮಲ ದೃಶಾಂ
ಕಥಂ ಯಾಸ್ಯಂತೀತಿ ವಿರಹ ದಿವಸಾಃ ಸಂಭೃತ ರಸಾಃ ॥೪೪॥

ಒಂದು ಕಡೆಗೆ ಕಣ್ಣು ಕೋರೈಸುವಂತಹ ಕೋಲ್ಮಿಂಚು, ಇನ್ನೊಂದೆಡೆಗೆ ಕೇತಕೀ ಕುಸುಮಗಳ ಮಧುರ ಸುಗಂಧ, ಇನ್ನೊಂದೆಡೆಗೆ ಹೃದಯವನ್ನಲುಗಿಸುವಮೇಘಗಳ ಗರ್ಜನೆ, ಹಾಗು ಮಗುದೊಂದು ಕಡೆಗೆ ನವಿಲುಗಳ ಗೊಂದಲ ಇವುಗಳೆಲ್ಲ ಒಂದೇ ಕಡೆಗೆ ಸೇರಿಕೊಂಡಿರುವಾಗ, ಪಾಪ ವಿರಹದಿಂದ ವ್ಯಾಕುಲರಾದ ಸ್ತ್ರೀಯರು ತಮ್ಮ ರಸ—ಪೂರ್ಣವಾದ ವಿರಹದ ದಿವಸಗಳನ್ನು ಹೇಗೆ ಕಳೆಯಬೇಕು ?

ಗಗನ ಮಂಡಲವು ಕಾರ್ಮೋಡಗಳಿಂದ ತುಂಬಿಕೊಂಡಿದೆ. ಗುಡುಗು ಸಿಡಿಲುಗಳ ಆರ್ಭಟವು ಒಂದೇ ಸವನೆ ನಡೆದೇ ಇದೆ. ನಡು—ನಡುವೆ ಕೋಲ್ಮಿಂಚು ಮಿಂಚಿ ಕ್ಷಿತಿಜದವರೆಗೂ ಬೆಳಕನ್ನುಂಟು ಮಾಡುತ್ತಿದೆ. ವಾತಾವರಣವು ಕೇತಕೀ ಕುಸುಮಗಳ ಸುಗಂಧದಿಂದ ಪರಿಮಳಯುಕ್ತವಾಗಿದೆ. ಉನ್ಮತ್ತ ನವಿಲುಗಳು ಕುಣಿಯುತ್ತ ಮನಬಲ್ಲಂತೆ ಗೊಂದಲವನ್ನೆಬ್ಬಿಸಿವೆ. ಕಾಮಕಲೆಯೊಳಗೆ ಪರಿಣತೆಯರಾದ ತರುಣಿಯರ ಕಾಮವಾಸನೆಯನ್ನು ಪ್ರಜ್ವಲಿತಗೊಳಿಸುವಂಥ ಇಂಥ ಸನ್ನಿವೇಶಗಳಲ್ಲಿ ಅವರು ಸಮಯವನ್ನು ಕಳೆಯುವದಾದರೂ ಹೇಗೆ? ಅವರಿಗೆ ಒಂದೊಂದು ನಿಮಿಷಗಳು ಒಂದೊಂದು ಯುಗದಂತೆ ಭಾಸವಾಗುವವು. ಏಕೆಂದರೆ ಅವರ ಹೃದಯದೊಡೆಯನು ಎಲ್ಲಿಯೋ ದೂರದೇಶದಲ್ಲಿರುತ್ತಾನೆ. ಅವರ ಹೃದಯದ ಪೀಡಿತವನ್ನು ಶಾಂತಗೊಳಿಸುವಂಥ ರಮಣನು ಆಗ ಸನಿಹದಲ್ಲಿರುವದಿಲ್ಲ. ಅಂತೆಯೇ ಅವರ ಪರಿಸ್ಥಿತಿಯು ಕರುಣಾಜನಕ ವಾಗಿರುತ್ತದೆ.

ಅಸೂಚಿ ಸಂಸಾರೇ ತಮಸಿ ನಭಸಿ ಪ್ರೌಢ ಜಲದ್-
—ಧ್ವನಿ ಪ್ರಾಯೇ ತಸ್ಮಿನ್ ಪತತಿ ದೃಷದಾಂ ನೀರನಿಚಯೇ ।

ಇದಂ ಸೌದಾಮಿನ್ಯಾಃ ಕನಕ ಕಮನೀಯಂ ವಿಲಸಿತಂ
ಮುದಂ ಚ ಗ್ಲಾನಿಂ ಚ ಪ್ರಥಯತಿ ಪಥಿಷ್ವೇವ ಸುದೃಶಾಮ್ ||೪೫||

ಶ್ರಾವಣ ಮಾಸದ ಘನ ಘೋರವಾದ ಕಾಳರಾತ್ರಿಯಲ್ಲಿ—ನಡೆಯುವ ವನಿಗೆ ತನ್ನ ಕೈಗಳೂ ಕಾಣದಂಥ ಕಾರ್ಗತ್ತಲೆಯಲ್ಲಿ— ಮೇಘಗಳ ಹೃದಯ ವನ್ನು ನಡುಗಿಸುವಂಥ ಭಯಂಕರ ಗರ್ಜನೆಯೊಂದಿಗೆ ಆಣೇಕಲ್ಲಿನ ಮಳೆ ಯಾಗುವದು ಹಾಗು ಕಣ್ಣುಗಳು ಕೋರೈಸುವಂತೆ ಕೋಲ್ಮಿಂಚು ತನ್ನ ಪ್ರಭಾವವನ್ನು ಬೀರುವದು. ಇವುಗಳೆಲ್ಲ ಹರಿಣಾಕ್ಷಿಯರಾದ ತರುಣಿಯರ ಮಾರ್ಗದಲ್ಲಿ ಸುಖ ಹಾಗು ದುಃಖದ ಕಾರಣಗಳಾಗುವವು.

ಅಂದರೆ, ಮೇಲೆ ವಿವರಿಸಲಾದಂಥ ಪರಿಸ್ಥಿತಿಯಲ್ಲಿ ಹರಿಣಾಕ್ಷಿಯರಾದ ತರುಣಿಯರ ಜೊತೆಗೆ ಅವರ ಪುರುಷರೂ ಇದ್ದುದಾದರೆ ಸ್ವರ್ಗೀಯ ಆನಂದ ವನ್ನು ಅನುಭವಿಸುವರು. ಹಾಗು ಅವರಿಗೆ ವರ್ಷಾಋತುವು ಹೇಗೆ ಕಳೆ ಯಿತು ? ಎಂಬುದೇ ಗೊತ್ತಾಗದಂತೆ ಸಮಯವು ಸರಿದು ಹೋಗುವದು. ಆದರೆ ಪುರುಷರು-ಗಂಡಂದಿರು—ಪರದೇಶದಲ್ಲಿದ್ದರೆ ಮಾತ್ರ ಅಂಥ ತರುಣಿ ಯರ ಸ್ಥಿತಿಯು ದೇವರಿಗೇ ಪ್ರೀತಿ ಎಂದು ಹೇಳಬೇಕು ಅಂಥ ಸ್ತ್ರೀಯರು ತಮ್ಮ ಪತಿಗಳನ್ನು ಜ್ಞಾಪಿಸಿಕೊಳ್ಳುತ್ತ ಆಕಾಶದೊಳಗಿನ ಅಸಂಖ್ಯ ನಕ್ಷತ್ರ ಗಳನ್ನು—ಮೋಡವು ಕವಿದಿರದಾಗ—ಎಣಿಸುತ್ತ ಕಳೆಯುವರು.

ಆಸಾರೇಣ ನ ಹರ್ಮ್ಯತಃ ಪ್ರಿಯತಮೈರ್ಯಾತುಂ ಬಹಿಃಶಕ್ಯತೇ
ಶೀತೋತ್ಕಂಪ ನಿಮಿತ್ತ ಮಾಯತ ದೃಶಾ ಗಾಢಂ ಸಮಾಲಿಂಗ್ಯತೇ |
ಜಾತಾಃ ಶೀತಲ ಶೀಕರಾಶ್ಚ ಮರುತೋ ವಾಂತ್ಯಂಡ ಖೇದಚ್ಛಿದೋ
ಧನ್ಯಾನಾಂ ವತ ದುರ್ದಿನಂ ಸುದಿನತಾಂ ಯಾತಿ ಪ್ರಿಯಾ ಸಂಗಮೇ
||೪೬||

ವರ್ಷಾ ಋತುವಿನಲ್ಲಿ ಹನಿಗಳು ಯಾವಾಗಲೂ ಬೀಳುತ್ತಲೇ ಇರುವ ದರಿಂದ ಪ್ರಿಯತಮನು ಮನೆಯಿಂದ ಹೊರಬೀಳುವುದೇ ಇಲ್ಲ.—ಜಡಿಮಳೆ ಹಿಡಿದುದರಿಂದಾಗಿ—ಚಳಿಯಿಂದ ನಡುಗುತ್ತಿರುವ ವಿಶಾಲಾಕ್ಷಿ ಪ್ರಿಯತ

ಮೆಯು ತನ್ನ ಪ್ರಿಯತಮನನ್ನು ಆಲಂಗಿಸುವಳು. ಶೀತಲ ಜಲದ ಕಣಗಳಿಂದ ತುಂಬಿದಂಥ ವಾಯುವು ಮೈಥುನ ಕಾರ್ಯವು ಮುಗಿದ ನಂತರ ಆಗುವಂಥ ಶ್ರಮವನ್ನು ಹೋಗಲಾಡಿಸುವದು. ಈ ರೀತಿಯಾಗಿ ವರ್ಷಾ ಋತುವಿನ ದುರ್ದಿನಗಳು ಕೂಡ ಭಾಗ್ಯವಂತರಿಗೆ ಒಳ್ಳೆಯ ದಿನಗಳಾಗಿ ಪರಿಣಮಿಸುವವು. ಅರ್ಥಾತ್—

ಪುಣ್ಯವಂತರಾದ ಸ್ತ್ರೀ—ಪುರುಷರಿಗೆ ಮಳೆಗಾಲದ—ವರ್ಷಾ ಋತುವಿನ—ದುರ್ದಿನಗಳು ಕೂಡ ಸ್ತ್ರೀ—ಪುರುಷರು—ಪರಸ್ಪರರು ಒಂದೇ ಕಡೆಗೆ ಇರುವದರಿಂದ ಒಳ್ಳೆಯ ದಿನಗಳಾಗಿ ಮಾರ್ಪಡುವವು; ಎಂಬುದು ಈ ಶ್ಲೋಕದ ಸಾರವಾಗಿರುವದು.

ವರ್ಷಾ ಋತು ವರ್ಣನೆ ಮುಗಿಯಿತು.



# ಶರದ್—ವರ್ಣನೆ

ಅರ್ಧಂ ನೀತ್ವಾ ನಿಶಾಯಾಃ ಸರಭಸ ಸುರತಾಯಾಸಾ
ಖಿನ್ನ ಶ್ಲಥಾಂಗಃ
ಪ್ರೋದ್ ಭೂತಾ ಸಹ್ಯತೃಷ್ಣೋ ಮಧುಮದ ನಿರತೋ ಹರ್ಮ್ಯ
ಪೃಷ್ಠೇ ವಿವಿಕ್ತಂ ।
ಸಂಭೋಗ ಕ್ಲಾಂತ ಕಾಂತಾ ಶಿಥಿಲ ಭುಜಲತಾರರ್ಜಿತಂ
ಕರ್ಕರೀತೋ
ಜ್ಯೋತ್ಸ್ನಾ ಭಿನ್ನಾಚ್ಛಧಾರಂ ಪಿಬತಿ ನ ಸಲಿಲಂ ಶಾರದಂ
ಮಂದಭಾಗ್ಯಃ ॥

ಅರ್ಧ ರಾತ್ರಿಯು ಕಳೆದ ನಂತರ ಬೇಗ–ಬೇಗ ಸಂಭೋಗ ಕಾರ್ಯ ವನ್ನು ಜರುಗಿಸಿ ದಣಿದ ನಂತರ, ಹಾಗು ತತ್ಪರಿಣಾಮವಾಗಿಯೇ ಭಯಂಕರ ಬಾಯಾರಿಕೆಯಾದಾಗ, ಮದಿರೆಯ ಅಮಲಿನ ಪರಿಸ್ಥಿತಿಯಲ್ಲಿ ಭವನದ ಸ್ವಚ್ಛವಾದ ಮೇಲ್ಮಾಳಿಗೆಯ ಮೇಲೆ ಕುಳಿತುಕೊಂಡಿರುವ ಪುರುಷನು, ಒಂದು ವೇಳೆ ಮೈಥುನ ಕಾರ್ಯದಿಂದ ದಣಿದಿರುವಂಥ ಪ್ರಿಯತಮೆಯ ಕೈಯೊಳಗಿದ್ದ ಹೂಜೆಯೊಳಗಿನ ನೀರನ್ನು ಶರದ್ ಋತುವಿನ ಬೆಳದಿಂಗಳಿ ನಲ್ಲಿ ಕುಡಿಯದಂಥ ಪುರುಷನು ನಿಜಕ್ಕೂ ನಿರ್ಭಾಗ್ಯನೆಂದೇ ಹೇಳಬೇಕು.

ಅಂದರೆ, ಶರದ್ ಋತುವಿನ ಬೆಳದಿಂಗಳ ರಾತ್ರಿಯಲ್ಲಿ, ಮೈಥುನ ಕಾರ್ಯದೊಳಗೆ ದಣಿದಂಥ ಕಾಮಿನಿಯು ತಂದ ಶೀತೋದಕವನ್ನು ಭಾಗ್ಯ ವಂತರೇ ಕುಡಿಯುವರು ಎಂಬುದೇ ಈ ಶ್ಲೋಕದ ಸಾರವಾಗಿರುವದು.

ಶರದ್ ವರ್ಣನೆ ಮುಗಿಯಿತು.



# ಹೇಮಂತ ಮಹಿಮೆ

ಹೇಮಂತೇ ದಧಿದುಗ್ಧ ಸರ್ಪಿರ ಶನಾ ಮಾಂಜಿಷ್ಠವಾಸೋಭೃತಃ
ಕಾಶ್ಮೀರದ್ರವ ಸಾಂದ್ರ ದಿಗ್ಧವ ಪುಷಃ ಖಿನ್ನಾ ವಿಚಿತ್ರೈರತೈಃ ।
ಪೀನೋರುಸ್ತನ ಕಾಮಿನೀಜನ ಕೃತಾಶ್ಲೇಷಾ ಗೃಹಾಭ್ಯಂತರೇ
ತಾಂಬೂಲೀದಲ ಪೂಗ ಪೂರಿತ ಮುಖಾ ಧನ್ಯಾಃ ಸುಖಂ ಶೇರತೇ
॥ ೪೮ ॥

ಹೇಮಂತ ಋತುವಿನಲ್ಲಿ ಯಾರು ಹಾಲು, ಮೊಸರು ಹಾಗು ಬೆಣ್ಣೆಯನ್ನು ತಿನ್ನುವರೋ. ಕಿರಮಂಜಿ ಬಣ್ಣದ ಬಟ್ಟೆಗಳನ್ನು ಯಾರು ಧರಿಸುವರೋ, ಕೇಶರವನ್ನು ಶರೀರಕ್ಕೆ ದಪ್ಪವಾಗಿ ಯಾರು ಲೇಪಿಸಿಕೊಳ್ಳುವರೋ, ಬೇರೆ—ಬೇರೆ ಬಗೆಯ ಆಸನಗಳನ್ನು ಕಾರ್ಯರೂಪದಲ್ಲಿ ತಂದು ಯಾರು ಸಂಭೋಗ ಸುಖವನ್ನು ಅನುಭವಿಸುವರೋ, ಮಾಂಸ ಭರಿತ ತೊಡೆಗಳು ಹಾಗು ಬಿರುಸಾದ ಸ್ತನಗಳುಳ್ಳ ಸ್ತ್ರೀಯರನ್ನು ಯಾರು ಗಾಢವಾಗಿ ಆಲಿಂಗಿಸಿಕೊಳ್ಳುವರೋ, ಹಾಗು ತಾಂಬೂಲವನ್ನು ಸೇವಿಸುತ್ತ ಮನೆಯೊಳಗಿನ ಕೋಣೆಯೊಂದರಲ್ಲಿ ಸುಖವಾಗಿ ಯಾರು ನಿದ್ರಿಸುವರೋ ಅವರು ನಿಜವಾಗಿಯೂ ಭಾಗ್ಯವಂತರು.

ಇದೇ ಹೇಮಂತ ಋತುವಿನ ಬಗ್ಗೆ ಮಹಾಕವಿ ಕಾಳಿದಾಸನು ಕೂಡ ಒಂದು ಕಡೆಗೆ :

"ಓ ಪ್ರಿಯತಮೆ ! ಈ ಹೇಮಂತ ಋತುವಿನಲ್ಲಿ ಕಾಮಾತ್ತುರರಾದ ಸ್ತ್ರೀ—ಪುರುಷರು ಪುಷ್ಪಗಳ ಮತ್ತವಾದ ಸುಗಂಧದಿಂದ ಮುಖಕ್ಕೆ ಹಾಗು ತಮ್ಮ ಶ್ವಾಸ ವಾಯುವಿನಿಂದ ಅಂಗಗಳನ್ನು ಸುಗಂಧಿತ ಗೊಳಿಸಿ ಪರಸ್ಪರರು ಮೈಗೆ—ಮೈ ಅಂಟಿಸಿಕೊಂಡು ಮಲಗುವರು" ಎಂದು ಹೇಳಿದ್ದಾನೆ.

ಹೇಮಂತ ಮಹಿಮೆ ಮುಗಿಯಿತು.

# ಶಿಶಿರ ಮಹಿಮೆ

ಚುಂಬಂತೋ ಗಂಡಭಿತ್ತಿರಲ ಕವತಿ ಮುಖೇ ಸೀತ್ಕೃತಾನ್ಯಾದಧಾನಾ
ವಕ್ಷಃ ಸೂತ್ಕಂಚುಕೇಷು ಸ್ತನಭರಪುಲ ಕೋದ್ ಭೇದ ಮಾಪಾದ
ಯಂತಃ ।
ಉರೂನಾ ಕಂಪಯಂತಃ ಪೃಥು ಜಘನ ತಟಾತ್ಸ್ರಂಸ ಯಂತೋಽ
ಶುಕಾನಿ,
ವ್ಯಕ್ತಂ ಕಾಂತಾಜನಾನಾಂ ವಿಟ ಚರಿತಕೃತಃ ಶೈಶಿರಾ ವಾಂತಿ ವಾತಾಃ
॥ ೪೯ ॥

ಸ್ತ್ರೀಯರ ಕೇಶಯುಕ್ತ ಗಲ್ಲಗಳನ್ನು ಚುಂಬಿಸುತ್ತ, ಅತಿಯಾದ ಚಳಿ ಇರುವದರಿಂದ ಅವರ—ತರುಣಿಯರ—ಬಾಯಿಯಿಂದ 'ಸಿ—ಸಿ' ಧ್ವನಿಯನ್ನು ಹುಟ್ಟಿಸುತ್ತ, ರವಿಕೆ ರಹಿತ ತೆರೆದುಕೊಂಡಿರುವ ಸ್ತನಗಳನ್ನು ರೋಮಾಂಚನ ಗೊಳಿಸುತ್ತ, ಹಾಗು ಪುಷ್ಟವ ದ ಮಾಂಸಲ ತೊಡೆಗಳ ಮೇಲಿನ ಬಟ್ಟೆಗಳನ್ನು ಸರಿಸುತ್ತ ಶಿಶರ ಋತುವಿನ ಗಾಳಿಯು ಜಾರ ಪುರುಷರಂತಹ ಆಚರಣೆಗಳನ್ನು ಆಚರಿಸುತ್ತ ಬೀಸುತ್ತಿರುವದು.

ಪತಿಯು ಏಕಾಂತದಲ್ಲಿ ಯಾವ ಯಾವ ಕಾರ್ಯಗಳನ್ನು ಮಾಡುವನೋ ಅವೆಲ್ಲ ಕಾರ್ಯಗಳನ್ನು ಶಿಶಿರ ಋತುವಿನ ಗಾಳಿಯುಮಾಡುವದು. ಅರ್ಥಾತ್ ಅದು—ಆ ಗಾಳಿಯು—ಜಾರ ಪುರುಷನಂತೆ ವರ್ತಿಸುವದು, ಎಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ಕೇಶಾನಾಕಲ ಯಂದೃಶೋ ಮುಕುಲಯನ್ವಾ ಸೋ ಬಲಾದಾಕ್ಷಿಪ-
ಆ ತನ್ವನ್ಪುಲ ಕೋದ್ಗಮಂ ಪ್ರಕಟವನ್ನಾಲಿಗ್ಯ ಕಂಪಂಧ ದೈಃ ।

ವಾರಸ್ವಾರ ಮುದಾರ ಸೀತ್ಕೃತ ಕೃತೋದಂತಚ್ಛದಾನ್ಪೀಡಯನ್
ಪ್ರಾಯಃ ಶೈಶಿರ ಏವ ಸಂಪ್ರತಿ ಮರುತ್ಕಾಂತಾಸು ಕಾಂತಾಯತೇ
|| ೫೦ ||

ತಲೆಯೊಳಗಿನ ಕೂದಲುಗಳನ್ನು ಚಲ್ಲಾಪಿಲ್ಲಿಯಾಗುವಂತೆ-ಮಾಡುತ್ತ ಕಣ್ಣುಗಳನ್ನು—ಪೂರ್ಣ ತೆರೆಯಲು ಆಸ್ಪದ ಕೊಡದೆ ಅರ್ಧ ಮುಚ್ಚಿಸುತ್ತ ಸೀರೆಯು ಹಾರಾಡುವಂತೆ ಮಾಡುತ್ತ, ದೇಹವನ್ನು ರೋಮಾಂಚನಗೊಳಿಸುತ್ತ, ಶರೀರದೊಳಗೆ ಒಂದು ಬಗೆಯ ಉನ್ಮಾದವನ್ನು ಹುಟ್ಟಿಸುತ್ತ, ಶರೀರವನ್ನು ಮೇಲಿಂದ ಮೇಲೆ ಆಲಿಂಗಿಸುತ್ತ, ಮೇಲಿಂದ ಮೇಲೆ ಸೀ—ಸೀ ಎನ್ನುವ ಅವರ ತುಟಿಗಳನ್ನು ಚುಂಬಿಸುತ್ತ ಶಿಶಿರ ಋತುವಿನ ಗಾಳಿಯು ಪತಿಯು ಮಾಡಬಹುದಾದಂಥದೆಲ್ಲವನ್ನೂ ಮಾಡುವದು.

ಅಂದರೆ ಪತಿಯು ತನ್ನ ಪತ್ನಿಯ ಗಲ್ಲಗಳನ್ನು ಚುಂಬಿಸಿದರೆ ಶಿಶಿರದ ಗಾಳಿಯೂ ಅವಳ ಗಲ್ಲಗಳನ್ನು ಚುಂಬಿಸುವದು, ಅವಳ ಸ್ತನಗಳ ಮೇಲೆ ದಾಳಿ ಮಾಡುವದು, ಪುಷ್ಟವಾದ ಮಾಂಸಲ ತೊಡೆಗಳ ಮೇಲಿನ ಬಟ್ಟೆಯನ್ನು ಸಡಿಲಿಸುವದೇ ಮೊದಲಾದ ಕಾರ್ಯಗಳನ್ನು ಪತಿಯು ಮಾಡಿದಂತೆ ಶಿಶಿರದ ಗಾಳಿಯು ಮಾಡುವದು. ಇಷ್ಟೇ ಅಲ್ಲ. ಸಂಭೋಗ ಸಮಯದಲ್ಲಿ ತರುಣಿಯರು ಸೀ—ಸೀ ಎಂದು ಸೀತ್ಕಾರ ಮಾಡುವಂತೆ ಶಿಶಿರದ ಗಾಳಿಯ ಹೊಡೆತಕ್ಕೂ ಅವರು ಸೀ—ಸೀ ಎನ್ನುವರು. ಅಂತೆಯೇ ಶಿಶಿರದ ಗಾಳಿಯು ಪತಿಯು ಮಾಡಬಹುದಾದಂಥವೆಲ್ಲವನ್ನೂ ಮಾಡುವದು ಎಂದು ಹೇಳಲಾಗಿದೆ.

ಶಿಶಿರ ಮಹಿಮೆ ಮುಗಿಯಿತು.



# ವಿಷಯ ಪ್ರಶಂಸೆ

ಅಸಾರಾಃ ಸನ್ತ್ವೇತೆ ವಿರತಿ ವಿರಸಾಯಾಸ ವಿಷಯಾ
ಜುಗುಪ್ಸ್ಯಂತಾಂ ಯದ್ವಾನನು ಸಕಲ ದೋಷಾಸ್ಪದ ಮಿತಿ ।
ತಥಾಽಪ್ಯಂತಸ್ತತ್ತ್ವೇ ಪ್ರಣಿ ಹಿತಧಿಯಾಮ ಪ್ರತಿಬಲ—
ಸ್ತದೀಯೋಽ ನಾಖ್ಯೇಯಃ ಸ್ಫುರತಿ ಹೃದಯೇ ಕೋಽಪಿ ಮಹಿಮಾ
|| ೫೧ ||

ಸಂಸಾರದ ವಿಷಯ ಭೋಗಗಳು ಅಸಾರವಾದಂಥವುಗಳು. ಅರ್ಥಾತ್ ಸಾರ-ಸತ್ವ-ವಿಲ್ಲದಂಥವುಗಳು, ವಿರತಿಯಲ್ಲಿ ವಿಘ್ನವನ್ನುಂಟು ಮಾಡುವಂಥವುಗಳು ಹಾಗು ಎಲ್ಲ ದೋಷಗಳ ಉಗಮಸ್ಥಾನಗಳಾಗಿವೆ; ಎಂದು ಜನರು ಅವುಗಳನ್ನು ತಿಳಿದರೂ ಕೂಡ, ಅವುಗಳ-ಸಂಸಾರಸುಖದ-ಮಹಿಮೆಯು ಅಪಾರವಾದುದಾಗಿದೆ. ಹಾಗು ಅವುಗಳು ಶಕ್ತಿಶಾಲಿಗಳಾಗಿರುವವು ಎಂಬುದಕ್ಕೆ ಸಂದೇಹವೇ ಇಲ್ಲ. ಏಕೆಂದರೆ ಬ್ರಹ್ಮವಿಚಾರದಲ್ಲಿಯೇ ತಲ್ಲೀನರಾಗಿರುವಂಥ ತತ್ವ ವೇತ್ತರ ಹೃದಯದೊಳಗೂ ಸಹ ಅವು ಪ್ರಕಾಶಿತ ಗೊಳ್ಳುವವು.

ಈ ಸಂಸಾರದೊಳಗೆ ಎಳ್ಳಷ್ಟೂ ಹುರುಳಿಲ್ಲ. ಇದು ಸತ್ವಹೀನವಾದಂಥದು, ಮೋಕ್ಷವನ್ನು ಪಡೆಯಲು ಅಡೆತಡೆಗಳನ್ನುಂಟು ಮಾಡುವಂಥದು. ಹಾಗು ಸರ್ವ ಪಾಪಗಳ ಕೇಂದ್ರಸ್ಥಾನವಾಗಿರುವದು. ಎಂದು ಕೆಲವರು ಸಂಸಾರವನ್ನು ಹಾಗು ಸಂಸಾರದ ಭೋಗಗಳನ್ನು ಹಳಿಯಬಹುದು. ಆದರೆ ಅಂಥವರು ಹೇಳಿದ ಮಾತ್ರಕ್ಕೆ ಸಂಸಾರ ನಿಃಸಾರವಾಗಲಾರದು. ಸಂಸಾರ ಸುಖವು ಶಕ್ತಿಶಾಲಿಯಾಗಿದ್ದು ಅಪಾರ ಮಹಿಮೆಯುಳ್ಳದ್ದಾಗಿದೆ. ಇದರ ಶಕ್ತಿ—ಸಾಮರ್ಥ್ಯಗಳನ್ನು ವರ್ಣಿಸುವದು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಸಂಸಾರವನ್ನು ತ್ಯಜಿಸಿದ, ಹಗಲು—ರಾತ್ರಿ ಬ್ರಹ್ಮ ಚಿಂತನೆಯಲ್ಲಿಯೇ

ಕಾಲ ಕಳೆಯುತ್ತೇವೆಂದು ಹೇಳಿಕೊಳ್ಳುವವರ ಹೃದಯದಲ್ಲಿಯೂ ಕಾಮಾಗ್ನಿಯು ಪ್ರಜ್ವಲಿಸುತ್ತಿರುತ್ತದೆ.

ಭವಂತೋ ವೇದಾಂತ ಪ್ರಣಿಹಿತ-ಧಿಯಾಂ ಮಾಪ್ತ ಗುರವೋ
ವಿಚಿತ್ರಾಲಾಪಾನಾಂ ವಯಮಪಿ ಕವೀನಾ ಮನುಚರಾಃ ।
ತಥಾಪ್ಯೇತದ್ ಭೂಮೌ ನಹಿ ಪರಿಹತತ್ಪುಣ್ಯ ಮಧಿಕಂ
ನ ಚಾಸ್ಮಿನ್ಸಂಸಾರೇ ಕುವಲ ಯದೃಶೋ ರಮ್ಯಂ ಪರಮ್ ॥ ೫೨ ॥

ತಾವು ವೇದಾಂತವೇತ್ತರ ಅರ್ಥಾತ್ ವೇದಾಂತದ ಒಲವುಳ್ಳವರಿಗೆ ಮಾನನೀಯ ಗುರುಗಳಾಗಿರುವಿರಿ. ಹಾಗು ನಾವು ಒಳ್ಳೆಯ ಕಾವ್ಯಗಳನ್ನು ರಚಿಸುವಂಥ ಕವಿಗಳ ಸೇವಕರಾಗಿದ್ದೇವೆ. ಹೀಗಿದ್ದರೂ ನಾವು, "ಪರೋಪಕಾರಕ್ಕಿಂತ ಹೆಚ್ಚಿನ ಪುಣ್ಯವು ಯಾವುದೂ ಇಲ್ಲ. ಮತ್ತು ಕಮಲನೇತ್ರಿಯರಾದ ಸುಂದರ ಸ್ತ್ರೀಯರಿಗಿಂತ ಮಿಗಿಲಾದ ಸುಂದರ ವಸ್ತುವು ಜಗತ್ತಿನೊಳಗೆ ಯಾವುದೂ ಇಲ್ಲ"ವೆಂದು—ಅನಿವಾರ್ಯವಾಗಿ—ಹೇಳಲೇಬೇಕಾಗುತ್ತದೆ.

ಪರೋಪಕಾರಕ್ಕಿಂತ ಹೆಚ್ಚಿನ ಪುಣ್ಯ ಹಾಗು ಸುಂದರ ತರುಣಿಗಿಂತ ಮಿಗಿಲಾದ ಸೌಂದರ್ಯವುಳ್ಳ ವಸ್ತುವು ಈ ಸಂಸಾರದೊಳಗೆ ಇಲ್ಲವೆಂದು ಭರ್ತೃಹರಿಯು ಹೇಳುತ್ತಾನೆ. ಅದು ಕೂಡ ಬ್ರಹ್ಮಜ್ಞಾನಿಗಳೆಂದೆನ್ನಿಸಿಕೊಂಡಂಥ ಮಹಾ ಪಂಡಿತರ ಗುರುಗಳಿಗೆ ತಾನು, ವಿದ್ಯಾವಂತನಲ್ಲ, ಒಳ್ಳೆಯ ಕವನಗಳನ್ನು ರಚಿಸುವಂಥ ಕವಿಗಳ ಸೇವಕನೆಂದು ಕರೆದುಕೊಂಡು ಈ ರೀತಿಯಾಗಿ ಹೇಳಿರುವನು. ಇದರಿಂದ ಸಂಸಾರಿಯಾದವನು, ಆಗಬೇಕೆನ್ನುವವನು ಸಾಕಷ್ಟು ಧನವನ್ನು ಗಳಿಸಿಕೊಂಡು ಪರೋಪಕಾರಿಯಾಗಿರಬೇಕು. ಅರ್ಥಾತ್ ಎರಡನೆಯವರಿಗೆ ಮೇಲಿಂದ ಮೇಲೆ ಉಪಕಾರವನ್ನು ಮಾಡುತ್ತಿರಬೇಕು. ಮತ್ತು ಸುಂದರಿಯಾದ ಸ್ತ್ರೀಯನ್ನು ಮಡದಿಯಾಗಿ ಆವಳೊಂದಿಗೆ ಸುಖೋಪ ಭೋಗಗಳನ್ನು ಅನುಭವಿಸಬೇಕು. ಎಂಬುದು ಭರ್ತೃಹರಿಯ ಉದ್ದೇಶವಾಗಿರುವದು. ಅದು ನಿಜವೂ ಆಗಿರುವದೆಂಬುದನ್ನು ಸಂಸಾರದ ಸವಿಯನ್ನು ಪಡೆದಪ್ರತಿಯೊಬ್ಬ ಸಂಸಾರಿಗೆ ಗೊತ್ತಿದ್ದ ಸಂಗತಿಯೇ ಆಗಿರುವದೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಕಿಮಿಹ ಬಹು ಭಿರುಕ್ತೈರ್ಯುಕ್ತಿ ಶೂನ್ಯೈಃ ಪ್ರಲಾಪೈ—
ರ್ದ್ವಯಮಿಹ ಪುರುಷಾಣಾಂ ಸರ್ವದಾ ಸೇವನೀಯಮ್ ।
ಅಭಿನವ ಮದಲೀಲಾ ಲಾಲಸಂ ಸುಂದರೀಣಾಂ
ಸ್ತನ ಭರ ಪರಿಖಿನ್ನಂ ಯೌವನಂ ವಾ ವನಂ ವಾ ॥ ೫೩ ॥

ಯುಕ್ತಿ ಶೂನ್ಯವಾದ—ಅರ್ಥವಿಲ್ಲದ–ವೃಥಾ ಪ್ರಲಾಪದಿಂದ ಪ್ರಯೋಜನವೇನು ? ಈ ಜಗತ್ತಿನೊಳಗೆ ಸೇವಿಸಲು ಯೋಗ್ಯವಾಗಿರುವಂಥ ಎರಡೇ ಎರಡು ವಸ್ತುಗಳಿವೆ. ಮೊದಲನೆಯದು : ಕಾಮ ಮದೋನ್ಮತ್ತರಾಗಿರುವ 'ಲೀಲಾಭಿಲಾಷಿ'ಣಿಯರು ಮತ್ತು ಸ್ತನಗಳ ಭಾರದಿಂದ ಖಿನ್ನರಾಗಿರುವ ಸುಂದರ ತರುಣಿಯರ ಯೌವನ, ಅಥವ—ಎರಡನೆಯದು—ಕಾನನ.

ಕೆಲಸಕ್ಕೆ ಬಾರದ—ತಲೆ,ಬುಡಗಳಿಲ್ಲದಂಥ—ಮಾತುಗಳನ್ನಾಡುವದರಲ್ಲಿ ಏನೂ ಪ್ರಯೋಜನವಿಲ್ಲ. ಈ ಜಗತ್ತಿನಲ್ಲಿ ಪುರುಷರು ಸ್ವೀಕರಿಸಬಹುದಾದಂಥ ಮಾರ್ಗಗಳು ಎರಡೇ ಇವೆ. ಅವುಗಳಲ್ಲಿ ಅವನು ಯಾವುದಾದರೊಂದು ಮಾರ್ಗವನ್ನು ಅನುಸರಿಸಬಹುದು. ತಾರುಣ್ಯವತಿಯರಾದ ಸುಂದರ ಸ್ತ್ರೀಯರು ಹಾಗು ಅರಣ್ಯವಾಸ. ಇವೇ ಆ ಎರಡು ಮಾರ್ಗಗಳಾಗಿರುವವು.

ವಿಷಯ ಪ ಶಂಸೆ ಮುಗಿಯಿತು.



# ದುರ್ವಿರಕ್ತ ವರ್ಣನೆ

ಸತ್ಯವ್ ಜನಾ ವಚ್ಮಿ ನ ಪಕ್ಷಪಾತಾ—
ಲ್ಲೋಕೇಷು ಸರ್ವೇಷು ಚ ತಥ್ಯ ಮೇತತ್ ।
ನಾನ್ಯನ್ಮ ನೋಹಾರಿ ನಿತಂಬಿನೀಭ್ಯೋ
ದುಃಖೈಕ ಹೇತುರ್ನ ಚ ಕಶ್ಚಿದನ್ಯಃ ॥ ೫೪ ॥

ಓ ಮಾನವರೆ ! ನಾವು ಯಾವುದೇ ಬಗೆಯ ಪಕ್ಷ ಪಾತವನ್ನು ಮಾಡದೆ ನಿಜವಾದುದನ್ನೇ ಹೇಳಬೇಕೆಂದರೆ, "ಈ ಜಗತ್ತಿನೊಳಗೆ ಚೇತೋಹಾರಿಯಾದ ಅಥವ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಹೆಣ್ಣಿಗಿಂತ ವಸ್ತುವು ಬೇರೊಂದಿಲ್ಲ. ಹಾಗು ದುಃಖವನ್ನೀಯುವದರಲ್ಲಿಯೂ ಅಂತಹ ವಸ್ತುವು ಮತ್ತೊಂದು ಈ ಜಗತ್ತಿನೊಳಗೆ ಸಿಕ್ಕಲಾರದು.

ಈ ಜಗತ್ತಿನಲ್ಲಿ ಸುಖ ಹಾಗು ದುಃಖಗಳನ್ನೀಯುವ ಏಕಮಾತ್ರ ಕಾರಣವೆಂದರೆ ಮನೋಹರ ನಿತಂಬಗಳುಳ್ಳ ಸ್ತ್ರೀ ಎಂದೇ ಹೇಳಬಹುದು. ಇದೇ ಮಾತನ್ನು ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ಸ್ವರ್ಗೀಯ ಸುಖವನ್ನೀಯಬಲ್ಲ ಸ್ತ್ರೀಯು ನರಕ ಸದೃಶಯಾತನೆಯನ್ನೂ ಕೊಡಬಲ್ಲಳು ಎಂಬುದಾಗಿದೆ. ಅಂದರೆ ಸುಖ ಹಾಗು ದುಃಖಗಳನ್ನೀಯುವ ಏಕಮಾತ್ರ ಕಾರಣವೆಂದರೆ ಸ್ತ್ರೀಯೆಂದಾಯಿತು.

ತಾವದೇವ ಕೃತಿನಾಮಪಿ ಸ್ಫುರತ್ಯೇಷ ನಿರ್ಮಲ ವಿವೇಕ ದೀಪಕಃ ।
ಯಾವ ದೇವ ನ ಕುರಂಗ ಚಕ್ಷುಷಾಂ ತಾಡ್ಯತೇ ಚಪಲ ಲೋಚ—
—ನಾಂಚಲೆ ॥೫೫॥

ವಿವೇಕಿಗಳ ಹೃದಯದೊಳಗೆ, ವಿವೇಕ ರೂಪದ ನಿರ್ಮಲ ದೀಪಕವು, ಜ್ಯೋತಿಯು, ವಾರಿಜಾಕ್ಷಿಯರಾದ ತರುಣಿಯರ, ಸೆರಗಿನ ಗಾಳಿ ತಗಲುವ

ವರೆಗೆ ಬಹಳ ಚನ್ನಾಗಿ ಪ್ರಕಾಶವನ್ನು ಬೀರುತ್ತಿರುತ್ತದೆ. ಅರ್ಥಾತ್ ನಾರಿ ಜಾಕ್ಷಿಯರ ಸೆರಗಿನ ಗಾಳಿಬಡಿಯುವವರೆಗೆ ಮಾತ್ರ ಪ್ರಕಾಶಮಾನವಾಗಿರುವದು. ಅನಂತರ ಮಾತ್ರ ಸಾಧ್ಯವಿಲ್ಲ.

ಅಂತಃಕರಣದಲ್ಲಿ ಕಾಮಾದಿ ಮಲರಹಿತ ನಿರ್ಮಲ ವಿವೇಕದ ಜ್ಯೋತಿಯು—ದೀಪಕವು—ತರುಣಿಯರ ಚಂಚಲ ನೇತ್ರ ಕಟಾಕ್ಷವೆಂಬ ಸೆರಗಿನ ಗಾಳಿ ಬಡಿಯುವವರೆಗೆ ಸುರಕ್ಷಿತವಾಗಿರುವದು. ಇದೇ ಮಾತನ್ನು ಇನ್ನೂ ಸ್ಪಷ್ಟಶಬ್ದಗಳಲ್ಲಿ ಹೇಳಬೇಕೆಂದರೆ ತರುಣಿಯರ ಓರೆ ನೋಟವು ಎಂಥ ವಿವೇಕಿ ಪುರುಷನ ಹೃದಯವನ್ನೂ ಸೂರೆಗೊಳ್ಳಬಲ್ಲದು. ಈ ಬಗ್ಗೆ 'ಭಾಮಿನಿ ವಿಲಾಸ' ದಲ್ಲಿ ಹೀಗೆ ಹೇಳಲಾಗಿದೆ:

ಕುಶಲತೆ, ಹಾಗು ಶಾಸ್ತ್ರ, ಪುರಾಣ ಮತ್ತು ಸ್ಮೃತಿಗಳ ಅಧ್ಯಯನದಿಂದ ಪ್ರಾಪ್ತವಾದಂಥ ವಿವೇಕವು, ಹರಿಣಾಕ್ಷಿಯ ನೇತ್ರವಿಲಾಸವು ಹೃದಯದೊಳಗೆ ಎಲ್ಲಿಯವರೆಗೆ ಪ್ರವೇಶಿಸುವದಿಲ್ಲವೋ ಅಲ್ಲಿಯವರೆಗೆ ಮಾತ್ರ ಇರುವದು. ಒಂದು ಸಲ ಅವರ—ಸ್ತ್ರಿಯರ—ಓರೆ ನೋಟವು ಹೃದಯದೊಳಗೆ ಪ್ರವೇಶಿಸಿತೆಂದರೆ ಅವರು—ಪುರುಷರು—ಕಷ್ಟಪಟ್ಟು ಸಂಗ್ರಹಿಸಿದ ವಿವೇಕವು ಗಾಳಿಗೆ ಹಾರಿ ಹೋಗುವದು.

ವಚಸಿ ಭವತಿ ಸಂಗತ್ಯಾಗ ಮುದ್ದಿಶ್ಯ ವಾರ್ತಾ—
ಶೃತಿ ಮುಖ ರಮುಖಾನಾಂ ಕೇವಲಂ ಪಂಡಿತಾನಾಮ್ ।
ಜಘನ ಮರುಣ ರತ್ನಗ್ರಂಥಿಕಾಂಚೀ ಕಲಾಪಂ
ಕುವಲ ನಯನಾ ನಾಂ ಕೊ ವಿಹಾತುಂ ಸಮರ್ಥಃ ॥ ೫೬ ॥

ಸರ್ವಸಂಗ ಪರಿತ್ಯಾಗ ಮಾಡಬೇಕು ಎಂಬ ವಿಷಯದ ಮಾತುಗಳು ಬಹುತರವಾಗಿ ವಾಚಾಳಿಗಳಾದ—ಕೇವಲ ಮಾತುಗಳನ್ನಾಡುತ್ತ ತಿರುಗುವಂಥ—ಪಂಡಿತರ ಬಾಯಿಯೊಳಗೇ ಇರುತ್ತವೆ. ಇಷ್ಟೆ ಅಲ್ಲ; ಅವರು ತ್ಯಾಗದ ಬಗೆಗೂ ಬಹು ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾರೆ. ಆ ಬಗ್ಗೆ ಇತರ

ರಿಗೆ ಬಹಳಷ್ಟು ಉಪದೇಶಿಸುತ್ತಾರೆ. ಆದರೆ ತಾವು ಮಾತ್ರ ತ್ಯಾಗವನ್ನು ಮಾಡುವದಿಲ್ಲ. ಏಕೆಂದರೆ ಕೆಂಪುರತ್ನಗಳನ್ನು ಸೇರಿಸಿ ತಯಾರಿಸಲಾದ ವಸ್ತ್ರವನ್ನು ಪರಿಧಾನ ಮಾಡಿರುವ ಸ್ತ್ರೀಯ ತೊಡೆಗಳಿಂದ ದೂರವಾಗಲು ಯಾರು ಮುಂದಾಗುತ್ತಾರೆ? ಅರ್ಥಾತ್ ಅಂಥ ಸಾಹಸವನ್ನು ಯಾರು ಮಾಡುತ್ತಾರೆ?

ಪಂಡಿತರೆಂದು ಕರೆಯಿಸಿ ಕೊಳ್ಳುವ ಪಾಖಂಡಿಗಳು ಸ್ತ್ರೀಯ ಸಂಗವನ್ನು ತ್ಯಜಿಸಬೇಕು, ಅವಳಿಂದ ದೂರವಿರಬೇಕು; ನಾರಿಯು ನರಕಕ್ಕೆ ದಾರಿ ಎಂದು ಕೇವಲ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಲೋಸುಗ ಆಡಿದ ಮಾತುಗಳು ತೋರಿಕೆಯವಾಗಿರುತ್ತವೆಯೆ ವಿನಾ ಹೃದಯಾಂತರಾಳದಿಂದ ಬಂದಂಥವುಗಳಾಗಿರುವದಿಲ್ಲ. ಏಕೆಂದರೆ ಅವರ ಹೃದಯವು ಕೂಡ ಒಳಗೊಳಗೇ "ಸಿಕ್ಕರೆ ನನಗೂ ಬೇಕು" ಎಂದು ಹೇಳುತ್ತಿರುತ್ತದೆ. ಅಲ್ಲದೆ, ಅದೇ ಯೌವನದ ಹೊಸ್ತಿಲಲ್ಲಿ ಕಾಲಿರಿಸಿದಂಥ ಸುರಸುಂದರಿಯಾದ ತರುಣಿಯು ಎದುರಿಗೆ ಬಂದು ನಿಂತುಕೊಂಡಾಗ ಅವಳಿಗೆ 'ನೀನು ಇಲ್ಲಿಂದ ಹೊರಟು ಹೋಗು! ನನಗೆ ನಿನ್ನ ಅವಶ್ಯಕತೆಯಿಲ್ಲ" ಎಂದು ಹೇಳುವದು ಹುಡುಗಾಟದ ಮಾತಲ್ಲ. ಅವಳನ್ನು ನಿಂದಿಸುವವರು ಬಹಳಷ್ಟು ಜನ ಸಿಕ್ಕಬಹುದು. ಆದರೆ ಬೇಡವೆಂದು ತ್ಯಾಗ ಮಾಡುವವರು ಮಾತ್ರ ಒಬ್ಬರೂ ಸಿಕ್ಕಲಾರರು.

ಸ್ವಪರ ಪ್ರತಾರಕೋಽಸೌ ನಿಂದತಿ ಯೋಽಲೀಕ ಪಂಡಿತೋ
ಯುವತೀಃ ।
ಯಸ್ಮಾತ್ತಪಸೋಽಪಿ ಫಲಂ ಸ್ವರ್ಗಸ್ತಸ್ಯಾಪಿ ಫಲಂ ತಥಾಪ್ಸರಸಃ
॥ ೫೭ ॥

ತರುಣಿಯರನ್ನು ನಿಂದಿಸುವಂಥ, ವಿದ್ವಾಂಸರೆಂದು ಹೇಳಿಕೊಳ್ಳುವ ಪಾಖಂಡಿಗಳು ನಿಜಕ್ಕೂ ಮೂರ್ಖರೆಂದೇ ಹೇಳಬೇಕು. ಅವರು ಅರ್ಥಾತ್ ಆ ಮೂರ್ಖ ಪಂಡಿತರು ಮೊದಲು ತಾವು ಮೋಸ ಹೋಗಿರುತ್ತಾರೆ. ಅದ

ಕ್ಕಾಗಿ ಇತರರಿಗೂ ಮೋಸಗೊಳಿಸಲು ಪ್ರಯತ್ನಿಸುತ್ತಾರೆ. ಏಕೆಂದರೆ ನಾನಾ ರೀತಿಯಿಂದ ತಪಸ್ಸನ್ನಾಚರಿಸಿದ ಫಲವು ಸ್ವರ್ಗವಾಗಿದೆ. ಆ ಸ್ವರ್ಗದಲ್ಲಿ ಅನುಭೋಗಿಸುವದೇನು ? ಅಪ್ಸರೆಯರೊಂದಿಗೆ ಭೋಗವನ್ನು ತಾನೆ ? ಅಂದಾಗ ಸ್ತ್ರೀಯರನ್ನು ತೆಗಳುವಂಥ ಪಂಡಿತರಿಗೆ ಏನನ್ನಬೇಕು ?

ತಾರುಣ್ಯವತಿಯರಾದ ಕಾಮಿನಿಯರನ್ನು ನಿಂದಿಸುವ, ಅವರಲ್ಲಿಯ ಅನೇಕ ದೋಶಗಳನ್ನು ಎತ್ತಿ ತೋರಿಸುವಂಥ ವಿದ್ವಾಂಸರು ಹಾಗು ಪಂಡಿತರು ಹುಚ್ಚರೆಂದೇ ಹೇಳಬೇಕು. ಅವರು—ಮೂರ್ಖ ಪಂಡಿತರು—ತಮಗೆ ಸ್ವರ್ಗವು ಸಿಕ್ಕಬೇಕೆಂದು ನಾನಾ ಬಗೆಯ ತಪಸ್ಸನ್ನು ಆಚರಿಸುತ್ತಾರೆ. ಜಪ-ಹೋಮಾದಿಗಳನ್ನು ಮಾಡುತ್ತಾರೆ. ಅವರ ಜಪ-ತಪಗಳು ಸಿದ್ಧಿಯಾದ ನಂತರ ಸ್ವರ್ಗಕ್ಕೆ ಹೋದ ನಂತರವೂ ಕೂಡ ಇವರಿಗೆ ಭೋಗ್ಯಕ್ಕೆ ದೊರೆಯುವದು ಅಪ್ಸರೆಯರೇ—ಸ್ತ್ರೀಯರೇ—ಅಲ್ಲವೆ ? ಹೀಗಿರುವಾಗ ಅಷ್ಟೊಂದು ಕಷ್ಟಪಟ್ಟು ಸ್ವರ್ಗದಲ್ಲಿ ಸ್ತ್ರೀಯರೊಂದಿಗೆ ಕೂಡಿಕೊಳ್ಳುವದರ ಬದಲು ಭೂಲೋಕದಲ್ಲಿಯೇ ಅವರೊಂದಿಗೇತಕ್ಕೆ ರಮಿಸಬಾರದು ?

ಮತ್ತೇಭ ಕುಂಭದಲನೇ ಭುವಿ ಸಂತಿ ಶೂರಾಃ
ಕೇಚಿತ್ ಪ್ರಚಂಡ ಮೃಗರಾಜ ವಧೇಽಪಿ ದಕ್ಷಾಃ ।
ಕಿಂ ತು ಬ್ರವೀಮಿ ಬಲಿನಾಂ ಪುರತಃ ಪ್ರಸಹ್ಯ
ಕಂದರ್ಪ ದರ್ಪದಲನೇ ವಿರಲಾ ಮನುಷ್ಯಾಃ ॥ ೫೮ ॥

ಮದ್ದಾನೆಯ ಗಂಡಸ್ಥಲವನ್ನು ಸೀಳಿಹಾಕುವಂಥ ವೀರ ಪುರುಷರು ಈ ಜಗತ್ತಿನೊಳಗೆ ಸಿಕ್ಕಬಹುದು. ಕಾನನದೊಡೆಯನೆಂದು ಕರೆಯಿಸಿಕೊಳ್ಳುವಂಥ ಪ್ರಚಂಡ ಸಿಂಹವನ್ನು ಕೊಲ್ಲುವಂಥ ವೀರರು ಎಷ್ಟೋ ಜನ ಸಿಕ್ಕಬಹುದು. ಆದರೆ ಕಾಮದೇವನನ್ನು ಮರ್ದನ ಗೊಳಿಸಬಲ್ಲ ವೀರರು ತೀರ ವಿರಳರೆಂದು, ನಾವು, ಬಲವಂತರೆಂದೆನ್ನಿಸಿ ಕೊಳ್ಳುವವರೆದುರು ಎದೆ ತಟ್ಟಿ ಹೇಳಬಲ್ಲೆವು.

ಮದ್ದಾನೆಗಳು ಹಾಗು ಸಿಂಹಗಳನ್ನು ಲೀಲಾಜಾಲವಾಗಿ ಪರಾಜಿತಗೊಳಿಸಬಲ್ಲ ವೀರರು ಎಲ್ಲೆಡೆಗೂ ಸಿಕ್ಕಬಹುದು. ಆದರೆ ಕಾಮದೇವನನ್ನು ಸೋಲಿಸಬಲ್ಲವರು ಅರ್ಥಾತ್ ತರುಣಿಯರ ಓರೆ ನೋಟಕ್ಕೆ ಗಾಸಿಯಾಗದಂಥವರು ಸಿಕ್ಕುವದು ತೀರ ಅಪರೂಪವೆಂದೇ ಹೇಳಬೇಕು. ಅಂಥವರೇ ನಿಜವಾದ ವೀರರೆಂದು ಹೇಳಬೇಕು. ಈ ಬಗ್ಗೆ ವ್ಯಾಸನು ಕೂಡ :

ಯುದ್ಧರಂಗದೊಳಗೆ ವಿಜಯನ್ನು ಗಳಿಸಿದಷ್ಟಕ್ಕೆ ಅವನು ಶೂರನಾಗಲಾರನು. ಶಾಸ್ತ್ರವನ್ನೋದುವದರಿಂದ ಯಾವನೂ ಪಂಡಿತನಾಗಲಾರನು. ಉದ್ಬುದ್ಧ ಭಾಷಣಗಳನ್ನು ಬಿಗಿಯುವದರಿಂದ ಮುಖಂಡ—ವಕ್ತ್ರ—ನೆನ್ನಿಸಲಾರನು. ಹಾಗು ಧನ—ಧಾನ್ಯಗಳನ್ನು ದಾನವೀಯುವದರಿಂದ ದಾನಿ ಎನ್ನಿಸಲಾರನು. ಆದರೆ—

ತನ್ನ ಇಂದ್ರಿಯಗಳ ಮೇಲೆ ಅಧಿಕಾರವಿರಿಸಿಕೊಂಡವನು ಅರ್ಥಾತ್ ಇಂದ್ರಿಯಗಳನ್ನು ತನ್ನಾಧೀನದೊಳಗೆ ಇರಿಸಿಕೊಂಡವನು ನಿಜವಾದ ವೀರನೆನ್ನಿಸುವನು. ಇಷ್ಟೇ ಅಲ್ಲ, ಅಂಥವನು ಒಳ್ಳೆಯ ಪಂಡಿತ. ಮುಖಂಡ ಹಾಗು ದಾನಿಯೆಂದೂ ಕರೆಯಿಸಿಕೊಳ್ಳುವನು.

ಸನ್ಮಾರ್ಗೇ ತಾವದಾಸ್ತೇ ಪ್ರಭವತಿ ಸ ನರಸ್ತಾವ ದೇವೇಂದ್ರಿ
ಯಾಣಾಂ
ಲಜ್ಜಾಂ ತಾವದ್ವಿಧತ್ತೇ ವಿನಯಮಪಿ ಸಮಾಲಂಬತೇ ತಾವದೇವ।
ಭ್ರೂಚಾ ಪಾಕೃಷ್ಟ ಮುಕ್ತಾಃ ಶ್ರವಣ ಪಥಗತಾ ನೀಲ ಪಕ್ಷ್ಮಾಣ
ಏತೇ
ಯಾವಲ್ಲೀಲಾ ವತೀನಾಂ ಹೃದಿ ನ ಧೃತಿ ಮುಷೋ ದೃಷ್ಟಿ
ಬಾಣಾಃ ಪತಂತಿ ॥೫೯॥

ಇಂದ್ರಿಯಗಳು ಎಲ್ಲಿಯು ವರೆಗೆ ಪುರುಷನ ಆಧೀನದೊಳಗಿರುವವೋ ಅಲ್ಲಿಯು ವರೆಗೆ ಅವನು ಸನ್ಮಾರ್ಗದಲ್ಲಿಯೇ ಇರುತ್ತಾನೆ. ಇಷ್ಟೇ ಅಲ್ಲ, ಅಲ್ಲಿಯವರೆಗೆ ಲಜ್ಜಾಶೀಲನೂ ಆಗಿರುತ್ತಾನೆ. ನಮ್ರತೆಯು ಕೂಡ, ಲೀಲಾ

ವತಿಯರಾದ ಸ್ತ್ರೀಯರ ಬಾಹುಗಳ ರೂಪದ ಧನುಷ್ಯದಿಂದ, ಕಿವಿಯವರೆಗೆ ಜಗ್ಗಿದ, ತಾಳ್ಮೆಗೆಡಿಸುವಂಥ ನಯನ ರೂಪದ ಬಾಣವು ಹೃದಯವನ್ನು ಛೇದಿಸುವ ವರೆಗೆ ಮಾತ್ರ ಉಳಿಯುತ್ತದೆ. ಅನಂತರ ಎಲ್ಲವೂ ತಿರುವು—ಮುರುವಾಗಿ ಬಿಡುವದು.

ಕಾಮಿನಿಯರ ಕಟಾಕ್ಷದಿಂದ ಗಾಯಗೊಂಡ ಪುರುಷನು ಕಾಮಾತುರನಾಗಿ ಬಿಡುವನು. ಆ ಸಮಯದಲ್ಲಿ ಅವನಿಗೆ ಭಯ, ಲಜ್ಜೆ ಹಾಗು ತಾಳ್ಮೆಗಳು ಇರುವದೇ ಇಲ್ಲ. ಅರ್ಥಾತ್ ಅವುಗಳೆಲ್ಲ ಅವನಿಂದ ಸಾವಿರಾರು ಹರದಾರಿಗಳಷ್ಟು ದೂರದಲ್ಲಿಯೇ ಉಳಿದುಕೊಂಡು ಬಿಡುವವು. ಹಾಗು ಅವನು ತನ್ನ ಹೃದಯವನ್ನು ಗಾಸಿಗೊಳಿಸಿದ ರಮಣಿಯ ಶೋಧದಲ್ಲಿ ಹೊರಡುವನು. ಆಗ ಅವನಿಗೆ ಭಯ-ಲಜ್ಜೆಗಳು ಅಡ್ಡ ಬರುವದೇ ಇಲ್ಲ. ಅದರ ಬದಲು ಒಂದು ಬಗೆಯ ಉನ್ಮಾದತೆಯು ಅವನ ಶರೀರವನ್ನು ಆವರಿಸುತ್ತದೆ. ಆ ಸಮಯದಲ್ಲಿ ಅವನನ್ನು ವೇದಾಂತಿಗಳ ವೇದಾಂತ ವಿದ್ಯೆಯಾಗಲಿ, ಗೀತಾಕಾರರ ಭಗವದ್ಗೀತೆಯಾಗಲಿ, ತಡೆಗಟ್ಟಲಾರವು. ಅಂದರೆ ಕಾಮದೇವನ ಮಾರ್ಗವನ್ನು ಅನುಸರಿಸಿದ ಮನವನ್ನು ಆ ಮಾರ್ಗದಿಂದ ತಿರುಗಿಸುವದು ಯಾರಿಂದಲೂ ಸಾಧ್ಯವಿಲ್ಲ.

ಉನ್ಮತ್ತ ಪ್ರೇಮಸಂರಂಭಾದಾರಭನ್ತೇ ಯದಂಗನಾಃ ।
ತತ್ರ ಪ್ರತ್ಯೂಹಮಾಧಾತುಂ ಬ್ರಹ್ಮಾಪಿ ಖಲು ಕರೂರಃ ॥೬॥

ಅತಿಶಯ ಪ್ರೇಮದ ಇಚ್ಛೆಯಿಂದ ಉನ್ಮತ್ತರಾಗಿ ಸ್ತ್ರೀಯರು ಯಾವ ಕಾರ್ಯವನ್ನು ಪ್ರಾರಂಭಿಸುವರೋ ಆ ಕಾರ್ಯದಲ್ಲಿ ವಿಘ್ನವನ್ನುಂಟು ಮಾಡಲು ಬ್ರಹ್ಮನೂ ಹೆದರುತ್ತಾನೆ. ಅರ್ಥಾತ್ ಅವರ ಕಾರ್ಯದಲ್ಲಿ ವಿಘ್ನವನ್ನುಂಟು ಮಾಡುವ ಧೈರ್ಯವು ಯಾರಿಗೂ ಇರುವದಿಲ್ಲ.

ಪ್ರೇಮದ ಭರದಲ್ಲಿ ಹಾಗು ಆತುರದಲ್ಲಿ ಸ್ತ್ರೀಯು ಯಾವುದೊಂದು ಕಾರ್ಯವನ್ನು ಪ್ರಾರಂಭಿಸಿದರೆ, ಆ ಕಾರ್ಯದಿಂದ ಅವಳನ್ನು ಪರಾವರ್ತಗೊಳಿಸುವದು ಬ್ರಹ್ಮನಿಗೂ ಸಾಧ್ಯವಿಲ್ಲವೆಂದಾಗ ಮಾನವನ ಪಾಡೇನು ?

ಸ್ತ್ರೀಯು ಅತ್ಯಂತ ಕಾಮಪೀಡಿತಳಾದಾಗ ಅವಳಿಗೆ ಯಾವುದರ ಪರಿವೆಯೂ ಇರುವದಿಲ್ಲ. ಹಾಗು ಛಲದಿಂದ, ಬಲದಿಂದ ಕಾರ್ಯಪ್ರವೃತ್ತಳಾಗುವಳು ಏಕೆಂದರೆ ಅಂಥ ಸಮಯದಲ್ಲವಳು ಅತ್ಯಂತ ಕ್ರೂರಳೂ, ಲಜ್ಜಾಹೀನಳೂ ಆಗಿರುತ್ತಾಳೆ. ತನ್ನ ಪತಿ, ಪಿತ ಸುತರು ಹಾಗು ಗುರು-ಹಿರಿಯರು ಯಾರೂ ಕಾಣುವದಿಲ್ಲ. ಆಗ ಅವಳೆದುರಿಗಿರುವದು ತನ್ನ ಕಾಮತೃಪ್ತಿಯೊಂದೆ ಆಗಿರುತ್ತದೆ. ಅಂತೆಯೇ ಅವಳು ಸ್ಥೈರ್ಯದಿಂದ ಮುನ್ನುಗ್ಗಿ ಕಾರ್ಯವನ್ನು ಸಾಧಿಸಿಕೊಳ್ಳುವಳು.

ತಾವನ್ ಮಹತ್ವಂ ಪಾಂಡಿತ್ಯಂ ಕುಲೀನತ್ವಂ ವಿವೇಕಿತಾ ।
ಯಾದ ಜ್ವಲತಿ ನಾಂಗೇಷು ಹಂತ ಪಂಚೇಷು ಪಾವಕಃ ॥೬೧॥

ದೊಡ್ಡಸ್ತಿಕೆ, ಪಾಂಡಿತ್ಯ, ಕುಲೀನತೆ ಹಾಗು ವಿವೇಕ ಇವುಗಳು ಶರೀರದೊಳಗೆ ಕಾಮಾಗ್ನಿಯು ಎಲ್ಲಿಯು ವರೆಗೆ ಪ್ರಜ್ವಲಿಸುವದಿಲ್ಲವೋ ಅಲ್ಲಿಯು ವರೆಗೆ ಸುರಕ್ಷಿತವಾಗಿರುವವು, ಒಂದು ಸಲ ಕಾಮಾಗ್ನಿಯು ಹೊತ್ತಿ ಕೊಂಡರೆ ಅವುಗಳೆಲ್ಲ—ದೊಡ್ಡಸ್ಥಿಕೆ, ಪಾಂಡಿತ್ಯ, ಕುಲೀನತೆ ಹಾಗು ವಿವೇಕ ಗಳೆಲ್ಲ — ಗಾಳಿಗೆ ಹಾರಿ ಹೋಗುವವು.

ಪ್ರೇಮವು ಜಾತಿ-ಭೇದವನ್ನೆಣಿಸುವದಿಲ್ಲ. ಕಾಮುಕ ಪುರುಷರ ವಿವೇಕವು ಹಾಗು ಸತ್ಯ-ಅಸತ್ಯಗಳನ್ನು ಪರಿಶೀಲಿಸುವಂಥ ಶಕ್ತಿಯು ಸ್ತ್ರೀಯರ ಒಂದೇ ಒಂದು ಓರೆನೋಟದಿಂದ ಮಾಯವಾಗಿ ಬಿಡುವದು. ಆಗ ಅವನಲ್ಲಿ ಒಳ್ಳೆಯದು—ಕೆಟ್ಟದ್ದು ಎಂಬ ವಿಚಾರಶಕ್ತಿಯೇ ಉಳಿಯುವ ದಿಲ್ಲ. ಅಂದಾತ ಕುಲೀನತೆಗಳೇ ಮೊದಲಾದವುಗಳು ಉಳಿಯುವದಾದರೂ ಹೇಗೆ ? ಈ ಮಾತಿಗೆ ಪ್ರೇಯಸಿಯರಿಗಾಗಿ ಮತಾಂತರ ಹೊಂದಿದವರ ಉದಾಹರಣೆಯನ್ನು ಧಾರಾಳವಾಗಿ ಕೊಡಬಹುದಾಗಿದೆ.

ಶಾಸ್ತ್ರಜ್ಞೋಪಿ ಪ್ರಥಿತ ವಿನಯೋಽಪ್ಯಾತ್ಮ ಬೋಧೋಽಪಿ ಬಾಢಂ
ಸಂಸಾರೇಽಸ್ಮಿನ್ ಭವತಿವಿರಲೋ ಭಾಜನಂ ಸದ್ಗತೀನಾಂ ।

ಏ ನೈತಸ್ಮಿನ್ನಿರಯನಗರ ದ್ವಾರಮುದ್ ಘಾಟಯಂತಿ
ವಾಮಾಕ್ಷೀಣಾಂ ಭವತಿ ಕುಟಿಲ ಭ್ರೂಲತಾ ಕುಂಚಿಕೇವ ||೬೨||

ಸಕಲ ಶಾಸ್ತ್ರಗಳನ್ನು ಬಲ್ಲವರು, ವಿನಯಶೀಲರು ಹಾಗು ಆತ್ಮಜ್ಞಾನಿ ಯೆಂದು ಹೇಳಿಕೊಳ್ಳುವವರಲ್ಲಿ ಸದ್ಗತಿಯನ್ನು ಪಡೆಯುವವರು ತೀರ ವಿರಳರೆಂದೇ ಹೇಳಬೇಕು. ಏಕೆಂದರೆ ಇಲ್ಲಿ ವಾಮಲೋಚನೆಯರಾದ ಸ್ತ್ರೀಯರ ಓರೆನೋಟ, ಭ್ರೂ-ಲತಾರೂಪದ ಬೀಗದ ಕೈಯು ಅವರಿಗಾಗಿ ನರಕದ್ವಾರದ ಬೀಗವನ್ನು ತೆಗೆದು ಇಟ್ಟಿರುತ್ತದೆ

ಶಾಸ್ತ್ರಜ್ಞರು ಹಾಗು ಬ್ರಹ್ಮಜ್ಞಾನಿಗಳು ಎಲ್ಲಿಯ ವರೆಗೆ ಕಾಮಿನಿಯರ ಬಿಲ್ಲಿನಾಕಾರದ ಬಹುಪಾಶದಿಂದ ದೂರವಿರುವದಿಲ್ಲವೋ ಅಲ್ಲಿಯ ವರೆಗೆ ಅವರಿಗೆ ಸದ್ಗತಿಯು ಕನಸಿನ ಗಂಟೇ ಆಗುವದು. ಕಮಾನಿನಂತಹ ಅವರ ಭುಜಗಳನ್ನು ನೋಡಿ ದೊಡ್ಡ ದೊಡ್ಡ ವೇದಾಂತಿಗಳ ಬುದ್ಧಿಯೂ ಮಸಣಿಸಿ ಬಿಡುವದು- ಅವರು ಸಾವಿರ ಸಲ ಗೀತೆಯನ್ನು ಪಠಿಸಲಿ, ವೇದಗಳನ್ನು ಕಂಠ ಪಾಠ ಮಾಡಲಿ, ಯೋಗವಾಶಿಷ್ಠಗಳನ್ನು ಪರಿಶೀಲಿಸಲಿ ಏನು ಮಾಡಿದರೂ ಅವರ ತಲೆಯೊಳಗೆ ಸೇರಿಕೊಂಡ ಕಾಮಿನಿಯರ ವಿಚಾರವು ಎಂದಿಗೂ ಹೊರಬರಲಾರದು. ಅಂತೆಯೇ ಜಗನ್ನಾಥ ಪಂಡಿತನು "ಭಾಮಿನಿ-ವಿಲಾಸ" ದಲ್ಲಿ :

"ಉಪನಿಷತ್ತುಗಳನ್ನು ಅರೆದು ಕುಡಿದೆ; ಗೀತೆಯನ್ನು ಎಷ್ಟೋ ಸಲ ಪಠಿಸಿದೆ. ಅವುಗಳನ್ನು ಮನನ ಮಾಡಿದೆ. ಇಷ್ಟೆಲ್ಲ ಪರಿಶ್ರಮ ಪಟ್ಟರೂ ಹಾಯ್ ! ಆ ಇಂದ್ರವದನೆಯು ನನ್ನ ಹೃದಯ ರೂಪದ ಮನೆಯನ್ನು ಬಿಟ್ಟು ಹೊರಗೆ ಹೋಗಲೊಲ್ಲಳು." ಎಂದು ಹೇಳಿದ್ದಾನೆ. ಅಂತೆಯೇ ಹಿರಿಯರು "ಈಶ್ವರನನ್ನು ತಲುಪುವ ಮಾರ್ಗದಲ್ಲಿ ಕಾಮಿನಿ-ಕಾಂಚನಗಳು ಅಡ್ಡ ಬರುತ್ತವೆ" ಎಂದು ಹೇಳುತ್ತಾರೆ. ಆ ಮಾತು ನೂರಕ್ಕೆ ನೂರರಷ್ಟು ನಿಜ ವಾಗಿರುವದು.

ಕೃಶಃ ಕಾಣಃ ಖಂಜಃ ಶ್ರವಣ ರಹಿತಃ ತುಚ್ಛವಿಕಲೋ
ವ್ರಣಿ ಪೂಯಕ್ಲಿನ್ನಃ ಕೃಮಿಕುಲ ಶತೈರಾವೃತತನುಃ

ಕ್ಷುಧಾ ಕ್ಷಾಮೋ ಜೀರ್ಣಃ ಪಿಠರಕ ಕಪಾಲಾರ್ಪಿತಗಲಃ
ಶುನಿ ಮನ್ವೇತಿ ಶ್ವಾ ಹತಮಪಿ ನಿಹಂತ್ಯೇವ ಮದನಃ || ೬೩ ||

ಕಿವಿಗಳು ಹರಿದು ಹೋಗಿರುವ, ಕುಂಟುತ್ತಿರುವ ಹಾಗು ಬಾಲವು ಕತ್ತರಿಸಲ್ಪಟ್ಟ ನಾಯಿಯು, ತನ್ನ ಮೈಮೇಲೆ ಅನೇಕ ಗಾಯಗಳಾಗುತ್ತಿದ್ದರೂ, ಅವುಗಳೊಳಗಿಂದ—ಆ ಗಾಯಗಳೊಳಗಿಂದ—ಕೀವು ಹಾಗು ರಕ್ತಗಳು ಒದೇ ಸವನೆ ಸೋರುತ್ತಿದ್ದರೂ, ಆ ಗಾಯದೊಳಗೆ ಹುಳುಗಳು ಬಿದ್ದು ದುರ್ವಾಸನೆಯು ಬರುತ್ತಿದ್ದರೂ, ಅದು ಅವೆಲ್ಲವುಗಳನ್ನು ಪರಿಗಣಿಸದೆ, ಲಕ್ಷಕ್ಕೆ ತಾರದೆ ಹೆಣ್ಣು ನಾಯಿಯ ಹಿಂದೆ ಓಡುವದು. ಓಹ್! ಕಾಮದೇವನು ಮಹಾ ನಿರ್ದಯಿಯು. ಸತ್ತವನ ಮೇಲೆಯೂ ಆಕ್ರಮಣ ಮಾಡಲು ಹಿಂದೆ—ಮುಂದೆ ನೋಡುವದಿಲ್ಲ.

ನಾಯಿಯು ಸಾಕಷ್ಟು ಕ್ಲೇಶಗಳಿಂದ ಬರುತ್ತಿದ್ದರೂ, ಶರೀರದೊಳಗೆ ಶಕ್ತಿಯು ಇರದಿದ್ದರೂ, ಹಸಿವೆಯಿಂದ ಬಳಲುತ್ತಿದ್ದರೂ ಕಾಮೋನ್ಮಾದದಿಂದ ಹೆಣ್ಣು ನಾಯಿಯ ಹಿಂದೆ ಓಡುವದು. ಇದರಿಂದ ಕಾಮದೇವನು ಮಹಾ ನೀಚನೂ, ನಿರ್ದಯಿಯೂ ಎಂಬುದು ವ್ಯಕ್ತವಾಗುವದು. ಏಕೆಂದರೆ ಸಾವಿರಾರು ತೊಂದರೆಗಳೊಳಗೆ ಸಿಲುಕಿ ಸಾಯುವವರ ಮೇಲೂ ಅವನು ಕಾಮ-ಬಾಣಗಳನ್ನು ಬಿಡಲು ಹಿಂದೆ-ಮುಂದೆ ನೋಡುವದಿಲ್ಲ. ಕಾಮದೇವನು ಇಂಥ ದುರ್ಬಲರಿಗೇ ಈ ರೀತಿ ಪೀಡಿಸುತ್ತಿರುವಾಗ ಒಳ್ಳೆಯ ಆಹಾರವನ್ನು ಸೇವಿಸಿ, ಆರೋಗ್ಯವಂತರಾಗಿರುವಂಥವರಿಗೆ ಏನು ಮಾಡಲಿಕ್ಕಿಲ್ಲ ?

ಸ್ತ್ರೀ ಮುದ್ರಾಂ ಝಷಕೇತನಸ್ಯ ಪರಮಾಂ ಸರ್ವಾರ್ಥ ಸಂಪತ್ಕರಿಂ
ಏ ಮೂಢಾಃ ಪ್ರವಿಹಾಯ ಯಾಂತಿ ಕುಧಿಯೋ
ಮಿಥ್ಯಾಫಲಾನ್ವೇಷಿಣಃ
ತೇ ತೇನೈವ ನಿಹತ್ಯ ನಿರ್ದಯತರಂ ನಗ್ನೀಕೃತಾ ಮುಂಡಿತಾಃ
ಕೇಚಿತ್ಪಂಚ ಶಿಖೀಕೃತಾಶ್ಚ ಜಟಿಲಾಃ ಕಾಪಾಲಿಕಾಶ್ಚಾಪರೇ || ೬೪ ||

ಸರ್ವ ಸುಖ ಸಂಪದಗಳನ್ನೀಯುವಂಥ ಕಾಮದೇವನ ಮುದ್ರಾರೂಪಿಯಾದ ಸ್ತ್ರೀಯನ್ನು ಯಾವ ಮೂರ್ಖನು ತ್ಯಜಿಸಿ, ಸ್ವರ್ಗವನ್ನು ಸೇರಬೇ

ಕೆಂಬ ಲವಲವಿಕೆಯಿಂದ, ಮನೆಯಿಂದ ಹೊರಬಿದ್ದಂಥವರನ್ನು ವಿರಕ್ತರೆಂದು ಭಾವಿಸಲಾಗದು. ಅವರಿಗೆ ಕಾಮದೇವನು ನಾನಾಬಗೆಯ ಶಿಕ್ಷೆಗಳನ್ನು ಕೊಟ್ಟಿದ್ದಾನೆ. ಅಂತೆಯೇ ಅಂಥ ವಿರಕ್ತರಲ್ಲಿಯ ಕೆಲವರು ಬತ್ತಲೆಯಾಗಿ ತಿರುಗುವರು, ಕೆಲವರು ತಲೆ ಬೋಳಿಸಿಕೊಂಡು ಅಡ್ಡಾಡುತ್ತಿದ್ದಾರೆ. ಮತ್ತೆ ಕೆಲವರು ತಲೆಯ ಮೇಲೆ ನಾಲ್ಕಾರು ಕೂದಲೆಳೆಗಳನ್ನು ಇರಿಸಿಕೊಂಡಿರುವರು, ಕೆಲವರು ಜಟಾಧಾರಿಗಳಾಗಿರುವರು. ಇನ್ನು ಹಲವರಂತೂ ಕೈಯೊಳಗೆ ಹರಿವಾಣವನ್ನು ಹಿಡಿದು ಭಿಕ್ಷೆ ಬೇಡುತ್ತ ತಿರುಗುತ್ತಿದ್ದಾರೆ.

ಸ್ತ್ರೀಯು ಕಾಮದೇವನ ಮುದ್ರೆ-ಮೊಹರು-ಆಗಿರುವಳು. ರಾಜ-ಮುದ್ರಿಕೆಯನ್ನು-ರಾಜಮೊಹರನ್ನು—ಅನಾದರದಿಂದ ಕಾಣುವಂಥ ಅರಸನು ನಾನಾ ಬಗೆಯ ತೊಂದರೆಗಳಿಗೀಡಾಗುವಂತೆ ಕಾಮದೇವನ ಮುದ್ರಿಕೆಯಾದ ಸ್ತ್ರೀಯನ್ನು ಆದರದಿಂದ ಕಾಣದಂಥವರನ್ನು—ಸ್ತ್ರೀಯನ್ನು ತುಚ್ಛರೆಂದು ಭಾವಿಸಿದವನು—ನಾನಾ ಬಗೆಯ ಸಂಕಟಗಳಿಗೆ ಸಿಲುಕುವದು ಸ್ವಾಭಾವಿಕವಾಗಿರುವದು.

ವಿಶ್ವಾಮಿತ್ರ ಪರಾಶರ ಪ್ರಭೃತಯೋ ವಾತಾಂಬು ಪರ್ಣಾಶನಾ-
ಸ್ತೇಪಿ ಸ್ತ್ರೀ ಮುಖ ಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂ
ಗತಾಃ ।
ಶಾಲ್ಯನ್ನಂ ಸಘೃತಂ ಪಯೋದಧಿಯುತಂ ಭುಂಜಂತಿ ಏ ಮಾನವಾ-
ಸ್ತೇಷಾ ಮಿಂದ್ರಿಯ ನಿಗ್ರಹೋ ಯದಿ ಭವೇದ್ವಿಂಧ್ಯಸ್ತರೇತ್ಸಾಗರಮ್
|| ೬೫ ||

ವಾಯು, ಜಲ ಹಾಗು ಸೊಪ್ಪು-ಎಲೆ-ಗಳನ್ನು ತಿಂದು ಕಾಲಹರಣ ಮಾಡಿದಂಥ, ವಿಶ್ವಾಮಿತ್ರ, ಪರಾಶರ ಹಾಗು ಶೃಂಗಿಗಳಂತಹ ದೊಡ್ಡ ದೊಡ್ಡ ಮುನಿಪುಂಗವರು ಸ್ತ್ರೀಯರ ಮುಖ ಕಮಲಗಳನ್ನು ನೋಡಿ ಮೋಹಿತರಾಗಿ ಬಿಟ್ಟರು. ಅಂದಾಗ, ಹಾಲು, ತುಪ್ಪ, ಮೊಸರುಗಳಂತಹ ನಾನಾಬಗೆಯ ಶಕ್ತಿವರ್ಧಕ ಖಾದ್ಯವನ್ನು ಸೇವಿಸುತ್ತಿರುವಂಥ ಮಾನವರು

ಇಂದ್ರಿಯುಗಳನ್ನು ತಮ್ಮ ಅಧೀನದಲ್ಲಿರಿಸಿಕೊಳ್ಳುವದು ಹೇಗೆ ಸಾಧ್ಯವಿದೆ ? ಒಂದು ವೇಳೆ ಅವರು ತಮ್ಮ ಇಂದ್ರಿಯುಗಳನ್ನು ಸ್ವಾಧೀನ ಪಡಿಸಿಕೊಂಡುದೇ ಆದರೆ ಅದು, ವಿಂದ್ಯಾಚಲ ಪರ್ವತವು ಸಾಗರದಲ್ಲಿ ತೇಲುವಂತಹ ಆಶ್ಚರ್ಯ ಕರವಾದಂಥ ಸಂಗತಿಯಾದೀತು.

ಕಾಮದೇವನು ಮಹಾಬಲಶಾಲಿಯಾಗಿರುವನು. ಅವನು ಗಾಳಿ— ನೀರು ಹಾಗು ಎಲೆಗಳನ್ನು ತಿಂದು ಬದುಕಿದಂಥ ದೊಡ್ಡ ದೊಡ್ಡ ತಪಸ್ವಿ ಗಳನ್ನೇ ಬಿಡಲಿಲ್ಲ. ಅಂದಾಗ ಹಾಲ-ಬೆಣ್ಣೆಗಳನ್ನು ತಿನ್ನುವವರು ಅವ ನಿಂದ ಉಳಿಯುಲು ಎಂದಿಗಾದರೂ ಸಾಧ್ಯವಿದೆಯೇ ? ವಿಶ್ವಾಮಿತ್ರನು ಮೇನಕೆಯು ಸೌಂದರ್ಯದೆದುರು ಕೈಯೂರಿ ತನ್ನ ತಪಸ್ಸನ್ನು ಬದಿಗಿರಿಸಿ ಅವಳೊಂದಿಗೆ ಸಂಸಾರವನ್ನು ಪ್ರಾರಂಭಿಸಿದನು; ದೊಡ್ಡ ತಪಸ್ವಿಯೆಂದ ಕರೆಯಿಸಿಕೊಳ್ಳುವಂಥ ಪರಾಶರನು ಕೂಡ ಕುಳಿತಿರುವಂತೆಯೇ ನಾವಿಕನ ಮಗಳನ್ನು ಮೋಹಿಸಿ, ನಾಚುಕೆ-ಲಜ್ಜೆಗಳನ್ನು ಬದಿಗೆ ತೆಗೆದಿರಿಸಿ ಹಗಲು ಹೊತ್ತಿನಲ್ಲಿಯೇ; ಅವಳ ನೌಕೆಯಲ್ಲಿಯೇ; ಅವಳೊಂದಿಗೆ ಮೈಥುನ ಕ್ರಿಯೆ ಯನ್ನು ನಡೆಸಿ ತೃಪ್ತನಾದನು. ಇಷ್ಟೇ ಅಲ್ಲ, ಶೃಂಗ-ಮರೀಚಿಗಳಂತಹ ಋಷಿಗಳು ಕೂಡ ವೇಶ್ಯೆಯುರ ಹಾವಭಾವಗಳಿಗೆ ಮನಸೋತು ಅವರೊಂದಿಗೆ ಸ್ವರ್ಗಸುಖವನ್ನು ಅನುಭವಿಸಿದರು. ಮಹಾನುಭಾವರೆಂದು ಜನರಿಂದ ಕರೆಯಿಸಿಕೊಳ್ಳುತ್ತಿರುವಂಥವರೇ ಸ್ತ್ರೀಯುರೆದುರು ಆ ರೀತಿ ಬಾಗಿ ಹೋಗಿರು ವಾಗ ಇನ್ನುಳಿದವರ ಪಾಡೇನು ?

ದುರ್ವಿರಕ್ತ ವರ್ಣನೆ ಮುಗಿಯಿತು.



# ಸ್ತ್ರೀ ಪರಿತ್ಯಾಗ ಪ್ರಶಂಸೆ

ಸಂಸಾರೇಸ್ಮಿನ್ನ ಸಾರೇ ಕುನೃಪತಿ ಭವನದ್ವಾರ ಸೇವಾವಲಂಬ
ವ್ಯಾಸಂಗ ಧ್ವಸ್ತ ಧೈರ್ಯಂ ಕಥಂ ಮಲಧಿಯೋ ಮಾನಸಂ
ಸನ್ನಿದಧ್ಯುಃ
ಯದ್ಯೇತಾಃ ಪ್ರೋದ್ಯದಿಂದು ದ್ಯುತಿನಿ ಚಯಭೃತೋ ನ
ಸ್ಯುರಂಭೋಜನೇತ್ರಾಃ
ಪ್ರೇಂಖತ್ಕಾಂಚೀ ಕಲಾಪಾಃ ಸ್ತನಭರವಿನ ಮನ್ಮಧ್ಯ
ಭಾಗಾಸ್ತರುಣ್ಯಃ ||೬೬||

ಒಂದು ವೇಳೆ ನಿಃಸಾರವಾದ ಈ ಸಂಸಾರದೊಳಗೆ ಚಂದ್ರಬಿಂಬ ದಂತಹ ಮುಖಕಾಂತಿಯುಳ್ಳವಳು, ಕಮಲದಂತಹ ಕಣ್ಣುಗಳುಳ್ಳವಳು, ನೇತಾಡುತ್ತಿರುವಂಥ ಕರ್ಧನಿಯನ್ನು ಸೊಂಟದಲ್ಲಿ ಧರಿಸಿದಂಥವಳು, ಸ್ತನ ಗಳ ಭಾರದಿಂದಾಗಿ ಬಾಗಿದ ನಡವುಳ್ಳ ಸ್ತ್ರೀಯರು ಇರದೇ ಹೋಗಿದ್ದರೆ, ನಿರ್ಮಲಬುದ್ಧಿಯ ಮನುಷ್ಯರು ದುಷ್ಟರಾದ ಅರಸರ ದ್ವಾರಪಾಲಕರಾಗಿ ನಾನಾ ಬಗೆಯ ಕಷ್ಟಗಳನ್ನು ಅನುಭವಿಸುತ್ತ ಅಧೀರಚಿತ್ತವುಳ್ಳವರಾಗು ತ್ತಿರಲಿಲ್ಲ.

ಪುರುಷರು ಹೊಟ್ಟೆಪಾಡಿಗಾಗಿ ಶ್ರೀಮಂತರ; ಸಂಸ್ಥಾನಿಕರ ಬಾಗಿಲು ಕಾಯುವ ಕಾರ್ಯವನ್ನು ಕೈಕೊಳ್ಳಬೇಕಾಗುತ್ತದೆ. ಆ ನೌಕರಿಯಲ್ಲಿ ಅವರಿಗೆ ಎಷ್ಟೇ ಅಪಮಾನವಾದರೂ ಸಹಿಸಿಕೊಂಡಿರಬೇಕಾಗುತ್ತದೆ. ಹಾಗು ಸಾಮಾನ್ಯ ತರಗತಿಯ ಅನೇಕ ಕಿರುಕುಳಗಳನ್ನು ತಾಳಿಕೊಳ್ಳಬೇಕಾಗುತ್ತದೆ ಆದರೆ ಇಷ್ಟೆಲ್ಲ ತೊಂದರೆಗಳನ್ನು; ಅಪಮಾನವನ್ನು ಆವನು ಏತಕ್ಕೆ ಸಹಿಸಿ ಕೊಳ್ಳಬೇಕು ? ಹಾಗೆ ಸಹಿಸಿಕೊಂಡಿರಲು ಯಾವುದಾದರೂ ಕಾರಣವು ಇರಲೇ ಬೇಕಲ್ಲವೇ ? ಹಾಗಿದ್ದರೆ ಅದು ಯಾವುದು ? ಅದು ಬೇರಾ

ವ್ವುದೂ ಅಿಲ್ಲ. ಅವನ ಮನೆಯೊಳಗಿರುವ ಸುಂದರ ಪತ್ನಿ. ಅವಳಿಗಾಗಿ, ಅವಳನ್ನು ಸಂತೋಷಪಡಿಸುವದಕ್ಕಾಗಿ ಪುರುಷನು ನಾನಾ ಬಗೆಯ ಕೀಟಲೆಗಳನ್ನು ನಗು ನಗುತ್ತ ಸಹಿಸಬೇಕಾಗುತ್ತದೆ. ಅರ್ಥಾತ್ ಸ್ತ್ರೀಯರಿಗಾಗಿ ಏನೆಲ್ಲವನ್ನೂ ಮಾಡಬೇಕಾಗುತ್ತದೆ.

ಸಿದ್ಧಾಧ್ಯಾಸಿತ ಕಂದರೇ ಹರವೃಷ ಸ್ಕಂಧಾವ ಗಾಢದ್ರುಮೇ
ಗಂಗಾಧೌತ ಶಿಲಾತಲೇ ಹಿಮವತಃ ಸ್ಥಾನೇಸ್ಥಿತೇ ಶ್ರೇಯಸಿ ।
ಕಃ ಕುರ್ವಿತ ಶಿರಃ ಪ್ರಣಾಮ ಮಲಿನಂ ಮ್ಲಾನಂ ಮನಸ್ವೀಜನೋ
ಯದ್ವಿತ್ರಸ್ತ ಕುರಂಗರಾವ ನಯನಾ ನಸ್ಯುಃ ಸ್ಮರಾಸ್ತ್ರಂ
ಸ್ತ್ರಿಯಃ ॥೬೭॥

ಕಾಮಪೀಡೆಯಿಂದ ವ್ಯಾಕುಲಗೊಂಡ ಹರಿಣಾಕ್ಷಿಯರಾದ ಸುಂದರ ಕಾಮಿನಿಯರು ಒಂದು ವೇಳೆ ಈ ಭೂಲೋಕದೊಳಗೆ ಇರದೆ ಹೋಗಿದ್ದರೆ, ಸಿದ್ಧ ಪುರುಷರ ಹಾಗು ಮಹಾತ್ಮರ ಗುಹೆಗಳು, ಮಹಾದೇವನ ವಾಹನವಾದ ನಂದೀಶ್ವರನ–ಎತ್ತಿನ–ಹೆಗಲನ್ನು ಘರ್ಷಿಸುವಂಥ ವೃಕ್ಷ ಹಾಗು ಗಂಗಾಜಲದಿಂದ ಪವಿತ್ರವಾದ ಶಿಲೆಗಳುಳ್ಳಂಥ ಹಿಮಾಲಯದ ಸ್ಥಾನವನ್ನು ಬಿಟ್ಟು, ಎರಡನೆಯವರೆದುರು ಹೋಗಿ ತಲೆಯನ್ನು ಬಾಗಿಸಿ ದೀನವದನರಾಗಿ ತಮ್ಮ ಮನವನ್ನು ಯಾವ ಬುದ್ಧಿವಂತ ಪುರುಷನೂ ಮಲಿನಗೊಳಿಸುತ್ತಿದ್ದಿಲ್ಲ.

ಈ ಜಗತ್ತಿನೊಳಗೆ ಕೇವಲ ಸ್ತ್ರೀಯರಿಗಾಗಿ ಪುರುಷರು ನಾನಾಬಗೆಯ ಸಂಕಟಗಳನ್ನು ಎದುರಿಸಬೇಕಾಗುತ್ತದೆ. ಎಷ್ಟೋ ಕಡೆಗೆ ಅಮಾನಿತರಾಗಬೇಕಾಗುತ್ತದೆ. ಒಂದು ವೇಳೆ ಸ್ತ್ರೀಯರು ಇರದೆ ಹೋಗಿದ್ದರೆ, ಪುರುಷರೆಲ್ಲ ಹಿಮಾಲಯಕ್ಕೋ ಇಲ್ಲವೆ ಗಂಗಾತೀರದಲ್ಲಿ ಕುಳಿತುಕೊಂಡೋ ಶಿವನಚಿಂತನೆಯಲ್ಲಿ ಮಗ್ನರಾಗಿರುತ್ತಿದ್ದರು. ಹಾಗು ತಮ್ಮ ಜೀವನವನ್ನು ಸಂತೋಷದಿಂದ, ಸುಖ–ಸಮಾಧಾನಗಳಿಂದ ಕಳೆಯುತ್ತಿದ್ದರು. ಆಗ ಅವರಿಗೆ ತಮ್ಮ ಮಾನ ಹಾಗು ಪ್ರತಿಷ್ಠೆಗಳನ್ನು ಕಳೆದುಕೊಂಡು ಕಂಡವರೆದುರು ದೀನವದನರಾಗಿ ನಿಂತುಕೊಳ್ಳುವ ಆವಶ್ಯಕತೆಯೇ ಇರುತ್ತಿದ್ದಿಲ್ಲ. ಅದಕ್ಕಾಗಿ ಸ್ತ್ರೀಯರಿ

ಗಾಗಿಯೇ ಪುರುಷ ವರ್ಗವು ನಾನಾತರದ ಬವಣೆಪಡಬೇಕಾಗುತ್ತದೆಂಬುದು ತ್ರಿವಾರ ಸತ್ಯಸಂಗತಿಯಾಗಿದೆ.

ಸಂಸಾರ ತವ ನಿಸ್ತಾರ ಪದವಿ ನ ದವೀಯಸಿ ।
ಅಂತರಾ ದುಸ್ತರಾ ನ ಸ್ಯುರ್ಯದಿ ರೇ ಮದಿರೇಕ್ಷಣಾಃ ॥೬೮॥

ಓ ಜಗತ್ತೇ! ನಿನ್ನ ಒಡಲೊಳಗೆ ಕಾಮೋನ್ಮಾದದಿಂದ ಮತ್ತರಾದ ವಾರಿಜಾಕ್ಷಿಯರಾದ ಸ್ತ್ರೀಯರು ಇರದೇ ಹೋಗಿದ್ದರೆ ನೀನು ಮುಂದುವರಿಯಲು ಯಾವುದೇ ಬಗೆಯ ಆತಂಕಗಳಿರಲಿಲ್ಲ. ಅಂದರೆ ಸ್ತ್ರೀಯಿಂದಾಗಿಯೇ ಜಗತ್ತು ಹೀಗಾಗಿದೆಯೆಂದರ್ಥ.

ಮಾನವನು ಈ ಜಗತ್ತಿನಲ್ಲಿ ಕರ್ಮ-ಬಂಧನ ಹಾಗು ಜನನ-ಮರಣಗಳ ಜಂಜಡದಿಂದ ತಪ್ಪಿಸಿಕೊಳ್ಳಲೋಸುಗ ಬರುತ್ತಾನೆ. ಮೋಕ್ಷ ಸಾಧನೆಗಾಗಿಯೇ ಅವನಿಗೆ ಮಾನವ ದೇಹವು ದೊರೆತಿರುತ್ತದೆ. ಇಷ್ಟೆಲ್ಲ ಧ್ಯೇಯಗಳನ್ನಿರಿಸಿಕೊಂಡು ಹುಟ್ಟಿ ಬಂದ ಮಾನವನು ಬಾಲ್ಯವನ್ನು ಹಾರಾಟ-ಜಗಿದಾಟಗಳಲ್ಲಿ ಕಳೆಯುವನು. ತಾರುಣ್ಯವನ್ನು ಸ್ತ್ರೀಯರಿಗಾಗಿ, ಅವರ ವ್ಯಾಮೋಹಕ್ಕಾಗಿ ಕಳೆಯುವನು. ಆ ಸಮಯದಲ್ಲವನು ತನ್ನ ಕರ್ತವ್ಯ ಕರ್ಮಗಳನ್ನು ಮರೆತೇ ಬಿಡುವನು. ಅದಕ್ಕಾಗಿ ಈ ಜಗತ್ತಿನೊಳಗೆ ಸ್ತ್ರೀಯರೇ ಇರದಿದ್ದರೆ ಎಷ್ಟೊಂದು ಒಳ್ಳೆಯದಾಗುತ್ತಿತ್ತು! ಜಗತ್ತಿಗೆ ಎಷ್ಟು ಕಲ್ಯಾಣವಾಗುತ್ತಿತ್ತು, ಅಲ್ಲವೆ?

ಸ್ತ್ರೀ-ಪರಿತ್ಯಾಗ ಪ್ರಶಂಸೆ ಮುಗಿಯಿತು.



# ಯೌವನ ಪ್ರಶಂಸೆ

ರಾಜಂಸ್ತೃಷ್ಣಾಂಬುರಾಶೇರ್ನ ಹಿ ಜಗತಿ ಗತಃ ಕಶ್ಚಿದೇವಾವಸಾನಂ
ಕೋವಾಽರ್ಥೋಽರ್ಥೈಃ ಪ್ರಭೂತೈಃ ಸ್ವವಪುಷಿ ಗಲಿತೇ
ಯೌವನೇ ಸಾನುರಾಗೇ
ಗಚ್ಛಾಮಃ ಸದ್ಮ ಯಾವದ್ವಿಕಸಿತ ನಯನೇಂದೀವರಾಲೋಕಿ
ನೀನಾ—
ಮಾಕ್ರಮ್ಯಾಕ್ರಮ್ಯ ರೂಪಂ ಝಟಿತಿ ನ ಜರಯಾಲುಪ್ಯತೇ
ಪ್ರೇಯಸೀನಾಮ್ ||೬||

ಓ ಅರಸನೆ! ಈ ತೃಷೆಯ ರೂಪದ ಸಮುದ್ರವನ್ನು ದಾಟಿ ಯಾವನೂ ಈ ವರೆಗೆ ಆಚೆಗೆ ಹೋಗಿಲ್ಲ. ಬಹು ಮೂಲ್ಯದ ಪ್ರಿಯವಾದ ತಾರುಣ್ಯವು ಕಳೆದು ಹೋದನಂತರ ಎಷ್ಟು ಹಣವನ್ನು ಕೂಡಿಸಿಟ್ಟರೆ ಬರುವ ಲಾಭವೇನು? ನಾವು ಶೀಘ್ರದಲ್ಲಿಯೇ ನಮ್ಮ ಮನೆಗೆ ಹೋಗಬೇಕಾಗಿದೆ. ಒಂದು ವೇಳೆ ನಾವು ಬೇಗ ಹೋಗದಿದ್ದರೆ ವಿಕಸಿತ ಕಮಲಗಳಂತಹ ಕಣ್ಣುಗಳುಳ್ಳ ನಮ್ಮ ಪ್ರಿಯತಮೆಯರ ರೂಪವು ವೃದ್ಧಾವಸ್ಥೆಯಿಂದ ಬಳಲಿ, ಬಾಡಿ, ಕುಂದಿ ಹೋಗಬಹುದು. ಆಗ ಅಂದರೆ ನಮ್ಮ ಪ್ರಿಯತಮೆಯರು ವೃದ್ಧೆಯರಾದಾಗ ಹೋಗಿ ಉಪಯೋಗವಾದರೂ ಏನು?

ದೊರೆಯೆ! ತೃಷೆಯೆಂಬ ಪಿಶಾಚಿಗೆ ಅಂತವೆಂಬುದು ಎಲ್ಲಿಯೂ ಇಲ್ಲ. ಅದು ದಿನ ದಿನಕ್ಕೆ ಬೆಳೆಯುತ್ತ ಹೋಗುವುದೇ ವಿನಾ ಕಡಿಮೆಯಾಗುವದಿಲ್ಲ. ಮನುಷ್ಯನ ಆಯುಷ್ಯವು ಕ್ಷೀಣಿಸಿ ಹೋಗುತ್ತದಲ್ಲದೆ ಅವನ ತೃಷೆಯು ಮಾತ್ರ ಹೆಚ್ಚುತ್ತಲೆ ಹೋಗುವದು. ಬಹಳಷ್ಟು ಧನ ಸಂಚಯವಾದಾಗ ಅವನ ಕೂದಲುಗಳು ಬೆಳ್ಳಗಾಗಿ ಬಿಟ್ಟಿರುತ್ತವೆ. ಅವನ ಪ್ರಿಯತಮೆಯ ತುಂಬಿದ ಗಲ್ಲಗಳಲ್ಲಿ ನೆರಿಗೆ ಕಾಣಿಸಿಕೊಂಡಿರುತ್ತವೆ. ಆಗ ಐಶ್ವರ್ಯವನ್ನು

ತೆಗೆದುಕೊಂಡು ಮಾಡುವವೇನು ? ಅಂತೆಯೇ ಇದ್ದುದರಲ್ಲಿ ತೃಪ್ತಿಪಟ್ಟು ಸುಖಿಗಳಾಗಬೇಕು.

ರಾಗಸ್ಯಾಗಾರ ಮೇಕಂ ನರಕಶತಮಹಾ ದುಃಖ ಸಂಪ್ರಾಪ್ತಿಹೇತು—
ರ್ಮೋಹಸ್ಯೋತ್ಪತ್ತಿ ಬೀಜಂ ಜಲಧರ ಪಟಲಂ ಜ್ಞಾನತಾರಾಧಿಪಸ್ಯ
ಕಂದರ್ಪಸ್ಯೈಕಮಿತ್ರಂ ಪ್ರಕಟಿತ ವಿಧ ಸ್ಪಷ್ಟದೋಷ ಪ್ರಬಂಧಂ,
ಲೋಕೇಸ್ಮಿನ್ನಹ್ಯನರ್ಥಂ ನಿಜಕುಲದಹನಂ ಯೌವನಾದನ್ಯದಸ್ತಿ||೭೦||

ಅನುರಾಗದ ಅರಮನೆ, ನರಕದ ನಾನಾ ಪ್ರಕಾರದ ದುಃಖಗಳ ಉದ್ದೇಶ, ಮೋಹದ ಉತ್ಪತ್ತಿಯ ಬೀಜ, ಜ್ಞಾನ ರೂಪದ ಚಂದ್ರಬಿಂಬವನ್ನು ಮರೆಮಾಡುವಂಥ ಮೇಘ ಸಮೂಹ, ಕಾಮದೇವನ ಜೀವನಗೆಳೆಯ ನಾನಾ ಬಗೆಯ ದೋಷಗಳನ್ನು ಸ್ಪಷ್ಟವಾಗಿ ಪ್ರಕಟಿಸುವಂಥದು, ಹಾಗೂ ತನ್ನ ಕುಲವನ್ನೇ ನಾಶ ಮಾಡುವಂಥದು ಈ ಜಗತ್ತಿನೊಳಗೆ ತಾರುಣ್ಯದ ಹೊರ್ತು ಬೇರಾವುದೂ ಇಲ್ಲವೆಂದು ಹೇಳಬಹುದು.

ಮನುಷ್ಯನಿಗೆ ಪ್ರೇಮದ ಪಿಶಾಚಿಯು ಹಿಡಿದುಕೊಂಡರೆ ಅವನಿಗೆ ಯಾವುದೂ ಕಾಣಿಸುವದಿಲ್ಲ. ಅವನು ಜ್ಞಾನಿಯೇ ಆಗಿರಲಿ, ಮಹಾಪಂಡಿತನೇ ಆಗಿರಲಿ ಒಂದು ಸಲ ಪ್ರೇಮದ ಕೈಯೊಳಗೆ ಸಿಲುಕಿದನೆಂದರೆ ಅಲ್ಲಿಗೆ ಅವನ ಕಥೆಯೇ ಮುಗಿದು ಹೋಗುತ್ತದೆ. ಆಗ ಅವನು ಕಣ್ಣಿದ್ದೂ ಕುರುಡನಂತೆ ವರ್ತಿಸ ತೊಡಗುತ್ತಾನೆ. ಒಂದು ವೇಳೆ ಅಂಥ ಸಮಯದಲ್ಲಿ ಅಂದರೆ ಪ್ರೇಮದ ಭೂತವು ಬಡಿದುಕೊಂಡಿರುವಂಥ ಸಮಯದಲ್ಲಿ ಅವನ ಮನದಿಚ್ಛೆಯು ಪೂರ್ಣವಾಗದೆ ಹೋದರೆ ಅವನು ಏನನ್ನು ಮಾಡಬಹುದು: ಏನನ್ನು ಮಾಡಲಾರನು ಎಂದು ಹೇಳುವದೇ ಕಷ್ಟವಾಗುವದು. ಆಗ ಅವನು ಭಯ ಲಜ್ಜೆ, ತನ್ನವರು, ಪರರು, ಗುರು—ಹಿರಿಯರು ಎಂಬುದನ್ನೆಲ್ಲ ಮರೆತು ಬಿಟ್ಟಿರುತ್ತಾನೆ. ಅವನೆದುರು ಕೇವಲ ಒಂದೇ ಒಂದು ಗುರಿ ಇರುತ್ತದೆ, ಅದುವೇ ಹೆಣ್ಣು. ಆ ಹೆಣ್ಣನ್ನು ಸ್ವಾಧೀನಪಡಿಸಿಕೊಳ್ಳಲೋಸುಗ ಅವನು ತನ್ನ ಬಾಂಧವರನ್ನು ಕೊಲ್ಲಲು ಕೂಡ ಹಿಂದೆ—ಮುಂದೆ ನೋಡಲಾರನು. ಅಂತು ತಾರುಣ್ಯದ ಮಹಿಮೆಯು ವಿಚಿತ್ರವಾದುದು.

ಶೃಂಗಾರ ದ್ರುಮನೀರದೇ ಪ್ರಚುರತ: ಕ್ರೀಡಾರಸ ಸ್ರೋತಸಿ
ಪ್ರದ್ಯುಮ್ನ ಪ್ರಿಯ ಬಾಂಧವೇ ಚತುರತಾ ಮುಕ್ತಾ ಫಲೋದನ್ವತಿ।
ತನ್ವೀ ನೇತ್ರ ಚಕೋರ ಪಾರ್ವಣ ವಿಧೌ ಸೌಭಾಗ್ಯಲಕ್ಷ್ಮೀ ನಿಧೌ
ಧನ್ಯಃ ಕೋಪಿ ನ ವಿಕ್ರಿಯಾಂ ಕಲಯತಿ ಪ್ರಾಪ್ತೇ ನವೇ ಯೌವನೇ
॥ ೭೧ ॥

ಶೃಂಗಾರರೂಪದ ವೃಕ್ಷಗಳನ್ನು ಬೆಳೆಯಿಸುವರು, ಕ್ರೀಡಾರಸವು ವಿಸ್ತಾರ ವಾಗಿ ಪ್ರವಹಿಸುವಂತೆ ಮಾಡುವವರು; ಕಾಮದೇವನ ಅಪ್ತೀಯ ಮಿತ್ರರು, ರೂಪದ ಮುತ್ತುಗಳ ಸಾಗರ, ಕಾಮಿನಿಯರ ನೇತ್ರರೂಪದ ಚಕೋರಗಳಿಗೆ ಪೂರ್ಣಚಂದ್ರ, ಸೌಭಾಗ್ಯಲಕ್ಷ್ಮಿಯ ಭಾಂಡಾರ ಇವುಗಳನ್ನೆಲ್ಲ ತಾರುಣ್ಯವು ಪಡೆದುಕೊಂಡು ವಿಕಾರಕ್ಕೆ ವಶನಾಗಿದ್ದರೆ ಖಂಡಿತವಾಗಿಯೂ ಅವನನ್ನು ಭಾಗ್ಯವಂತನೆಂದೇ ಭಾವಿಸಬೇಕು.

ತಾರುಣ್ಯವು ವಿಷಯ ವಾಸನೆಯನ್ನು ಹೆಚ್ಚಿಸುವಂಥ ಹಾಗು ಭೋಗ ವಿಲಾಸಗಳಲ್ಲಿ ತಲ್ಲೀನರಾಗಿರುವಂಥ ಕಾಲವಾಗಿದೆ. ಅಂತೆಯೇ ಅದು ಸ್ತ್ರೀಯರಿಗೆ ಪ್ರಿಯವಾಗಿರುವ, ಚಾತುರ್ಯ ಮತ್ತು ಸುಖ ಸಂಪತ್ತಿಗಳ ಖಣಿಯಾಗಿರುವದು. ತಾರುಣ್ಯದಲ್ಲಿ ಮನುಷ್ಯನಿಗೆ ಭೋಗವಿಲಾಸದ ಇಚ್ಛೆಯು ಬಹಳ ತೀವ್ರವಾಗುವದು. ಅಂತೆಯೇ ಅದು ಬಲು ಸೂಕ್ಷ್ಮ ವಾದ ಸಮಯವಾಗಿರುವದು. ಈ ಅವಸ್ಥೆಯಲ್ಲಿ—ತಾರುಣ್ಯಾವಸ್ಥೆಯಲ್ಲಿ—ಪುರುಷನು ಇಂದ್ರಿಯಗಳನ್ನು ತನ್ನಾಧೀನದೊಳಗಿರಿಸಿಕೊಂಡರೆ, ಅಡ್ಡದಾರಿ ಯನ್ನು ಹಿಡಿಯದೆ ಹೋದರೆ ಅವನಂತಹ ಭಾಗ್ಯಶಾಲಿಯು ಬೇರಾರೂ ಇಲ್ಲವೆಂದು ಧಾರಾಳವಾಗಿ ಹೇಳಬಹುದು.

ಆದರೆ ಹಾಗೆ ಇಂದ್ರಿಯಗಳನ್ನು ಅಧೀನದೊಳಗಿರಿಸಿಕೊಳ್ಳುವವರು ಬಹಳ ಕಡಿಮೆಯೆನ್ನಬಹುದು. ಆದರೆ ಮೈಯೊಳಗಿನ ರಕ್ತವು ಇಲ್ಲದಂತಾಗಿ ತಾರುಣ್ಯದಲ್ಲಿಯೇ ವೃದ್ಧಾಪ್ಯದ ಚಿಹ್ನೆಗಳು ತಲೆದೋರ ತೊಡಗಿದಾಗ

ಮಾತ್ರ ಅವರಲ್ಲಿಯ ಕಾಮಾಗ್ನಿಯು ಶಾಂತವಾಗ ತೊಡಗುವದು. ಆಗ ಅವರಿಗೆ ಕೊಂಚ ಕೊಂಚ ವಿವೇಕವು ಬರತೊಡಗುವದು. ಆದರೆ ಆಗ ಸಮಯವು ಮಿಂಚಿ ಹೋಗಿರುತ್ತದೆ. ಅಂಥ ಸಮಯದಲ್ಲಿ ವಿವೇಕವು ಬಂದರೆಷ್ಟು? ಹೋದರೆಷ್ಟು? ಅದಕ್ಕಾಗಿಯೇ ತಾರುಣ್ಯದಲ್ಲಿ ಇಂದ್ರಿಯ ಗಳನ್ನು ತನ್ನಾಧೀನದೊಳಗಿರಿಸಿಕೊಂಡು ವಾರಿಜಾಕ್ಷಿಯರು ಬೀಸುವ ಜಾಲ ಗಳಿಂದ ದೂರವಿರುವದು ಸ್ತುತ್ಯವಾದ ಕಾರ್ಯವಾಗಿದೆ.

ಆದರೆ ಹೆಣ್ಣಿನ ಜಾಲದೊಳಗೆ ಸಿಕ್ಕಲಾರದಂಥವರು ಜಗತ್ತಿನ ಇತಿ ಹಾಸದೊಳಗೆ ಎಲ್ಲಿಯೋ ಒಬ್ಬರು ಸಿಕ್ಕುತ್ತಾರೆ. ಮಹಾಭಾರತದ ಕಥೆಯಲ್ಲಿ ಭೀಷ್ಮ ಹಾಗು ಅಶ್ವತ್ಥಾಮರು ಬರುತ್ತಾರೆ. ಆವರು ಕಟ್ಟಾ ಬ್ರಹ್ಮಚಾರಿ ಗಳೆಂದು ಮಹಾಭಾರತವು ಸ ರುವದು. ಅವರು ತಮ್ಮ ಇಂದ್ರಿಯ ನಿಗ್ರಹ ದಿಂದಲೇ ಉನ್ನತಸ್ಥಾನವನ್ನು ಪಡೆದಿದ್ದಾರೆ. ವೀರ ಶಿರೋಮಣಿಗಳ ಪಂಕ್ತಿಗಳಿಗೇರಿದ್ದಾರೆ. ಇದರ ಮೇಲಿಂದ ಇಂದ್ರಿಯ ನಿಗ್ರಹವು ಎಂಥ ದೆಂಬುದು ಗೊತ್ತಾಗದಿರದು.

ಯೌವನ ಪ್ರಶಂಸೆ ಮುಗಿಯಿತು.



# ಕಾಮಿನಿ—ಗರ್ಹಣಾ—ಪ್ರಶಂಸೆ

ಕಾಂತೇತ್ಯುತ್ಪಲ ಲೋಚನೇತಿ ವಿಪುಲ ಶ್ರೋಣಿ ಭರೇತ್ಯುತ್ಸುಕಃ
ಪೀನೋತ್ತುಂಗ ಪಯೋಧರೋತಿ ಸುಮುಖಾಂಭೋಜೇತಿ ಸುಭ್ರೂ—
—ರಿತಿ ।
ದೃಷ್ಟ್ವಾ ಮಾದ್ಯತಿ ಮೋದತೇಽ ಭಿರಮತೆ ಪ್ರಸ್ತೌತಿ ವಿದ್ವಾನಪಿ,
ಪ್ರತ್ಯಕ್ಷಾ ಶುಚಿ ಪುತ್ರಿಕಾಂ ಸ್ತ್ರೀಯಮಹೋ ಮೋಹಸ್ಯ ದುಶ್ಚೇಷ್ಟಿ
ತಂ ||೭೨||

ಓಹ್ ! ಮೋಹದ ಮಹಿಮೆಯು ಅತಿ ವಿಚಿತ್ರವಾದುದಾಗಿದೆ ಏಕೆಂದರೆ ವಿದ್ವಾಂಸರೆಂದೆನ್ನಿಸಿಕೊಂಡ ದೊಡ್ಡ—ದೊಡ್ಡ ಪಂಡಿತರು ಕೂಃ ಪ್ರತ್ಯಕ್ಷ ಅಪವಿತ್ರತೆಯ ಪುತ್ಥಳಿಯಾದ ಸ್ತ್ರೀಯನ್ನು ನೋಡಿ ಮೋಹಿತರಾಗುತ್ತಾರೆ. ಅವರನ್ನು ಬಾಯಿತುಂಬ ಸ್ತುತಿಸುತ್ತಾರೆ. ಆನಂದಿತರಾಗುತ್ತಾರೆ. ಅವರೊಂದಿಗೆ ಸಮಾಗಮ ಮಾಡುತ್ತಾರೆ. ಹಾಗು ಉತ್ಕಂಠಿತರಾಗಿ : ಹೇ ಕಮಲನಯನೆ ! ಹೇ ವಿಶಾಲ ನಿತಂಬಿನಿ ! ಹೇ ವಿಶಾಲಾಕ್ಷಿ ! ಹೇ ಕಲ್ಯಾಣಿ! ಹೇ ಶುಭೆ ! ಹೇ ಪುಷ್ಪ ಪಯೋಧರೆ ! ಹೇ ಸುಂದರ ಬಾಹುಗಳುಳ್ಳವಳೇ ! ಎಂದು ಅನೇಕ ಸಂಬೋಧನಗಳಿಂದ ಅವಳನ್ನು ಸಂಬೋಧಿಸುವರು.

ಯಾವುದೇ ದೃಷ್ಟಿಯಿಂದ ನಾವು ವಿಚಾರ ಮಾಡಿದರೂ ಸ್ತ್ರೀಯು ಅಪವಿತ್ರತೆಯ ಉಗ್ರಾಣವಾಗಿರುವಳು. ಹೀಗಿದ್ದರೂ ಕೂಡ, ಅಜ್ಞಾನಿಗಳ ದಂತೂ ದೂರ ಉಳಿಯಿತು. ಬುದ್ಧಿವಂತರಾದ ಪಂಡಿತರೂ ಕೂಡ, ಅಂಥವಳಿಗೆ ಮೋಹಿತರಾಗಿ ಅವಳ ಅಂಗ ಸುಖವನ್ನು ಪಡೆದು ಬಾಯಿತುಂಬ ಹೊಗಳಲು ಪ್ರಾರಂಭಿಸುವವು; ನಿಜಕ್ಕೂ ಅಚ್ಚರಿಯ ಸಂಗತಿಯಾಗಿರುವದು. ಹೆಣ್ಣು ಏನು ? ಅವಳು ಎಷ್ಟೊಂದು ಅಪವಿತ್ರಳು ? ಎಂಬುದನ್ನು ಅರಿಯದವರು ಬೇಕಾದದ್ದು ಮಾಡಲಿ. ಆದರೆ ಎಲ್ಲವನ್ನೂ ತಿಳಿದವರೇ

ಬಹುಪು. ಆದರೆ ಎಲ್ಲವನ್ನೂ ತಿಳಿದವರೇ ಹಾಗೆ ಮಾಡಿದಾಗ, ಮಾಡುತ್ತಿರುವಾಗ ಅಂಥವರಿಗೆ ಏನೆನ್ನಬೇಕೋ ತಿಳಿಯದಾಗಿದೆ.

ಸ್ಮೃತಾ ಭವತಿ ತಾಪಾಯ ದೃಷ್ಟಾ ಚೋನ್ಮಾದವರ್ಧಿನಿ ।
ಸ್ಪೃಷ್ಟಾ ಭವತಿ ಮೋಹಾಯ ಸಾ ನಾಮ ದಯಿತಾ ಕಥಮ್ ॥೭೩॥

ಸ್ತ್ರೀಯು ಸ್ಮರಣ ಮಾತ್ರದಿಂದಲೇ ಸಂತಾಪವು ಉತ್ಪನ್ನವಾಗುವದು. ಅವರನ್ನು ಕಣ್ಣಾರೆ ನೋಡಿದರೆ ಉನ್ಮಾದವು ಹೆಚ್ಚತೊಡಗುವದು. ಸ್ವಲ್ಪ ಸ್ಪರ್ಶಿಸಿದರೆ ಸಾಕು ಮೋಹವನ್ನು ಹುಟ್ಟಿಸಿಬಿಡುವಳು. ಹೀಗಿರುವಂಥ ಆ ಸ್ತ್ರೀಯನ್ನು "ಪ್ರಾಣ ಪ್ರಿಯೆ"ಯೆಂದು 'ಜೀವಕ್ಕೆ ಬೇಕಾದವಳು' ಎಂದು ಏತಕ್ಕೆ ಕರೆಯುವರೋ ಅದೇ ತಿಳಿಯದಂತಾಗಿದೆ.

ಸ್ತ್ರೀಯರನ್ನು ಕೇವಲ ಜ್ಞಾಪಿಸಿಕೊಳ್ಳುವದರಿಂದ ಮನಸ್ಸಿನೊಳಗೆ ಒಂದು ಬಗೆಯ ವೇದನೆಯ ಉಂಟಾಗುವದು. ಅವರನ್ನು ನೋಡುವದರಿಂದ ಪುರುಷನು ವಿವಶನಾಗಿ ಬಿಡುವನು. ಒಂದು ಬಗೆಯ ಹುಚ್ಚನಂತಾಗುವನು. ಇನ್ನು ಅವ ನ್ನು ಸ್ಪರ್ಶಿಸುವದರಿಂದಲಂತೂ ಅವನಲ್ಲಿಯ ವಿವೇಕವೆಲ್ಲ ನಷ್ಟವಾಗಿ ಅದರ ಸ್ಥಾನವನ್ನು ಮೋಹವು ಆಕ್ರಮಿಸತೊಡಗುವದು. ಈ ರೀತಿಯಾಗಿ ಹೆಜ್ಜೆ-ಹೆಜ್ಜೆಗೂ ದುಃಖವನ್ನೀಯುವಂಥ ಸ್ತ್ರೀಯರನ್ನು ಪ್ರಾಣಪ್ರಿಯೆ, ಪ್ರಿಯತಮಗಳೇ ಮೊದಲಾದ ಹೆಸರುಗಳಿಂದ ಅದು ಹೇಗೆ ಕರೆಯುವರೋ ತಿಳಿಯದಂತಾಗಿದೆ.

ನಿಜಕ್ಕೂ ಸ್ತ್ರೀಯರು ದುಃಖ ಹಾಗು ಅಪವಾದಗಳ ಗಣಿಗಳಾಗಿರುವರು. ಆದರೆ ಸಾಮಾನ್ಯ ಜನರಿಗೆ ಇದಾವುದೂ ಗೊತ್ತಾಗುವದಿಲ್ಲ.—ಎಲ್ಲವನ್ನೂ ಅರಿತವರು ಕೂಡ ಅವಳ ಗುಲಾಮರಾಗುತ್ತಾರೆಂದ ಮೇಲೆ ತಿಳಿಯದೆ ಇದ್ದವರ ಪಾಡೇನು ? ಆ ಮಾತು ಬೇರೆ—ಹೀಗಾಗಲು ಅವಳಲ್ಲಿಯ ಆಕರ್ಷಣೆಯೇ ಕಾರಣರಾಗಿರುವದು. ಸುಂದರ ತರುಣಿಯೊಂದಿಗೆ ಒಂದು ಸಲ ಏಕ ದೃಷ್ಟಿಯಾದರೆ ಮುಗಿದೇ ಹೋಯಿತು. ಅವಳ ಜಾಲದೊಳಗಿಂದ ಆ

ಪುರುಷನು ತನ್ನ ಜೀವಮಾನದಲ್ಲಿ ಎಂದೆಂದಿಗೂ ಹೊರಬೀಳುವದು ಸಾಧ್ಯವಿಲ್ಲವೆಂದು ಧಾರಾಳವಾಗಿ ಹೇಳಬಹುದು.

ತಾವ ದೇವಾ ಮೃತಮಯಿ ಯಾವಲ್ಲೋಚನ ಗೋಚರಾ |
ಚಕ್ಷುಃ ಪಥಾದ ಪಗತಾ ವಿಷಾದ ಪ್ಯತಿರಿಚತೇ || ೭೪ ||

ಸ್ತ್ರೀಯು ಕಣ್ಣೆದುರಿಗೆ ಇರುವಾಗ ಮಾತ್ರ ಅಮೃತಮಯಳಾಗಿ ಕಾಣಿಸುವಳು. ಆದರೆ ಕೊಂಚ ಮರೆಯಾಗಿ ಬಿಟ್ಟರೆ ವಿಷಕ್ಕಿಂತಲೂ ಹೆಚ್ಚಿಗೆ ದುಃಖವನ್ನೀಯುವಂಥವಳಾಗುವಳು.

ಸುಂದರಿಯಾದ ತರುಣಿಯೋರ್ವಳು ಪುರುಷನ ಬಳಿಯಿದ್ದಾಗ ನಿಜವಾಗಿಯೂ ಅಮೃತಮಯಿಯಾಗುವಳು. ಏಕೆಂದರೆ ಅವಳು ತನ್ನ ಹಾವ-ಭಾವ, ಬೆಡಗುಬಿನ್ನಾಣಗಳಿಂದ. ಒನಪಿನ ಮಾತುಗಳಿಂದ ಪುರುಷನನ್ನು ತನ್ನಾಧೀನದೊಳಗೆ ತೆಗೆದುಕೊಂಡು ಬಿಡುವಳು. ಅದನ್ನೇ ಅವನು ತನ್ನ ಭಾಗ್ಯವೆಂದು ಭಾವಿಸುವನು. ಹಾಗು ಸ್ತ್ರೀಯು ತನ್ನ ಜೊತೆಗಿದ್ದಂಥ ಸಮಯವನ್ನು ರಸನಿಮಿಷಗಳು, ಅಮೃತ ತುಲ್ಯ ಸಮಯ-ಎಂದು ಭಾವಿಸುವನು. ಬಹುಶಃ ಎಲ್ಲ ಪುರುಷರೂ ಹಾಗೆಯೇ ಭಾವಿಸುತ್ತಾರೆಂಬ ಮಾತು ಬೇರೆ.

ಆದರೆ ಸ್ತ್ರೀಯು ಕಣ್ಣೆದುರಿಗೆ ಇರದಾಗ ಪರಿಸ್ಥಿತಿಯೇ ಬೇರೆಯಾಗುವದು. ಎಲ್ಲಿಲ್ಲದ ವಿಚಾರಗಳು ತಲೆಯೊಳಗೆ ಸೇರಿಕೊಳ್ಳುವವು. ಆಗಿನ ಒಂದೊಂದು ನಿಮಿಷಗಳು ಒಂದೊಂದು ಯುಗದಂತೆ ಭಾಸವಾಗುವವು. ಮನದೊಳಗೆ ವಿರಹ ವೇದನೆಯು ಪ್ರಬಲವಾಗುವದು. ಹಾಗು ಅವರಿಗೆ ಊಟವು ಕೂಡ ರುಚಿಸದಂತಾಗುವದು. ಹೀಗಾಗಿ ಅವನು ದಿನ ದಿನಕ್ಕೆ ಕ್ಷೀಣನಾಗುತ್ತ ನಡೆಯುವನು. ಇದರ ಮೇಲಿಂದ ಸ್ತ್ರೀಯು ಕಣ್ಣೆದುರಿಗಿರುವದು, ಅರ್ಥಾತ್ ಅವಳ ವಿರಹವು ಪುರುಷನಿಗೆ ವಿಷಪ್ರಾಯವಾಗಿ ಪರಿಣಮಿಸುವದೆಂಬ ಮಾತಿನೊಳಗೆ ಅತಿಶಯೋಕ್ತಿಯೇನೂ ಇಲ್ಲವೆಂಬುದು ಮೇಲಿನ ವಿವರಣೆಗಳಿಂದ ವ್ಯಕ್ತವಾಗುವದು.

ಸಾಮೃತಂ ನ ವಿಷಂ ಕಿಂಚಿದೇಕಾಂ ಮುಕ್ತ್ವಾ ನಿತಂಬಿನೀಮ್ ।
ಸೈವಮೃತ ಲತಾರಕ್ತಾ ವಿರಕ್ತಾ ವಿಷವಲ್ಲರಿ ॥೭೫॥

ಸುಂದರಿಯರಾದ ನಿತಂಬಿನಿಯರನ್ನು ಹೊರ್ತು ಪಡಿಸಿ ಅಮೃತವೂ ಇಲ್ಲ, ವಿಷವೂ ಇಲ್ಲ.-ಅರ್ಥಾತ್ ಅವೆರಡೂ ಅವರಲ್ಲಿಯೇ ಐಕ್ಯವಾಗಿವೆ-ಸ್ತ್ರೀಯು ತನ್ನ ಪ್ರೀಯತಮನನ್ನು ಪ್ರಿತಿಸಿದರೆ ಅಮೃತಲತೆಯಾಗುವಳು. ಒಂದು ವೇಳೆ ಅವನನ್ನು-ತನ್ನ ಪ್ರಿಯತಮನನ್ನು-ಪ್ರೀತಿಸದೇ ಹೋದರೆ ನಿಜಕ್ಕೂ-ವಿಷವಾಗಿ ಪರಿಣಮಿಸುವಳು.

ಈ ಜಗತ್ತಿನೊಳಗೆಸ್ತ್ರೀಯು ಏನೆಲ್ಲವೂಆಗಿರುವಳು.ಅವಳು ಮನಸ್ಸುಮಾಡಿದರೆ ಬಾಳು ಬಂಗಾರವಾಗಬಲ್ಲದು. ಅರ್ಥಾತ್ ಮನಸ್ಸು ಮಾಡಿದರೆ ಅಮೃತಮಯವಾಗಬಲ್ಲದು. ಒಂದು ವೇಳೆ ಅವಳು ಯಾವನೊಬ್ಬನಿಂದ ತನ್ನ ಮನವನ್ನು ಬೇರೆಡೆಗೆ ತಿರುಗಿಸಿದರೆ ಅವನ ಪಾಲಿಗೆ ವಿಷದ ಬಟ್ಟಲಾಗಿ ಬಿಡುವಳು. ಈ ಮಾತನ್ನು ಪುರುಷರು ಚನ್ನಾಗಿ ಅರಿತುಕೊಳ್ಳಬಲ್ಲರು. ಏಕೆಂದರೆ ತರುಣಿಯರಿಂದ ಪ್ರೀತಿಸಲ್ಪಡುವ ಪುರುಷನು ಅವರಿಗಾಗಿ—ತರುಣಿಯರಿಗಾಗಿ—ಏನು ಬೇಕಾದುದನ್ನು ಮಾಡಲೂ ಹಿಂದೆ ಮುಂದೆ ನೋಡುವದಿಲ್ಲ.

ಇಷ್ಟೇ ಅಲ್ಲ, ತನ್ನ ಜೀವನವನ್ನೇ ಅವಳ; ಸುಖ—ಸೌಲಭ್ಯಗಳನ್ನು ಒದಗಿಸುವದಕ್ಕಾಗಿ ಮೀಸಲಿರಿಸಿ ಬಿಡುವನು. ಅವರು ಹೇಳಿದಂತೆ ಕುಣಿಯಲು ಒಂಟಿಗಾಲ ಮೇಲೆ ಸದಾ ಸಿದ್ಧನಾಗಿ ನಿಂತಿರುತ್ತಾನೆ. ಆದರೆ ಚಂಚಲ ಸ್ವಭಾವದ ತರುಣಿಯು ಅವನನ್ನು ಬಿಟ್ಟು ಬೇರೊಬ್ಬನತ್ತ ತಮ್ಮ ದೃಷ್ಟಿಯನ್ನು ಬೀರಿದಾಗ ಮಾತ್ರ ಅವನು ತನ್ನ ದಿಶೆಯನ್ನೇ ಬದಲಾಯಿಸಿ ಬಿಡುವನು. ಮೊದ—ಮೊದಲು ಅವಳಿಗಾಗಿ ಕೊಂಚ ಹುಬಲಿಸಿದರೂ ಮುಂದೆ ಅವಳ ಪ್ರಾಣವನ್ನು ತೆಗೆದುಕೊಳ್ಳಲು ಕೂಡ ಹಿಂದೆ—ಮುಂದೆ ನೋಡುವದಿಲ್ಲ. ಇಂಥ ಉದಾಹರಣೆಗಳು ಯಾರಿಗೆ ಗೊತ್ತಿಲ್ಲ ?

ಆವರ್ತ್ತ: ಸಂಶಯಾನಾಂ ವಿನಯ ಭವನಂ ಸಾಹಸಾನಾಂ
ದೋಷಾಣಾಂ ಸನ್ನಿಧಾನಂ ಕಪಟಶತಮಯಂ ಕ್ಷೇತ್ರಂ
ಪ್ರತ್ಯಯಾನಾಂ ।

ಸ್ವರ್ಗದ್ವಾರಸ್ಯ ವಿಘ್ನೋ ನರಕಪುರ ಮುಖಂಸರ್ವಮಾಯಾಕರಂಡಂ
ಸ್ತ್ರೀಯಂತ್ರಂ ಕೇನ ಸೃಷ್ಟಂ ವಿಷಮಮೃತಮಯಂ

ಪ್ರಾಣಿನಾಮ್ ಮಹೋಪಾಶಃ ||೭೬||

ಸಂದೇಹಗಳ ತಿರುಗಣಿ ಮಡುವು, ಅವಿನಯದ ಅರಮನೆ, ಸಾಹಸಗಳ ಪಟ್ಟಣ, ಪಾಪ—ದೋಷಗಳ ಭಾಂಡಾರ, ನೂರಾರು ಬಗೆಯ ಕಪಟ ಹಾಗು ಅವಿಶ್ವಾಸದ ಕ್ಷೇತ್ರ, ಸ್ವರ್ಗದ್ವಾರದ ವಿಘ್ನ, ನರಕ ನಗರದದ್ವಾರ, ಎಲ್ಲ ಮಾಯೆಗಳ ಸಂಗ್ರಹಸ್ಥಾನ, ಅಮೃತದ ರೂಪದಲ್ಲಿ ವಿಷ ಹಾಗೂ ಪುರುಷರನ್ನು ತನ್ನ ಮೋಹಜಾಲದಲ್ಲಿ ಸೆಳೆದುಕೊಂಡು ನಾನಾ ಬಗೆಯ ಹಿಂಸೆಗಳನ್ನು ಕೊಡುವಂಥ ಸ್ತ್ರೀ—ಯಂತ್ರವನ್ನು ಯಾರು ಸೃಷ್ಟಿಸಿದರು ?

ಆಕಳವು ಯಾವ ಬಣ್ಣದ್ದೇ ಇರಲಿ, ಅದರ ಹಾಲು ಮಾತ್ರ ಸದಾ ಬೆಳ್ಳಗೆ ಇರುತ್ತವೆ. ಆದರೆ ಸ್ತ್ರೀಯರದು ಹಾಗಲ್ಲ. ತೋರಿಕೆಗೆ ಬೆಳ್ಳಗೆ ಕಂಡರೂ ಅವರ ಹೃದಯವು ಮಾತ್ರ ಕಪ್ಪಾಗಿರುತ್ತದೆ. ಶರೀರವು ಪುಷ್ಪದಂತೆ ಕೋಮಲವಾಗಿದ್ದರೂ ಹೃದಯವು ಕಲ್ಲಿಗಿಂತ ವಜ್ರಕ್ಕಿಂತ ಕಠಿಣವಾಗಿರುವದು. ಅಂತೆಯೇ ಇವರು ದಾನ, ಮಾನ, ಸೇವೆ, ಅಸ್ತ್ರ ಹಾಗೂ ಶಸ್ತ್ರ ಇವಾವುದರಿಂದಲೂ ವಶರಾಗುವದಿಲ್ಲ. ಹೀಗಾಗಿ ಇವರಿಗೆ ನಿಜವಾದ ಪ್ರಿಯನೂ ಇರುವದಿಲ್ಲ. ಅಪ್ರಿಯನೂ ಇರುವದಿಲ್ಲ. ಹೊಸ ಹೊಸ ಪುರುಷರನ್ನು ಬಯಸುವದೇ ಇವರ ಕರ್ತವ್ಯವಾಗಿರುವದು: ತಮ್ಮ ಅಭಿಲಾಷೆಯನ್ನು ಈಡೇರಿಸಿಕೊಳ್ಳಲು ಅವರು ಏನು ಬೇಕಾದುದನ್ನೂ ಮಾಡಬಲ್ಲರು. ಈ ರೀತಿಯಾಗಿ ಯಂತ್ರದಂತಿರುವ ಈ ಸ್ತ್ರೀಯರನ್ನು ಯಾವನು ನಿರ್ಮಿಸಿದನೋ ಏನೋ ?

ಸತ್ಯತ್ವೇನ ಶಶಾಂಕ ಏಷ ವದನೀ ಭೂತೋ ನವೇಂದೀವರ—
ದ್ವಂದ್ವೇ ಲೋಚನ ತಾಂ ಗತೇ ನ ಕನಕೈಶಪ್ಯಂಗಯಷ್ಟಿಃ ಕೃತಾ ।
ಕಿಂ ತ್ವೇಯಂ ಕವಿಭಿಃ ಪ್ರತಾರಿತ ಮನಾಸ್ತತ್ವಂ ವಿಜಾನನ್ನಪಿ
ತ್ವಂ ಓ ಮಾಂಸಾ ಸ್ಥಿರಮಯಂ ವಪುರ್ಮೃಗದೃಶಾಂ

ಮಂದೋಜನಃ ಸೇವತೇ ||೭೭||

ಒಂದು ವೇಳೆ ನಮ್ಮಿಂದ—ಸ್ತ್ರೀಯರ ಬಗ್ಗೆ—ಪಕ್ಷಪಾತ ರಹಿತವಾಗಿ ನಿಜ ಸಂಗತಿಯನ್ನು ಕೇಳಿದ್ದಾದರೆ— "ಸ್ತ್ರೀಯ ಮುಖವು ಚಂದ್ರಬಿಂಬ ದಂತಿರುವದಿಲ್ಲ, ಅವಳ ಕಣ್ಣುಗಳು ಕಮಲದಂತಿರುವದಿಲ್ಲ; ಅವಳ ಶರೀರವು ಕೂಡ ಇನ್ನುಳಿದ ಪ್ರಾಣಿಗಳಂತೆ ಎಲುವು, ಮಾಂಸ, ಚರ್ಮಗಳದೇ ಆಗಿರು ವದು" ಎಂದು ಹೇಳಬಲ್ಲೆವು, ಹೇಳುತ್ತೇವೆ. ಆದರೆ ಈ ವಿಷಯವನ್ನು ಅರಿತುಕೊಂಡ ನಂತರವೂ ಕವಿಗಳ ಕೆಲಸಕ್ಕೆ ಬಾರದ ವರ್ಣನೆಯನ್ನು ಕೇಳಿ, ಮೋಸ ಹೋದ ಜನರು —ನಾವುಕೂಡ— ಸ್ತ್ರೀಯರನ್ನು ಮೋಹಿಸು ತ್ತೇವೆ. ಹಾಗು ಅವರನ್ನು ಭೋಗಿಸುತ್ತೇವೆ.

ಸಂಸಾರದೊಳಗಿನ ಪ್ರಾಣಿಗಳೆಲ್ಲ ಎಲುವು, ಮಾಂಸ ಹಾಗು ಚರ್ಮ ಗಳಿಂದ ನಿರ್ಮಿತವಾಗಿರುವಂತೆ ಸ್ತ್ರೀಯರು ಕೂಡ ಹಾಗೆಯೇ ನಿರ್ಮಿತರಾಗಿ ರುವರು. ಅಂದರೆ ಅವರೂ ಕೂಡ ಎಲವು—ಮಾಂಸಗಳಿಂದಲೇ ತಯಾರಿ ಸಲ್ಪಟ್ಟವರಾಗಿರುವರು. ಈ ಮಾತು ಎಲ್ಲರಿಗೂ ಗೊತ್ತಿರುತ್ತದೆ. ಆದರೂ ಕೆಲಸವಿಲ್ಲದ ಕವಿಗಳು ಚಂದ್ರಬಿಂಬದಂತಹ ಮುಖ, ಕಮಲದಂತಹ ಕಣ್ಣು ಗಳು, ಸಂಪಿಗೆಯಂತಹ ಮೂಗು, ಬಾಳಿನ ದಿಂಡಿನಂತಹ ತೊಡೆಗಳುಎಂದು ಸ್ತ್ರೀಯರನ್ನು ವರ್ಣಿಸಿ ಬಿಟ್ಟಿರುವರು. ಅವರ-ಕವಿಗಳ- ವರ್ಣನೆಗೆ ಮಾರು ಹೋದ ಪುರುಷರು ಸ್ತ್ರೀಯರನ್ನು ಮೋಹಿಸುವರು. ಹಾಗು ಅವರ ಅಂಕಿತ ದಲ್ಲಿದ್ದುಕೊಂಡು, ಸ್ತ್ರೀಯರ ಕೈಗೊಂಬೆಗಳಾಗಿ ಬಾಳುತ್ತಿರುವರು.

ಲೀಲಾವತೀನಾಂ ಸಹಜಾ ವಿಲಾಸಾ—
ಸ್ತ ಏವ ಮೂಢಸ್ಯ ಹೃದಿ ಸ್ಫುರಂತಿ ।
ರಾಗೋ ನಲಿನ್ಯಾ ಹಿ ನಿಸರ್ಗಸಿದ್ಧ—
ಸ್ತತ್ರ ಭ್ರಮತ್ಯೇವ ಮುಧಾ ಷಡಂಘ್ರಿ ॥೭೮॥

ಕಮಲಿನಿಯ ಸ್ವಾಭಾವಿಕವಾದ ಕೆಂಪು ಛಾಯೆಯನ್ನು ನೋಡಿ ಮೂರ್ಖ ಭ್ರಮರವು ಅದರ ಮೇಲೆ ಮೋಹಗೊಳ್ಳುವದು, ಮುಗ್ಧವಾಗು ವದು. ಹಾಗು ಅದರ ಸುತ್ತಲೂ ತಿರುಗುತ್ತ ಗುಯ್ಗುಟ್ಟ ತೊಡಗು

ವದು. ಅದೇ ರೀತಿಯಾಗಿ ಪುರುಷರು ಕೂಡ ಲೀಲಾಜಾಲನಲ್ಲಿ ಪರಿಣತಿಯುಳ್ಳವರಾದ ಸ್ತ್ರೀಯರ ಹಾವ-ಭಾವ ಮತ್ತು ಒಯ್ಯಾರಗಳನ್ನು ಕಂಡು ಮುಗ್ಧರಾಗಿ ಬಿಡುವರು.

ಕಮಲದೊಳಗೆ ಒಂದು ಬಗೆಯ ಕೆಂಪು ಛಾಯೆ ಇರುತ್ತದೆ. ಅದನ್ನು ಭ್ರಮರವು ಪ್ರೇಮದ ಕುರುಹೆಂದು ಭಾವಿಸುವದು. ಹಾಗು ಅದರ—ಕಮಲದ—ಮೇಲೆ ಮೋಹಗೊಂಡು ಅಲ್ಲಿಯೇ ಸುಳಿದಾಡ ತೊಡಗುವದು. ಆದರೆ ಆ ಛಾಯೆಯು ಸ್ವಾಭಾವಿಕವಾದದ್ದು, ಯಾರ ಪ್ರೇಮದ್ಯೋತಕವೂ ಅಲ್ಲ ಎಂಬುದು ಪಾಪ, ಭ್ರಮರಕ್ಕೆ ಗೊತ್ತಾಗುವ ಬಗೆಯಾದರೂ ಹೇಗೆ?

ಇದೇ ರೀತಿಯಾಗಿ ಪುರುಷರ ಪರಿಸ್ಥಿತಿಯೂ ಇರುತ್ತದೆ. ಸ್ತ್ರೀಯರ ಹಾವ-ಭಾವಗಳು ಹಾಗು ಒನಪು ಒಯ್ಯಾರಗಳು ತಮಗಾಗಿಯೇ ಎಂದು ಅವರು—ಪುರುಷರು—ಭಾವಿಸುತ್ತಾರೆ. ಆದರೆ ಅವುಗಳೆಲ್ಲ ಸ್ತ್ರೀಯರ ಹುಟ್ಟು ಗುಣಗಳೆಂಬುದು ಅವರಿಗೆ ಗೊತ್ತಾಗದೇ ಹೋಗುವವು. ಹಾಗು ಅವರ ಮೇಲೆ ಮುಗ್ಧರಾಗಿ ಅವರ ಸುತ್ತಲೂ ದಾಸಾನುದಾಸರಂತೆ ಸುಳಿಯ ತೊಡಗುತ್ತಾರೆ.

ಯದೇ ತತ್ಪೂರ್ಣೇಂದು ದ್ಯುತಿಹರ ಮುದಾರಾ ಕೃತಿಧರಂ
ಮುಖಾಬ್ಜಂ ತನ್ವಂಗ್ಯಾಃ ಕಿಲವಸತಿ ಯತ್ರಾಧರಮಧು ।
ಇದಂ ತಾವತ್ಪಾಕದ್ರುರು ಫಲ ಮಿವಾತೀವ ವಿರಸಂ
ವ್ಯತೀತೇಸ್ಮಿನ್ ಕಾಲೇ ವಿಷಯುವ ಭವಿಷ್ಯತ್ಯ ಸುಖದಂ ॥೯॥

ಪೂರ್ಣಿಮೆಯ ಚಂದ್ರನ ಕಾಂತಿಯನ್ನು ಅಲ್ಲಗಳೆಯುವಂಥ ಅಧರಾಮೃತ ಸಹಿತವಾದ ಸ್ತ್ರೀಯ ಮುಖಕಮಲವು, ಮಂದಾರ ಫಲದಂತೆ ಕೆಲವೊಂದು ಅವಧಿಯ ವರೆಗೆ—ತಾರುಣ್ಯವು ಇರುವವರೆಗೆ—ಮಾತ್ರ ಬಲು ಆಕರ್ಷಕವಾಗಿ, ಸುಂದರವಾಗಿ ಕಾಣುವದು. ಆದರೆ ದಿನಗಳು ಉರುಳಿದಂತೆ ಅರ್ಥಾತ್ ವೃದ್ಧಾಪ್ಯವು ಕಾಣಿಸಿಕೊಳ್ಳತೊಡಗುತ್ತಲೆ ಅದೇ ಕಮಲ ಮುಖವು ದಾಳಿಂಬರದ ಕೊಳೆತ—ಪಕ್ವವಾದ-ಹಣ್ಣಿನಂತೆ ವಿಷಮಯವಾಗಿ ಬಿಡುವದು.

ಡಾಳಿಂಬರ ಹಣ್ಣು ಸಿಯಮಿತ ಅವಧಿಯ ವರೆಗೆ ಮಾತ್ರ ಅಮೃತ ವಂತೆ ರುಚಿಯನ್ನು ಕೊಡುವವು. ಆದರೆ ಆ ಕಾಲಾವಧಿಯು ಮುಗಿಯಿ ತೆಂದರೆ ಅದು ತಿನ್ನಲು ಬಾರದಷ್ಟು ವಿಷಮಯವಾಗಿ ಬಿಡುವದು. ಅದೇ ರೀತಿಯಾಗಿ ಪೂರ್ಣಿಮೆಯ ಚಂದ್ರನ ಕಾಂತಿಯನ್ನು ಕೂಡ ಹೀಯಾಳಿಸ ಬಲ್ಲ ಮುಖಕಾಂತಿಯುಳ್ಳ ಸ್ತ್ರೀಯರು ಕೂಡ ಕೆಲವೇ ಅವಧಿಯ ವರೆಗೆ— ಅರ್ಥಾತ್ ತಾರುಣ್ಯವಿರುವವರೆಗೆ— ತನ್ನ ಆ ಕಾಂತಿಯನ್ನು ಕಾಯ್ದು ಕೊಳ್ಳಬಲ್ಲಳು. ಆದರೆ ತಾರುಣ್ಯವು ಇಳಿಮುಖವಾಗುತ್ತಲೆ, ವೃದ್ಧಾಪ್ಯವು ಇಣಿಕಿಕ್ಕ ತೊಡಗುತ್ತಲೆ ಅವಳ ಪರಿಸ್ಥಿತಿಯು ಕೂಡ ಅವಧಿ ಮೀರಿದ ದಾಳಿಂಬರ ಹಣ್ಣಿನಂತಾಗಿ ಬಿಡುವದು.

ಉನ್ಮೀಲತ್ರಿವಲೀ ತರಂಗ ನಿಲಯಂ ಪ್ರೋತ್ತುಂಗ ಪೀನಸ್ತನ-
ದ್ವಂದ್ವೇನೋದ್ಯತ ಚಕ್ರವಾಕ ಮಿಥುನಾ ವಕ್ತ್ರಾಂಬುಜೋದ್ಭಾಸಿನಿ।
ಕಾಂತಾಕಾರಧರಾ ನದೀಯ ಮಮಿತಃ ಕ್ರೂರಾಶಯಾನೇಷ್ಯತೇ
ಸಂಸಾರಾರ್ಣವ ಮಜ್ಜನಂ ಯದಿ ತತೊ ದೂರೇಣ
ಸಂತ್ಯಜ್ಯತಾಂ ॥೮೦॥

ಸ್ತ್ರೀಯು ತ್ರಿವಲೀ ನಿದಿಯ ತರಂಗಳೋಪಾದಯಲ್ಲಿರುವಳು. ಅವಳ ಎದ್ದುಕಾಣುವ ಉನ್ನತ ಕುಚಗಳು ಚಕ್ರವಾಕ ಯುಲಗಳಂತಿವೆ. ಅವಳ ಮುಖವು ವಿಕಸಿತಗೊಂಡ- ಅರಳಿದ- ಕಮಲದಂತಿರುವದು, ಹಾಗು ಅವಳ ಕ್ರೂರ ಅಭಿಪ್ರಾಯಗಳು ತಿರುಗಣಿ ಮಡುವಿನಂತಿರುವವು- ಸಂಸಾರಸಾಗರ ದೊಳಗೆ ಬಿದ್ದು ತೊಳಲಾಡುವದು ಬೇಡವೆನ್ನುವವರು ಸ್ತ್ರೀ ರೂಪದ ಸರಿತೆ ಯಿಂದ—ನದಿಯಿಂದ—ಆದಷ್ಟು ದೂರವಿರುವದು ಬಹಳ ಒಳ್ಳೆಯದು.

ಸ್ತ್ರೀಯು ಸರಿತೆಯಿದ್ದಂತೆ. ಅವಳ ಹೊಟ್ಟೆಯ ಮೇಲಿನ ತ್ರಿವಲಿಮೂದ ಲಯ ಮೂರು ಗೆರೆಗಳು ಆ—ಸ್ತ್ರೀರೂಪೀ-ಸರಿತೆಯ ತೆರೆಗಳಾಗಿವೆ. ಅವಳ ಬಿರುಸಾದ ಎರಡೂ ಮೊಲೆಗಳು ಚಕ್ರವಾಕ ಪಕ್ಷಿಯ ಜೋಡುಗಳಂತಿವೆ. ಹಾಗು ಅವಳ ಕ್ರೂರ ಅಭಿಪ್ರಾಯಗಳಂತೂ ಅಂತವೇ ಕಾಣದಂತಹ, ತನ್ನ

ಸೆಳವಿಗೆ ಸಿಕ್ಕಿದನ್ನೆಲ್ಲ ಸ್ವಾಹಾ ಮಾಡಿ ಮತ್ತೆ ಮೊದಲಿನಂತೆಯೇ ಕಂಡು ಬರುವಂಥ ತಿರುಗಣಿ ಮಡುವಿನಂತಿರುವವು. ನದಿಗಳು ಸಮುದ್ರಕ್ಕೆ ಹೋಗಿ ಕೂಡುವಂತೆ ಸ್ತ್ರೀರೂಪದ ನದಿಯು ಕೂಡ ಸಂಸಾರ ಸಾಗರಕ್ಕೆ ಕೂಡಿ ಕೊಳ್ಳುವದು. ಹೊಳೆಯೊಳಗೆ ಬಿದ್ದ ಯಾವದೊಂದು ವಸ್ತುವು ಅದರ ಜೊತೆಗೆ ಹರಿಯುತ್ತ ಹೋಗಿ ಸಮುದ್ರದೊಳಗೆ ಸೇರುವಂತೆ, ಸ್ತ್ರೀರೂಪದ ಸರಿತೆಯೊಳಗೆ ಬಿದ್ದ 'ವಸ್ತು'ಗಳೂ ಸಂಸಾರ ಸಾಗರದೊಳಗೆ ಹೋಗಿ ಸೇರಿಕೊಳ್ಳುವವು.

ಅಂದರೆ ಸ್ತ್ರೀ ರೂಪದ ನದಿಯೊಳಗೆ ಸ್ನಾನ ಮಾಡಲೋಸುಗ—ಸರಿತೆಯೊಂದಿಗೆ ಕ್ರೀಡಿಸಲೋಸುಗ- ಇಳಿದ ಪುರುಷನು ಸರಿತೆಯ ತೀವ್ರ ಪ್ರವಾಹದೊಂದಿಗೆ ಹರಿಯುತ್ತ ಹೋಗಿ ಅವಳೊಂದಿಗೇ ಸಂಸಾರ ಸಾಗರದೊಳಗೆ ಹೋಗಿ ಬೀಳುತ್ತಾನೆ. ಆ ವರೆಗೂ ಇಲ್ಲದಂಥ ತಾಪತ್ರಯಗಳು ಪುರುಷನಿಗೆ ಸಂಸಾರ ಸಾಗರದೊಳಗೆ ಬಿದ್ದೊಡನೆಯೇ ಪ್ರಾರಂಭವಾಗಿ ಬಿಡುವವು. ಆಗ ಅವನ ಪರಿಸ್ಥಿತಿಯು ತೀರ ಕರುಣಾಜನಕವಾಗಿ ಬಿಡುವದು. ಏಕೆಂದರೆ ಆ ಸಾಗರದೊಳಗಿಂದ ಪಾರಾಗುವದು ಅವನಿಂದ ಆಗುವದೇ ಇಲ್ಲ, ಅಷ್ಟೊಂದು ಆಳವೂ, ಕಠಿಣವೂ ಆದ ಸಾಗರವದು. ಅದಕ್ಕಾಗಿ ಸ್ತ್ರೀ—ರೂಪದ ಸರಿತೆಯ ಪ್ರವಾಹದಲ್ಲಿ ಇಳಿಯುವ ಮೊದಲೇ ಪುರುಷನು ಸಾಕಷ್ಟು ವಿಚಾರ ಮಾಡುವದೊಳಿತು. ಇಲ್ಲದಿದ್ದರೆ ಸಮಯ ಮಿಂಚಿ ಹೋದನಂತರ ಚಿಂತಿಸಬೇಕಾಗುವದು. ಆಗ ಏನು ಮಾಡಿದರೂ ಚಿಂತೆಯ ಪರಿಹಾರವಾಗುವದೇ ಇಲ್ಲ.

ಸ್ತ್ರೀಯರ ರೂಪವು ಜಲವಿದ್ದಂತೆ. ಅವರ ಚಂಚಲ ನೇತ್ರಗಳು ಮೀನುಗಳಂತೆ; ನಾಭಿಯು ತಿರುಗಣಿ ಮಡುವಿನಂತೆ, ಹಾಗು ತಲೆಯೊಳಗಿನ ನೀಳ ಕೇಶಗಳು ಘಟಸರ್ಪದಂತಿರುವವು. ಅಂತೆಯೇ ತರುಣ ಸ್ತ್ರೀರೂಪದ ಸರಿತೆಯು ಕಠಿಣ ನದಿಯಂತಿರುವಳು. ಇಂಥ ನದಿಯೊಳಗೆ ಶೃಂಗಾರಶಾಸ್ತ್ರದಲ್ಲಿ ಪ್ರವೀಣರಾದಂಥ ಸಜ್ಜನರು ಸ್ನಾನಕ್ಕಾಗಿ ಇಳಿಯುವರು. ಆದರೆ ಹೊಳೆಯೊಳಗೆ ಇಳಿಯುವಾಗಿನ ಹುಮ್ಮಸ್ಸು ಮುಂದೆ ಬಹುದಿನಗಳ ವರೆಗೆ

ಉಳಿಯುವದಿಲ್ಲ. ಆ ಸಮಯದಲ್ಲಿ ಮಾತ್ರ ಪೇಚಾಡ ತೊಡಗುವರು. ಆಗ ಏನು ಮಾಡಲೂ ಸಾಧ್ಯವಿರುವದಿಲ್ಲ. ಯಾವ ನಿವಾರಣೋಪಾಯವೂ ಇರುವದಿಲ್ಲ. ಅದಕ್ಕಾಗಿ ಸ್ತ್ರೀರೂಪದ ನದಿಯಿಂದ ಜಾಗರೂಕರಾಗಿರಿ, ಅದರಿಂದ ಆದಷ್ಟು ದೂರವಿರಿ ಎಂಬುದೇ ಈ ಶ್ಲೋಕದ ಅರ್ಥವಾಗಿದೆ.

ಜಲ್ಪಂತಿ ಸಾರ್ಧ ಮನ್ಯೇನ ಪಶ್ಯನ್ತ್ಯನ್ಯಂ ಸವಿಭ್ರಮಾಃ |
ಹೃದಯೇ ಚಿಂತಯನ್ತ್ಯನ್ಯಂ ಪ್ರಿಯಃ ಕೋ ನಾಮ
ಯೋಷಿತಾಂ ||೮೧||

ಸ್ತ್ರೀಯು ಯಾವನೊಬ್ಬನೊಂದಿಗೆ ಮಾತನಾಡುತ್ತಿದ್ದರೆ, ಮತ್ತೊಬ್ಬನತ್ತ ದೃಷ್ಟಿಬೀರಿರುತ್ತಾಳೆ ಹಾಗು ಅವಳ ಮನದಲ್ಲಿ ಮೂರನೆಯವನ ವಿಚಾರವೇ ನಡೆದಿರುತ್ತದೆ.- ಹೀಗಿರುವಾಗ- ಈ ವಿಲಾಸವತಿ ಸ್ತ್ರೀಯರ ನಿಜವಾದ ಪ್ರಿಯತಮನು ಯಾರು ?

ಸ್ತ್ರೀಯ ಲೀಲೆಯು ಅತಿ ವಿಚಿತ್ರವಾದುದಾಗಿದೆ. ಅಂತೆಯೆ ಹಿಂದಿನ ಹಿರಿಯರು ಸ್ತ್ರೀಯ ಚರಿತ್ರೆಯನ್ನು ಅರಿತುಕೊಳ್ಳುವದು ಬ್ರಹ್ಮನಿಂದಲೂ ಸಾಧ್ಯವಿಲ್ಲವೆಂದು ಹೇಳಿರುವರು. ಆ ಮಾತಿನಲ್ಲಿ ಕೊಂಚವೂ ಅತಿಶಯವೆಂಬುವದಿಲ್ಲ. ಅವಳಿಗೆ ಹೃದಯವೆಂಬುವದು ಇರುವದೇ ಇಲ್ಲ. ಒಂದು ವೇಳೆ ಇದ್ದರೂ ಅದು ವಜ್ರಕ್ಕಿಂತ ಕಠಿಣವಾದುದಾಗಿರುವದು. ಅಂಥ ಹೃದಯವು ಇದ್ದರೂ ಅಷ್ಟೆ; ಇರದಿದ್ದರೂ ಅಷ್ಟೆ. ಎರಡನೆಯವರ ಹೃದಯದ ಬಡಿತವನ್ನು ತಿಳಿಯಲಾಗದ, ಅರಿತುಕೊಳ್ಳಲಾಗದಂಥ ಹೃದಯದಿಂದ ಪ್ರಯೋಜನವಾದರೂ ಏನು ?

ಏಕೆಂದರೆ ಸ್ತ್ರೀಯು ಓರ್ವ ಪುರುಷರೊಂದಿಗೆ ಒಳ್ಳೇ ಮಧುರವಾಗಿ ಮಾತನಾಡುತ್ತಿರುತ್ತಾಳೆ. ಆಗ ಆ ಪುರುಷನು ನನ್ನೆದುರು ಮಾತನಾಡುತ್ತಿರುವ ತರುಣಿಯು ನನ್ನವಳು, ನನಗೆ ಮನಸೋತಿದ್ದಾಳೆ ಎಂದು ಗಾಳಿಗೋಪುರ ಕಟ್ಟುತ್ತಿರುತ್ತಾನೆ. ಆದರೆ ನಿಜ ಪರಿಸ್ಥಿತಿ ಬೇರೆಯೇ ಆಗಿರುತ್ತದೆ

ಅವಳು ತನ್ನೆದುರಿಗೆ ಕುಳಿತವನೊಂದಿಗೆ ಮಾತನಾಡುತ್ತಿದ್ದರೂ ಕಳ್ಳದೃಷ್ಟಿಯಿಂದ ಮತ್ತೊಬ್ಬನನ್ನು ನೋಡುತ್ತಿರುತ್ತಾಳೆ. ಇಷ್ಟೇ ಅಲ್ಲ, ಅವಳ ಮನವು ಮಗದೊಬ್ಬನ ಬಗೆಗೆ ವಿಚಾರ ಮಾಡುತ್ತಿರುತ್ತದೆ. ಹೀಗಾಗಿ ಅವರ ಲೀಲೆಯು ಅಪಾರವಾದುದಾಗಿದೆ. ಇಂಥ ಲೀಲಾವತಿಯರ ನಿಜ ಭಾವ ಪ್ರಿಯತಮನು ಯಾರೆಂಬುದೇ ಸಂದೇಹಾಸ್ಪದ.

ಮಧು ತಿಷ್ಠತಿ ವಾಚಿ ಯೋಷಿತಾಂ
ಹೃದಿ ಹಾಲಾಹಲಮೇವ ಕೇವಲಮ್ ।
ಅತ ಏವ ನಿಪೀಯತೇಽಧರೋ—
ಹೃದಯಂ ಮುಷ್ಟಿಭಿರೇವ ತಾಡ್ಯತೇ ॥೮೩॥

ವನಿತೆಯರ ವಾಣಿಯೊಳಗೆ ಮಧುರತೆಯು ತುಂಬಿಕೊಂಡಿದ್ದರೂ ಅವರ ಹೃದಯದೊಳಗೆ ಮಾತ್ರ ಹಾಲಾಹಾಲವೇ ತುಂಬಿಕೊಂಡಿರುವದು. ಅದಕ್ಕಾಗಿಯೇ ಪುರುಷರು, ಸ್ತ್ರೀಯರ— ಮಧುರತೆಯನ್ನು ಹೀರಿಕೊಳ್ಳಲೋಸುಗ- ಅಧರ ಪಾನ ಮಾಡುವರು. ಹಾಗು – ಹೃದಯದೊಳಗೆ ತುಂಬಿಕೊಂಡಿರುವಂಥ ಹಾಲಾಹಲವನ್ನು ನಷ್ಟಗೊಳಿಸುವದಕ್ಕಾಗಿ– ಭದ್ರ ಮುಷ್ಟಿಯಿಂದ ಅವಳ ಸ್ತನಗಳನ್ನು ಮರ್ದಿಸುವದು.

ಅಮೃತವನ್ನು ಪ್ರೀತಿಯಿಂದ ಸೇವಿಸುವದು, ವಿಷವನ್ನು ಕಡೆಗಣಿಸುವದು ಮಾನವನ ಗುಣವಾಗಿರುವದು. ಅಂತೆಯೇ ಪುರುಷನು ಅಮೃತವನ್ನು ಸವಿಯಲೋಸುಗ ಸ್ತ್ರೀಯ ಕೆಳದುಟಿಯನ್ನು ಚೀಪುವನು. ಅರ್ಥಾತ್ ಅಧರಾಮೃತವನ್ನು ಸೇವಿಸುವನು. ಹಾಗು ಅವಳ ಹೃದಯದೊಳಗೆ ಅಡಗಿದಂಥ ವಿಷವನ್ನು ಹೊರತೆಗೆಯಲೋಸುಗ ಕಠಿಣವಾದ ಕುಚಗಳನ್ನು ಬಲವಾಗಿ ಮರ್ದಿಸಿ ಕಾರ್ಯವನ್ನು ಸಾಧಿಸುವನು. ಈ ರೀತಿಯಾಗಿ ಅವರು ಅಮೃತವನ್ನು ಪಾನಮಾಡಿ ವಿಷವನ್ನು ಹೊಡೆದೋಡಿಸುವರು. ಆದರೂ ಅಂವರೆ ಎಷ್ಟೊಂದು ಮರ್ದನ ಮಾಡಿದರೂ ಅವಳ ಹೃದಯದೊಳಗೆ ಮನೆಮಾಡಿಕೊಂಡಿರುವಂಥ ಹಾಲಾಹಲವು ಹೊರಟು ಹೋಗುವದು ಮಾತ್ರ,

ಸುಳ್ಳು, ಎಂಥ ಪರಿಸ್ಥಿತಿಯಲ್ಲಿಯೂ ಅವಳ ಹೃದಯವು ಕಠೋರವಾಗಿಯೇ ಇರುವದು.

ಅಪಸರ ಸಖೇ ದೂರಾದಸ್ಮಾತ್ಕಟಾಕ್ಷ ವಿಷಾನಲಾತ್
ಪ್ರಕೃತಿ ವಿಷಮಾದ್ಯೋಷಿ ತ್ಸರ್ಪಾದ್ವಿಲಾಸ ಫಣಾಭೃತಃ |
ಇತರ ಫಣೀನಾ ದಷ್ಟಃ ಶಕ್ಯಶ್ಚಿಕಿತ್ಸ ತು ಮೌಷಧೈ—
ಶ್ಚತುರ ವನಿತಾ ಭೋಗಿ ಗ್ರಸ್ತಂ ತ್ಯಜನ್ತಿ ಹಿ ಮಂತ್ರಿಣಃ ||೭೩||

ಓ ಗೆಳೆಯಾ ! ಸ್ವಾಭಾವಿಕವಾಗಿಯೆ ಕಠಿಣ ಹೃದಯದ, ವಿಲಾಸ ರೂಪದ ಹೆಡೆಯುಳ್ಳ ಹಾಗು ಕಟಾಕ್ಷ ರೂಪದ ವಿಷಾಗ್ನಿಯನ್ನು ಪಡೆದು ಕೊಂಡಿರುವಂಥ ಸ್ತ್ರೀರೂಪದ ಸರ್ಪದಿಂದ ಆದಷ್ಟು ದೂರ ಓಡಿ ಹೋಗು. ಏಕೆಂದರೆ ಇನ್ನುಳಿದ ಸರ್ಪಗಳು ಕಚ್ಚಿದರೆ ಮಂತ್ರ—ಮಾಟಗಳಿಂದ ಹಾಗು ಔಷಧಿಯಿಂದ ಗುಣವಾಗುವದು ಸಾಧ್ಯವಿದೆ. ಆದರೆ ಚತುರ ಸ್ತ್ರೀ ರೂಪದ ಹಾವು ಕಚ್ಚಿದವನನ್ನು ಕಂಡರೆ ಹಾವಿನ ಮಂತ್ರವನ್ನು ಬಲ್ಲ ಗಾರುಡಿಯೂ ದೂರ ಓಡುವನು.

ಸ್ತ್ರೀಯು ಘಟಸರ್ಪದಂತಿರುವಳು. ಅವಳ ವಿಲಾಸವು ಹೆಡೆಯಾಗಿದ್ದು ಕಟಾಕ್ಷವು-ಓರೆನೋಟವು-ವಿಷಾಗ್ನಿಯಾಗಿರುವದು. ಅಲ್ಲದೆ ಸ್ತ್ರೀಯು ಸ್ವಭಾವದಿಂದಲೂ ಕೂಡ ಸ್ವಾಭಾವಿಕವಾಗಿ ಕ್ರೂರಳೇ—ಕಠಿಣ ಹೃದಯದವಳೇ—ಆಗಿರುವಳು. ಹೀಗೆ ಅವಳು ಎಲ್ಲ ದೃಷ್ಟಿಯಿಂದಲೂ ಘಟಸರ್ಪವೇ ಆಗಿರುವಳು. ಹಾವು ಕಡಿದವರಿಗೆ ಯೋಗ್ಯ ಉಪಚಾರ ಮಾಡಿದರೆ ಅವರು ಬದುಕಬಹುದು. ಆದರೆ ಸ್ತ್ರೀ ರೂಪದ ಹಾವು ಕಚ್ಚಿದರೆ, ಕಚ್ಚಿಸಿಕೊಂಡವನು ಬದುಕುವದು ಸಾಧ್ಯವೇ ಇಲ್ಲ.

ಏಕೆಂದರೆ ಸ್ತ್ರೀಯರು ಸರ್ಪಗಳಿಗಿಂತ ಭಯಂಕರರಾಗಿರುತ್ತಾರೆ. ಅದಕ್ಕಾಗಿ ಅಂಥವರಿಂದ ದೂರವಿರುವದೇ ಒಳ್ಳೆಯದು. ಇಡಿಯ ಸ್ತ್ರೀಜಾತಿಯೇ ಹಾಗಿರುವದು—ಅವಳು ಮನೆಯೊಳಗಿನ ಪತ್ನಿಯೇ ಆಗಿರಬಹುದು ಇಲ್ಲವೆ ಬೇರೆ ಯಾರಾದರೂ ಆಗಿರಬಹುದು—ಅವರೆಲ್ಲ ವಿಷಪೂರಿತ ಸರ್ಪಗಳೇ !

ಮನೆಯೊಳಗಿನ ಭಾವಿಯು ನಮ್ಮದೆಂದು ಅದರೊಳಗೆ ಬಿದ್ದರೆ ಪ್ರಾಣವು ಹೋಗುವದಿಲ್ಲವೇ ? ಸ್ತ್ರೀಯರ ವಿಷಯವೂ ಹಾಗೆಯೆ ಇರುವದು. ಅದಕ್ಕಾಗಿ ಅವರಿಂದ ಆದಷ್ಟು ದೂರವೇ ಇರತಕ್ಕದ್ದು.

ವಿಸ್ತಾರಿತಂ ಮಕರ ಕೇತನ ಧೀವರೇಣ
ಸ್ತ್ರೀ ಸಂಜ್ಞಿತಂ ಬಡಿಶ ಮಂತ್ರ ಭವಾಂಬುರಾಶೌ ।
ತೇನಾ ಚಿರಾತ್ತದಧರಾಮಿಷ ಲೋಲ ಮರ್ತ್ಯ—
ಮತ್ಸ್ಯಾನ್ವಿಕೃಷ್ಯ ಸ ಪಚತ್ಯನುರಾಗವಹ್ನೌ ॥ ೮೪ ॥

ಈ ಸಂಸಾರ ರೂಪದ ಸಮುದ್ರದೊಳಗೆ ಕಾಮದೇವನೆಂಬ ಮೀನುಗಾರನು ಸ್ತ್ರೀರೂಪದ ಬಲೆಯನ್ನು ಬೀಸಿರುವನು. ಈ ಜಾಲದ ಮುಖಾಂತರ ಆ ಜಾಲಗಾರನು—ಕಾಮದೇವನು—ಅಧರಾಮಿಷರೂಪದ ಲೋಭಿ ಪುರುಷ ರೂಪದ ಮೀನುಗಳನ್ನು ಹಿಡಿದು, ತತ್‌ಕ್ಷಣವೇ—ಕೂಡಲೇ—ಬಲಿಯನ್ನು ಜಗ್ಗಿ; ಅನುರಾಗ ರೂಪದ ಬೆಂಕಿಯೊಳಗೆ ಬೇಯಿಸುವನು.

ಇದೊಂದು ಒಳ್ಳೆಯ ರೂಪಕವಾಗಿದೆ. ಇದರಲ್ಲಿ ಸಾಗರವು ಸಂಸಾರ ಸಾಗರವಾಗಿರುವದು. ಮೀನುಗಳನ್ನು ಬೇಯಿಸುವವನು ಹಾಗು ಜಾಲವನ್ನು ಬೀಸುವವನು ಸ್ವತಃ ಕಾಮದೇವನೇ ಆಗಿರುವನು. ಸ್ತ್ರೀಯು ಜಾಲವಾಗಿರುವಳು. ಪುರುಷನು ಮೀನುಗಳ ಪಾತ್ರ ವಹಿಸಿರುವನು. ಇನ್ನು ಮೀನುಗಳು ಬಲೆಯೊಳಗೆ ಬೀಳಲು ಆಮಿಷ ರೂಪವಾಗಿ ಮಳೆಹುಳುಗಳೇ ಮೊದಲಾದವುಗಳ ಪಾತ್ರವನ್ನು ಅಧರಾಮಿಷವು ಪೂರೈಸಿರುವದು. ಬಲೆಯೊಳಗೆ ಸಿಲುಕಿದ ಮೀನುಗಳು ಪಾರಾಗಿಹೋಗಬಹುದೆಂಬ ಅಂಜಿಕೆಯಿಂದ ಶೀಘ್ರವೇ ಬೇಯಿಸಲಾಗಿದೆ. ಬೇಯಿಸಿದ ನಂತರ ಅವು ಅಲುಗಾಡುವದೇ ಸಾಧ್ಯವಿಲ್ಲ. ಅದೇ ರೀತಿಯಾಗಿ ಇಲ್ಲಿ ಪುರುಷ ರೂಪದ ಮೀನುಗಳನ್ನು ಬೇಯಿಸುವ ಕಾರ್ಯವನ್ನು ಅನುರಾಗವೆಂಬ ಬೆಂಕಿಯು ಮಾಡಿರುವದು. ನಿಜಕ್ಕೂ ಇದೊಂದು ಬಲು ಮೋಜಿನ ಪ್ರಸಂಗವಾಗಿದೆ. ಅಂತೂ ಅನುರಾಗವೆಂಬ ಬೆಂಕಿಯಲ್ಲಿ ಬಿದ್ದು ಬೆಂದು ಹೋಗಬಾರದೆನ್ನುವ ಇಚ್ಛೆಯುಳ್ಳವರು ಕಾಮದೇವನ ಸ್ತ್ರೀ

ರೂಪದ ಬಲೆಯಿಂದ ಆದಷ್ಟು ದೂರವೇ ಇರುವದು ವಿಹಿತ. ಇಲ್ಲದಿದ್ದರೆ ಮುಂದಿನ ಪರಿಣಾಮವು ಗೊತ್ತೇ ಇದೆ.

ಕಾಮಿನೀ ಕಾಯ ಕಾಂತಾರೇ ಕುಚ ಪರ್ವತ ದುರ್ಗಮೇ ।
ಮಾ ಸಂಚಾರ ಮನಃ ಪಾಂಥ ತತ್ರಾಸ್ತೇ ಸ್ಮರತಸ್ಕರಃ ॥೮೫॥

ಓ, ಮನನೆಂಬ ಪಥಿಕನೆ! ಕುಚಗಳೆಂಬ ಪರ್ವತಗಳೊಳಗಿಂದ ಹಾಯ್ದು, ದುರ್ಗಮವಾದ ಕಾಮಿನಿಯ ಶರೀರವೆಂಬ ಕಾನನದೊಳಗೆ ಪ್ರವೇಶಿಸಬೇಡ; ಏಕೆಂದರೆ ಅಲ್ಲಿ ತಸ್ಕರ ವೇಷದಲ್ಲಿ ಕಾಮದೇವನು ಅಡಗಿ ಕೊಂಡು ಕುಳಿತಿರುತ್ತಾನೆ. ಆದಕ್ಕಾಗಿ ಅತ್ತ ಸುಳಿಯಬೇಡ.

ಪರ್ವತ ಹಾಗು ಅರಣ್ಯ ಪ್ರವೇಶಗಳಲ್ಲಿ ಕಳ್ಳ ಕಾಕರ ಭಯವು ಇದ್ದೇ ಇರುತ್ತದೆ. ಆದಕ್ಕಾಗಿ ಬುದ್ಧಿವಂತರಾದವರು ಅಂಥ ಸ್ಥಳಗಳ ಕಡೆಗೆ ಹೋಗುವದೇ ಇಲ್ಲ. ಒಂದು ವೇಳೆ ಹೋದರೂ ಸಾಕಷ್ಟು ಜಾಗರೂಕತೆ ಯಿಂದ, ಕಳ್ಳನನ್ನು ಎದುರಿಸುವ ಪೂರ್ವ ತಯಾರಿಯನ್ನು ಮಾಡಿಕೊಂಡು ಹೋಗುತ್ತಾರೆ. ಏಕೆಂದರೆ ಅಂಥಲ್ಲಿ ಹೋಗುವದೆಂದರೆ ತಮ್ಮಲ್ಲಿಯ ಐಶ್ವರ್ಯ ಹಾಗೂ ಪ್ರಾಣಗಳನ್ನು ಕಳೆದುಕೊಳ್ಳಲೂ ಸಿದ್ಧರಾಗಿರಬೇಕಾಗುತ್ತದೆ. ಅರ್ಥಾತ್ ಅಲ್ಲಿ ಅಡಗಿರುವಂಥ ಕಳ್ಳರು ಪಾಂಥಸ್ಥರ ವಿತ್ತ ಜೀವಿತಗಳನ್ನು ಹರಣ ಮಾಡಿಬಿಡುವದು. ಅವರಿಗೆ ಕರುಣೆಯೆಂಬ ಶಬ್ದವೇ ಗೊತ್ತಿರುವದಿಲ್ಲ. ಅಂದಾಗ ಅಂಥವರ ಕೈಯೊಳಗೆ ಸಿಲುಕಿದ ಪಥಿಕರ ಗತಿ ಏನಾಗಬೇಕು?

ಅದೇ ರೀತಿಯಾಗಿ ತರುಣಿಯರ ಕುಚಗಳೆಂಬ ಪರ್ವತಗಳ ಮಧ್ಯದಲ್ಲಿ ಹಾಯ್ದು ಅವಳ ಶರೀರವೆಂಬ ಕಾಡಾರಣ್ಯದೊಳಗೆ ಪ್ರವೇಶಿಸುವ ಮೊದಲು ಪುರುಷರು ಸಾಕಷ್ಟು ವಿಚಾರ ಮಾಡಬೇಕಾದುದು ಅವಶ್ಯವಾಗಿದೆ. ಏಕೆಂದರೆ ಆ ಅರಣ್ಯ"ದಲ್ಲಿ ಕಾಮನೆಂಬ ಕಳ್ಳನುವಾಸವಾಗಿರುವನು. ಅವನು ಪುರುಷರ ವಿತ್ತ ಜೀವಿತಗಳನ್ನು ಕರುಣೆಯಿಲ್ಲದೆ ನಾಶ ಮಾಡುವನು. ಅದಕ್ಕಾಗಿ ಮನವೆಂಬ ಪಥಿಕನೆ, ಹೆಣ್ಣಿನಿಂದ ಆದಷ್ಟು ದೂರವೇ ಇರು.

ವ್ಯಾದೀರ್ಘೇಣ ಚಲೇನ ವಕ್ರಗತಿನಾ ತೇಜಸ್ವಿನಾ ಭೋಗಿನಾ
ನೀಲಾಬ್ಜದ್ಯುತಿನಾಽಹಿನಾ ವರಮಹಂ ದಷ್ಟೋ ನ ತಚ್ಚಕ್ಷುಷಾ
ದಷ್ಟೇ ಸಂತಿ ಚಿಕಿತ್ಸಕಾ ದಿಶಿ ದಿಶಿ ಪ್ರಾಯೇಣ ಧರ್ಮಾರ್ಥಿನೋ
ಮುಗ್ಧಾಕ್ಷಿ ಕ್ಷಣವೀಕ್ಷಿತಸ್ಯ ನ ಹಿ ಮೇ ವೈದ್ಯೋ ನ
ಚಾಪ್ಯೌಷಧಂ ॥೮೬॥

ಬಹಳಷ್ಟು ಉದ್ದವಿದ್ದ, ತೀವ್ರಗತಿಯುಳ್ಳ, ವಕ್ರನಡಿಗೆಯುಳ್ಳ ಪರಿಣತವಾದ ಭಯಂಕರ ಹೆಡೆಯುಳ್ಳ ನಾಗ ಸರ್ಪವು ಕಚ್ಚಿದರೆ ಒಳ್ಳೆಯದೆಂದೇ ಹೇಳಬೇಕು. ಆದರೆ ಅತ್ಯಂತ ವಿಶಾಲ, ಚಂಚಲ, ವಕ್ರ ನಡಿಗೆಯ ತೇಜಸ್ವಿ ಹಾಗು ನೀಲ ಕಮಲದಂತಹ ಕಾಂತಿಯುಳ್ಳ ಕಾಮಿನಿಯ ನೇತ್ರ ದಂಷ್ಟ್ರವು ಒಳ್ಳೆಯದಲ್ಲ. ಏಕೆಂದರೆ ಹಾವು ಕಚ್ಚಿದವನನ್ನು ಉಳಿಸಿಕೊಳ್ಳಲು ಸಾಕಷ್ಟು ಜನ ಪುಣ್ಯವಂತರು ಎಲ್ಲೆಡೆಗೂ ಸಿಕ್ಕುವರು. ಆದರೆ ಕಾಮಿನಿಯರ ದೃಷ್ಟಿ ದಂಷ್ಟ್ರನನ್ನು ಬದುಕಿಸುವ ಔಷಧಿಯೂ ಇಲ್ಲ. ವೈದ್ಯನೂ ಇಲ್ಲ.

ಎಂಥ ಭಯಂಕರ ಹಾವು ಕಚ್ಚಿದರೂ ಕಚ್ಚಿಸಿಕೊಂಡವನನ್ನು ಉಳಿಸಲು ಬಹಳಷ್ಟು ಜನರು ಸಿದ್ಧರಾಗುವರು. ಹಾವಿನ ವಿಷವನ್ನು ಹೋಗಲಾಡಿಸಲೋಸುಗ ನೂರೆಂಟು ಔಷಧಿಗಳೂ ದೊರೆಯುವವು. ಇಷ್ಟೇ ಅಲ್ಲ ಯಾರಿಗಾದರೂ ಹಾವು ಕಚ್ಚಿದೆಯೆಂಬುದು ತಿಳಿದು ಬಂದರೆ ಸಾಕು; ವಿಷವನ್ನಿಳಿಸುವ ರೀತಿಯನ್ನು ಬಲ್ಲವರು; ತಾವೇ ಕಡಿಸಿಕೊಂಡವನ ಬಳಿಗೆ ಹೋಗಿ ಔಷಧೋಪಚಾರ ಮಾಡಿ ಅವನನ್ನು ಬದುಕಿಸುವರು. ಇದು ಎಲ್ಲರೂ ಕಂಡಿರುವ, ನೋಡಿರುವ ಸಂಗತಿಯಾಗಿದೆ. ಆದರೆ ಸ್ತ್ರೀಯ ಓರೆ ನೋಟದಿಂದ ಕಚ್ಚಿಸಿ ಕೊಂಡವನನ್ನು ಬದುಕಿಸುವಂಥ ಇಲ್ಲವೆ ಏರಿದ ವಿಷವನ್ನು ಇಳಿಸುವಂಥ ಔಷಧಿಯೂ ಇಲ್ಲ, ಮಂತ್ರಗಾರನೂ ಇಲ್ಲ. ಅದಕ್ಕಾಗಿ ತಮ್ಮ ಪ್ರಾಣವನ್ನು ರಕ್ಷಿಸಿಕೊಳ್ಳಬೇಕೆನ್ನುವವರು ಯಾವಾಗಲೂ ಸ್ತ್ರೀಯರ ಓರೆ ನೋಟದಿಂದ ಆದಷ್ಟು ದೂರವೇ ಇರುವದು ಬಹಳ ಒಳ್ಳೆಯದೆಂದು ಹೇಳಬಹುದು.

ಇಹ ಹಿ ಮಧುರ ಗೀತಂ ನೃತ್ಯಮೇತ ದ್ರಸೋಽಯಂ
ಸ್ಫುರತಿ ಪರಿಮಲೋಽಸೌ ಸ್ಪರ್ಶ ಏಷಸ್ತನಾನಾಮ್ |
ಇತಿ ಹತ ಪರಮಾರ್ಥೈರಿಂದ್ರಿಯೈರ್ಭ್ರಾಮ್ಯಮಾಣೋ
ಹ್ಯಹಿತ ಕರಣ ವೃತ್ತೈಃ ಪಂಚ ಭಿರ್ವಂಚಿತೋಽಸಿ ||೫೭||

ಈ ಗಾಯನವು ಬಹಳ ಮಧುರವಾಗಿದೆ! ಕುಣಿತವು ಅತಿ ಸುಂದರವಾಗಿದೆ. ಈ ಪದಾರ್ಥದ ರುಚಿಯು ಎಷ್ಟು ಚೆನ್ನಾಗಿದೆ? ಇದರ ಪರಿಮಳವು ಎಷ್ಟೊಂದು ಚಿತ್ತಾಕರ್ಷಕವಾಗಿದೆ! ಓಹ್, ಈ ಸ್ತನಗಳನ್ನು ಸ್ಪರ್ಶಿಸುವದರಿಂದ ಎಷ್ಟೊಂದು ಸುಖವಾಗುತ್ತಿದೆಯಲ್ಲ! ಓ, ಮಾನವನೆ! ನೀನು ಈ ಐದು ವಿಷಯಗಳಲ್ಲಿ ಭ್ರಮಿಷ್ಟನಾಗಿ, ಪರಮಾರ್ಥ ನಾಶಿನಿ, ನರಕಾದಿಗಳಿಗೆ ಕಾರಣೀ ಭೂತಗಳಾದ ಐದೂ ಇಂದ್ರಿಯಗಳಿಂದ ವಂಚಿಸಲ್ಪಟ್ಟಿರುವೆ.

ಕಿವಿಗಳು ಯಾವಾಗಲೂ ಇಂಪಾದ ಗಾಯನವನ್ನು ಕೇಳಲು ಹಾತೊರೆಯುತ್ತಿರುತ್ತವೆ. ಮೂಗು ಪುಷ್ಪಗಳ ಪರಿಮಳವನ್ನು ಆಘ್ರಾಣಿಸಲು ಸದಾ ತವಕ ಪಡುವದು. ತ್ವಚೆಯು ತರುಣಿಯರ ಪುಷ್ಟ ಹಾಗು ಕಠೋರ ಕುಚಗಳನ್ನು ಮರ್ದಿಸಲಿಚ್ಛಿಸುವದು ನಾಲಗೆಯು ಸ್ವಾದಿಷ್ಟ ಪದಾರ್ಥಗಳ ರುಚಿಯನ್ನು ಸವಿಯಲಿಚ್ಛಿಸುವದು. ಕಣ್ಣುಗಳು ಸುಂದರಿಯರನ್ನು ಹಾಗು ಅವರ ಕುಣಿತ, ಹಾವಭಾವಗಳನ್ನು ನೋಡಲಿಚ್ಛಿಸುವದು ಈ ರೀತಿಯಾಗಿ ಕಿವಿ, ಮೂಗು, ತ್ವಚೆ, ನಾಲಗೆ ಹಾಗು ಕಣ್ಣುಗಳೆಂಬ ಪಂಚೇಂದ್ರಿಯಗಳು ತಮ್ಮ ತಮ್ಮ ಗುಣಗಳಿನುಸಾರವಾಗಿ ಬಯಸುವವು.

ಆದರೆ ಇದೇ ಪಂಚೇಂದ್ರಿಯಗಳು ತಮ್ಮ ಚಪಲವನ್ನು ತೀರಿಸಿಕೊಳ್ಳಲು ಮುಂದುವರೆದಾಗ 'ಪುರುಷನು ಪಾತಾಳಕ್ಕಿಳಿದು ಬಿಡುವನು. ಇವು ಐದೂ ಇಂದ್ರಿಯಗಳು ಮಾನವನ ಅಂಕಿತದೊಳಗೆ ಇದ್ದರೆ ಒಳ್ಳೆಯದು. ಇಲ್ಲದಿದ್ದರೆ ತ್ರಿಪುರ ಗತಿಯು ದೇವರಿಗೇ ಪ್ರೀತಿ. ಅದಕ್ಕಾಗಿ ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳಬಾರದು ಎನ್ನುವವರು ಪಂಚೇಂದ್ರಿಯಗಳನ್ನು ತಮ್ಮ ಅಧೀನದೊಳಗ ಇರಿಸಿಕೊಳ್ಳತಕ್ಕದ್ದು. ಈ ಮಾತು ಕೇವಲ ಮಾನವ ವರ್ಗಕ್ಕೇ

ಅನ್ವಯಿಸಪದೆ ಪ್ರಾಣಿಗಳಿಗೂ ಅನ್ವಯಿಸುವದು. ಅದನ್ನೇ ಈ ಮುಂದೆ ಕೊಡಲಾಗಿದೆ.

ಹುಲ್ಲು ತಿಂದು ಬದುಕುವಂಥ ಚಿಗರೆಯು ಬೇಟೆಗಾರನಿಂದ ಸಾಕಷ್ಟು ದೂರದ ಅಂತರದಲ್ಲಿದ್ದರೂ ಅವನ—ಬೇಟೆಗಾರನ-ಇಂಪಾದ ಗಾಯನಕ್ಕೆ ಮನಸೋತು ತನ್ನ ಪ್ರಾಣವನ್ನು ಕಳೆದುಕೊಳ್ಳುವದು. ಒಂದು ವೇಳೆ ಚಿಗರೆಯು ಕಿವಿಗಳನ್ನು ತನ್ನ ಅಧೀನದೊಳಗಿರಿಸಿಕೊಂಡು ಗಾಯನಕ್ಕೆ ಮರುಳಾಗದಿದ್ದರೆ ಬೇಟೆಗಾರನ ಬಲೆಗೆ ಬೀಳುವುದು ಸಾಧ್ಯವೇ ಇಲ್ಲ.

ಪರ್ವತ ಪ್ರಾಯದ ದೇಹವುಳ್ಳ ಹಾಗು ಎಂಥ ವೃಕ್ಷಗಳನ್ನೂ ನಿಮಿಷಾರ್ಧದಲ್ಲಿ ಕಿತ್ತು ಬಿಸುಟಬಲ್ಲ ಸಾಮರ್ಥ್ಯವನ್ನು ಪಡೆದ ಗಜರಾಜನು ಕೇವಲ ತನ್ನ ಗಜರಾಣಿಯ ಭೋಗಲಾಲಸೆಯಿಂದಲೇ ಬೇಟೆಗಾರರ ಬಲೆಯೊಳಗೆ ಸಿಲುಕುವನು. ಅಂದರೆ ಲಿಂಗೇಂದ್ರಿಯವನ್ನು ಅಂಕಿತದೊಳಗಿರಿಸಿಕೊಳ್ಳದ್ದರಿಂದ ತನ್ನ ನಾಶಕ್ಕೆ ತಾನೇ ಕಾರಣನಾಗಬೇಕಾಗುತ್ತದೆ.

ಪತಂಗವು ದೀಪದ ರಮಣೀಯ ಜ್ಯೋತಿಯ ರೂಪಕ್ಕೆ ಮರುಳಾಗಿ ಅದನ್ನು ಆಲಿಂಗಿಸಲೋಸುಗ ಮೇಲಿಂದ ಮೇಲೆ ಅದರ ಬಳಿಗೆ ಹೋಗಲು ಪ್ರಯತ್ನಿಸುತ್ತದೆ. ಹಾಗು ಕೊನೆಗೊಮ್ಮೆ ಆಲಿಂಗಿಸಲು ಹೋದ ಪತಂಗವು ಸುಟ್ಟುಕೊಂಡು ಸತ್ತು ಬಿಡುವದು. ಪತಂಗವು ಕೇವಲ ನೇತ್ರೇಂದ್ರಿಯದ ಆಮಿಷಕ್ಕೆ ಬಲಿಯಾಗಿ ಬಿಡುವದು.

ಅಪಾರ ಜಲರಾಶಿಯಲ್ಲಿರುವ ಮೀನವು ಕೇವಲ ಖಾದ್ಯದ ಆಸೆಗಾಗಿ ಬಲೆಯ ಮುಳ್ಳನ್ನು ನುಂಗಿ ತನ್ನ ಪ್ರಾಣವನ್ನು ಕಳೆದುಕೊಳ್ಳುವದು. ಅರ್ಥಾತ್ ಮೀನವು ತನ್ನ ಇಂದ್ರಿಯ "ನಾಲಗೆ"ಯಿಂದಾಗಿ ಪ್ರಾಣಕ್ಕೆರವಾಗುವದು.

ಭ್ರಮರವು ಕಮಲವನ್ನು ಕಚ್ಚಬಲ್ಲದು ತನ್ನ ರೆಕ್ಕೆಗಳ ಬಲದಿಂದ ಹಾರಿ ಹೋಗಲೂ ಬಲ್ಲದು. ಆದರೆ ಕಮಲಗಳಲ್ಲಿಯ, ಮನವನ್ನು ಮೋಹಿಸು

ವಂಥ ಪರಿಮಳಯುಕ್ತ ಪರಾಗದ ಆಸೆಯಿಂದ ಕಮಲದೊಳಗೇ ಬಂದಿಯಾಗಿ ಸೆರೆಯಾಳಾಗಿ, ತನ್ನ ಪ್ರಾಣವನ್ನು ಕಳೆದುಕೊಳ್ಳುವದು. ಅರ್ಥಾತ್‌ ಅದು ತನ್ನ ಇಂದ್ರಿಯ "ಮೂಗಿನಿಂದಾಗಿ" ಪ್ರಾಣಕ್ಕೆರವಾಗುವದು.

ಈ ರೀತಿಯಾಗಿ ಜಿಗರೆ, ಆನೆ, ಮೀನು, ಪತಂಗ, ಹಾಗು ಭ್ರಮರಗಳು ಬೇರೆ ಬೇರೆ ಪ್ರಾಣಿಗಳಾಗಿದ್ದರೂ "ವಿಷಯ"ದೊಳಗೆ ಸಿಲುಕಿ ಸಾವಿಗೀಡಾಗುವವು. ಕೇವಲ ಒಂದೊಂದೇ ಇಂದ್ರಿಯಗಳಿಗೆ ಬಲಿಯಾಗಿ ಆ ಐದೂ ಜೀವಗಳು ಪ್ರಾಣವನ್ನು ತ್ಯಜಿಸಿರುವಾಗ ಐದೂ ಇಂದ್ರಿಯಗಳ ಆಮಿಷಕ್ಕೆ ಬಲಿಯಾದಂಥ ಮಾನವನು ಯಾವ ರೀತಿಯಿಂದ ಚಡಪಡಿಸಿ ಸಾಯುತ್ತಿರಬೇಕೆಂಬುವನ್ನು ಕೇವಲ ಊಹಿಸಿಯೇ ಅರಿತುಕೊಳ್ಳಬೇಕೆ ವಿನಾ ಬರೆಯುವದು ಸಾಧ್ಯವಿಲ್ಲ

ಸಂಸಾರದೊಳಗೆ ಬಂಧನಗಳೂ ಬಹಳಷ್ಟು ಇರುತ್ತವೆ. ಆದರೆ ಅವೆಲ್ಲವುಗಳಿಗಿಂತ ಪ್ರೇಮ ಬಂಧನವು ಅತಿ ಭಯಂಕರವಾದುದಾಗಿದೆ. ಈ ಬಂಧನದೊಳಗಿಂದ ಪಾರಾಗುವದು ಸಾಧ್ಯವೇ ಇಲ್ಲವೆಂದು ಹೇಳಬಹುದು. ಏಕೆಂದರೆ ಎಂಥ ಗಟ್ಟಿ ಬಿದಿರನ್ನಾದರೂ ಕೊರೆಯಬಲ್ಲ ಶಕ್ತಿಯನ್ನು ಪಡೆದ ಭ್ರಮರವು ಕಮಲದ ಪಕಳೆಗಳೊಳಗೆ ಸೆರೆ ಸಿಕ್ಕಾಗ ಪರಾಗ ಪ್ರೇಮದಿಂದ ಅಲ್ಲಿಯೇ ಉಳಿದು ಸತ್ತು ಹೋಗುವುದೇ ವಿನಾ ಪಕಳೆಗಳನ್ನು ಕತ್ತರಿಸಿ ಹೊರಬರುವ ಪ್ರಯತ್ನ ಮಾಡುವದಿಲ್ಲ. ಕೇವಲ ಇದೊಂದು ಉದಾಹರಣೆಯಿಂದ ಪ್ರೇಮ ಬಂಧನವು ಎಷ್ಟೊಂದು ಭಯಂಕರವಾದುದೆಂಬುದರ ಕಲ್ಪನೆ ಬರುವದು.

ಮೇಲ್ಕಾಣಿಸಿದ ವಿಷಯಗಳಿಂದ ಉಳಿಯಬೇಕೆನ್ನುವವನು ಮನವನ್ನು ತನ್ನಾಧೀನದೊಳಗಿರಿಸಿಕೊಳ್ಳಬೇಕು. ಮನವನ್ನು ಆಧೀನದೊಳಿರಿಸಿಕೊಳ್ಳುವದು. ಕಠಿಣ, ನಿಜ ಆದರೂ ಸತತವಾದ ಅಭ್ಯಾಸದಿಂದ ಹಾಗೆ ಮಾಡುವದು ಸಾಧ್ಯವಿದೆ. ಇಚ್ಛೆಯಿದ್ದಲ್ಲಿ ಮಾರ್ಗವಿದೆ ಎಂಬುವನ್ನು ಯಾರೂ ಮರೆಯುವಂತಿಲ್ಲ. ಅಂದರೆ ಮಾನವನು ತಾನು ಒಳ್ಳೆಯವನಾಗಲು ಇಚ್ಛಿಸಿದರೆ, ಅವನಿಗೆ ಹಾಗಾಗಲೂ ಸಾಧ್ಯವಿದೆ.

ನ ಗಮ್ಯೋ ಮಂತ್ರಾಣಾಂ ನ ಚ ಭವತಿ ಭೈಷಜ್ಯ ವಿಷಯೋ
ನ ಚಾಪಿ ಪ್ರಧ್ವಂಸಂ ವ್ರಜತಿ ವಿವಿಧೈಃ ಶಾಂತಿ ಕಶತೈಃ ।
ಭ್ರಮಾ ವೇಶಾದಂಗೇ ಕಿಮಪಿ ವಿದಧದ್ಭಂಗಮಸಮಂ
ಸ್ಮರೋಪ ಪಸ್ಮಾರೋಯಂ ಭ್ರಯತಿ ದೃಶಂ
ಘೂರ್ಣಯತಿ ಚ ॥೨೮॥

ಕಾಮದೇವನೆಂಬ ಅಪಸ್ಮಾರ ರೋಗವು ಭ್ರಮೆಯು ಆವೇಶದಿಂದ ಒಮ್ಮಿಂದೊಮ್ಮೆಲಿ ಹೆಚ್ಚಾಗಲು ಶರೀರದೊಳಗೆ ಅಸಹ್ಯ; ಸಹಿಸಲಾಗದಂಥ ವೇದನೆಯುಂಟಾಗುವದು. ಶರೀರವು ನೋಯತೊಡಗುವದು. ತಲೆ ತಿರುಗಿದಂತಾಗಿ ಕಣ್ಣುಗಳೆದುರು ಕತ್ತಲು ಗವಿದಂತಾಗುವದು. ಈ ರೋಗವು ಮಂತ್ರಗಳಿಂದಾಗಲಿ, ಔಷಧಿಯಿಂದಾಗಲಿ ಇಲ್ಲವೆ ಶಾಂತಿ ಕರ್ಮ ಮತ್ತು ಸ್ತುತಿ–ಪೂಜೆಗಳಿಂದಾಗಲಿ ನಷ್ಟವಾಗುವದಿಲ್ಲ.

ಅಪಸ್ಮಾರ ರೋಗವು ಬಹುತರವಾಗಿ—ವ್ಯಗೀ ಬೇನೆಯು—ಚಿಂತೆ ಹಾಗೂ ಶೋಕಗಳಿಂದಾಗಿ ಹುಟ್ಟಿಕೊಳ್ಳುವದು. ಇದು ಉಲ್ಬಣಾವಸ್ಥೆಗೇರಿದಾಗ, ಮನುಷ್ಯನ ಜ್ಞಾನವೇ ನಷ್ಟವಾಗಿ ಬಿಡುವದು. ಕಣ್ಣುಗಳು ವಕ್ರವಾಗುವವು. ಕೈಕಾಲುಗಳೊಳಗಿನ ಶಕ್ತಿಯೇ ಉಡುಗಿ ಹೋಗುವದು. ಸ್ಮರಣ ಶಕ್ತಿಯಂತೂ ಯಾವಾಗಲೋ ನಾಶವಾಗಿ ಬಿಡುವದು. ನಿಜಕ್ಕೂ ಅಪಸ್ಮಾರವು ಅಷ್ಟೊಂದು ಭಯಂಕರವಾದ ರೋಗವೇ ಆಗಿರುವದು. ಆದರೂ ಔಷಧಿಗಳಿಂದ ಅದನ್ನು ಗುಣಪಡಿಸಬಹುದು.

ಕಾಮದೇವನೆಂಬ— ಕಾಮದೇವ ರೂಪದ— ಅಪಸ್ಮಾರದ ಪರಿಣಾಮವೂ ಮೇಲೆ ಹೇಳಿದ ರೀತಿಯಲ್ಲಿಯೇ ಆಗುವದು ಇಷ್ಟೇ ಅಲ್ಲ, ಅದಕ್ಕಿಂತ ಈ ಅಪಸ್ಮಾರವು ಅತಿ ಭಯಂಕರವಾದುದಾಗಿರುವದು. ಪ್ರಾಣನಾಶಕ ಹಾಗೂ ಪರಮಾರ್ಥನಾಶಕವಾದ ಈ ಭಯಂಕರ ರೋಗಕ್ಕೆ ಯಾವ ಔಷಧಿಯೂ ಇಲ್ಲ. ಅದಕ್ಕಾಗಿ ಈ ರೋಗವನ್ನು ಅಂಟಿಸಿಕೊಂಡು ನಾನಾ ಬಗೆಯ ಯಾತನೆಗಳನ್ನು ಅನುಭವಿಸುವದಕ್ಕಿಂತ ರೋಗವು ಬಾರದಿರುವಂತೆ ಜಾಗರೂಕತೆ ವಹಿಸುವದು ಒಳ್ಳೆಯದು.

ಈ ರೋಗವು ಬಾರದಿರುವಂತೆ ಜಾಗರೂಕತೆ ವಹಿಸುವದೆಂದರೆ ಸುಂದರಿಯ ಚಂಚಲ ನೇತ್ರಗಳಿಂದ ದೂರವಿರುವದಾಗಿದೆ. ಏಕೆಂದರೆ ಸ್ತ್ರೀಯರ ತೀಕ್ಷ್ಣ ಓರೆ ನೋಟದಿಂದ ಉಳಿದುಕೊಳ್ಳುವವರಿಗೆ ಈ ರೋಗವು ಅಂಟಿಕೊಳ್ಳುವದಿಲ್ಲ. ಒಂದು ವೇಳೆ ಓರೆ ನೋಟದ ಸೆಳೆತಕ್ಕೆ ಸಿಲುಕಿ ಅದರ ವಿಷವು ಪುರುಷನಿಗೆ ಏರಿತೆಂದರೆ "ವಿಷಸ್ಯ ವಿಷಮೌಷಧಂ"— ವಿಷಕ್ಕೆ ವಿಷವೇ ಔಷಧಿಯಾಗಿದೆ- ಎಂಬಂತೆ ಅವರ ವಿಷವೇ ಅದನ್ನು ಇಳಿಸಬಲ್ಲದು. ಅಂಥ ಪ್ರಸಂಗಗಳಲ್ಲಿ ಅವರು:

"ಹೇ ಸುಂದರ ವದನೆಯಾದ ಕೋಮಲಾಂಗಿಯೆ! ಇನ್ನೊಂದು ಸಲ ನಿನ್ನ ದೃಷ್ಟಿಯನ್ನು ನನ್ನೆಡೆಗೆ ಬೀರು. ಏಕೆಂದರೆ ವಿಷಕ್ಕೆ ವಿಷವೇ ಔಷಧಿಯೆಂದು ಕೇಳಿರುವೆನು, ಈಗ ನನ್ನ ಮೈಯೊಳಗೆ ನಿನ್ನ ವಿಷವು ಏರಿರುವದು. ಅದಕ್ಕೆ ಈಗ ನೀನು ಇಳಿಸಿದರೇ ಅದು ಇಳಿಯುವದು" ಎಂದು ತರುಣಿಯರನ್ನು ಪ್ರಾರ್ಥಿಸಿಕೊಳ್ಳಬೇಕು. ಅರ್ಥಾತ್ ಏರಿದ 'ವಿಷ'ವನ್ನು ಇಳಿಸಿಕೊಳ್ಳಬೇಕು.

ಜಾತ್ಯಂಧಾಯ ಚ. ದುರ್ಮುಖಾಯ ಚ. ಜರಾಜೀರ್ಣಾಖಿಲಾಂಗಾಯ ಚ.
ಗ್ರಾಮೀಣಾಯ ಚ ದುಷ್ಕುಲಾಯ ಚ ಗಲತ್ಕುಷ್ಠಾಭಿಭೂತಾಯ ಚ ।
ಯಚ್ಛಂತೀಷು ಮನೋಹರಂ ನಿಜವಪುರ್ಲಕ್ಷ್ಮೀಲವ ಶ್ರದ್ಧಯಾ
ಪುಣ್ಯಸ್ತ್ರೀಷು ವಿವೇಕಕಲ್ಪ ಲತಿಕಾಶ ಸ್ತ್ರೀಪು ರಜ್ಯೇತ ಕಃ ॥೪೯॥

ಕುರುಪಿಯೂ, ವೃದ್ಧಾಪ್ಯದಿಂದ ಶಿಥಿಲನಾದವನೂ, ಅಶಿಕ್ಷಿತನೂ, ನೀಚನೂ ಹಾಗು ಕುಷ್ಟದಿಂದ ಬಳಲುವಂಥನಿಗೆ ಕೂಡ, ಅಲ್ಪ ಹಣದ ಆಶೆಗಾಗಿ ತನ್ನ ಸುಂದರ ಸುಕೋಮಲ ಶರೀರವನ್ನು ಒಪ್ಪಿಸಲು-ಅರ್ಪಿಸಲು-ಸಿದ್ಧಳಾಗುವಂಥ ಹಾಗು ವಿವೇಕವೆಂಬ ಕಲ್ಪಲತೆಯನ್ನು ಕತ್ತರಿಸಿ ಹಾಕುವಂಥ ಕತ್ತರಿಯಂತಿರುವ ವೇಶ್ಯೆಯೊಂದಿಗೆ ಯಾವ ಬುದ್ಧಿವಂತನು ಸಮಾಗಮವನ್ನು ಬಯಸುವನು ?

ವೇಶ್ಯೆಯು ಯಾವಾಗಲೂ ಹಣವನ್ನು ಮೋಹಿಸುತ್ತಾಳೆಯೆ ವಿನಾ ಪುರುಷನನ್ನಲ್ಲ. ಯಾವನ ಬಳಿ ಹಣ ವಿರುವದೋ ಅವನ ಆಧೀನಳಾಗುವಳು. ಹಣವಂತನು ಇಂಥವನೇ ಇರಬೇಕೆಂಬ ನಿಯಮವು ಅವಳಲ್ಲಿರುವದಿಲ್ಲ. ಅವನು ಅರ್ಥಾತ್ ಹಣವನ್ನು ತೆಗೆದುಕೊಂಡು ಬಂದವನು, ಕುರುಡನಿರಲಿ, ಕುಂಬನಿರಲಿ, ಚಾಂಡಾಲ ನಿರಲಿ, ಯಾವುದೇ ರೋಗದಿಂದ ಬಳಲುತ್ತಿರಲಿ ಅವನನ್ನು ಕೂಡಿಕೊಳ್ಳುವದು ಹಾಗು ಅವನಲ್ಲಿದ್ದ ಹಣವನ್ನು ಎತ್ತಿ ಹಾಕುವದು ವೇಶ್ಯೆಯ ಕರ್ತವ್ಯವಾಗಿದೆ. ಅವಳು ಹಣದೆದುರು ತನ್ನ ಸುಂದರವಾದ ಸುಕೋಮಲವಾದ ದೇಹಕ್ಕೆ ಕವಡೆಯ ಬೆಲೆಯನ್ನು ಕೊಡದೆ ಬಂದವನಿಗೆ ಅರ್ಪಿಸಿಬಿಡುವಳು.

ವೇಶ್ಯೆಯ ರೀತಿಯೂ ಅತಿ ವಿಚಿತ್ರವಾದುದಾಗಿದೆ. ಅವಳ ಕಣ್ಣಿಗೆ ದುಡ್ಡಿದ್ದವನು— ಎಂಥ ರೋಗಿಯೇ ಆಗಿರಲಿ, ಇನ್ನೊಂದು ಗಳಿಗೆಗೆ ಸಾಯುವ ಮುದುಕನೋ ಆಗಿರಲಿ— ಸುಂದರ ಯುವಕನಂತೆ ಕಾಣುವನು. ಹಣ ವಿಲ್ಲದಂತಹ ಸುಂದರ ತರುಣನು ಕುಷ್ಟರೋಗಿಯಂತೆ ಕಾಣುವನು.

ಬಳಿಯಲ್ಲಿ ಹಣವಿರುವವರೆಗೆ ಎಂಥವನನ್ನೂ ತಮ್ಮ ಬಳಿ ಇರಿಸಿಕೊಂಡ ವೇಶ್ಯೆಯರು ಅವನ ಬಳಿಯಲ್ಲಿಯ ಹಣವು ಮುಗಿದು ಹೋಗಿದೆಯೆಂಬುವು ಗೊತ್ತಾಗುತ್ತಲೇ ಅವನನ್ನು ಕತ್ತು ಹಿಡಿದು ತಮ್ಮ ಮನೆಯೊಳಗಿಂದ ಹೊರಗೆದಬ್ಬುವರು. ಆದರೂ ಅವಳ ದೇಹದ ರುಚಿಯನ್ನು ಕಂಡ ನಾಯಿಗಳಂತಹ ಪುರುಷನು ಅವಳ ಮನೆಯತ್ತ ಸುಳಿಯುವದನ್ನು, ಅವಳಿಗೆ ಯಾಚಿಸುವದನ್ನು ಬಿಡುವದಿಲ್ಲ, ಏಕೆಂದರೆ ವೇಶ್ಯೆಯರ ಮೋಹಜಾಲವೇ ಆ ಬಗೆಯದಾಗಿರುತ್ತದೆ. ಜಗತ್ತಿನೊಳಗಿನ ಸ್ತ್ರೀಯರೆಲ್ಲ ಪುರುಷರಿಗೆ ತಮ್ಮ ಮೋಹದ ಬಲೆಯನ್ನು ಬೀಸುತ್ತಾರೆಂಬುದು ನಿಜ. ಆದರೂ ವೇಶ್ಯೆಯರು ಬೀಸುವ ಜಾಲವು ಅತಿ ವಿಚಿತ್ರವಾಗಿರುತ್ತದೆ. ಬಲು ಭಯಂಕರವಾಗಿರುತ್ತದೆ. ಅವರೊಳಗಿಂದ ಪಾರಾಗುವದು ಸಾಧ್ಯವೇ ಇಲ್ಲವೆಂದು ಹೇಳಬೇಕು.

ಏಕೆಂದರೆ ವೇಶ್ಯೆಯರಲ್ಲಿ ಪುರುಷರನ್ನು ಮರುಳು ಮಾಡುವ ಶಕ್ತಿಯು ಇನ್ನುಳಿದ ಸ್ತ್ರೀಯರಿಗಿಂತ ಸಾವಿರಪಟ್ಟು ಹೆಚ್ಚಿಗಿರುತ್ತದೆ. ಹಾಗು ಅವರು

ಹಾಡು—ಕುಣಿತಗಳ ಬಲೆಯನ್ನೂ ಬೀಸಿ ತಮ್ಮ ಬಳಿ ಬಂದ 'ಹಕ್ಕಿ'ಯು ಹಾರಿ ಹೋಗದಂತೆ ಏನೇನು ಮಾಡಬೇಕೋ ಅವುಗಳನ್ನೆಲ್ಲ ಮಾಡಿ ಬಿಡುವರು. ಆಗ ಅಲ್ಲಿಗೆ ಹೋದ ಪುರುಷರು ಅವಳ ಒಯ್ಯಾರಗಳಿಗೆ, ಅಂಗ ಸೌಷ್ಟವಕ್ಕೆ ಮನಸೋತು ದಾಸರಾಗಿ ಬಿಡುವರು. ಒಂದು ಸಲ ವೇಶ್ಯೆಯ ದಾಸನಾದವನ ಅರ್ಥಾತ್ ವೇಶ್ಯೆಗೆ ಮನಸೋತವನ ಕರ್ಮಕಥೆಯು ಅಲ್ಲಿಗೆ ಮುಗಿಯಿತೆಂದೇ ಹೇಳಬೇಕು. ಆ ಹತಭಾಗ್ಯನಿಗೆ ತಂದೆ-ತಾಯಿಗಳ ಹಾಗು ಮಡದಿ—ಮಕ್ಕಳು ವೈರಿಗಳಂತೆ ಕಂಡು ಬರುವರು.

ಸಾಧಾರಣವಾಗಿ ನವಯುವಕರನ್ನು ತಮ್ಮ ಬಲೆಯೊಳಗೆ ಕೆಡವಿಕೊಳ್ಳುವದೆಂದರೆ ವೇಶ್ಯೆಯರಿಗೆ ನೀರು ಕುಡಿದಷ್ಟು ಹಗುರಾದ ಕೆಲಸವೆಂದೇ ಹೇಳಬೇಕು. ಏಕೆಂದರೆ ಅರಣ್ಯ ಮಧ್ಯದೊಳಗಿದ್ದುಕೊಂಡು ಗಾಳಿ, ಎಲೆ ಮೊದಲಾದವುಗಳನ್ನು ತಿಂದು ತಪವನ್ನಾಚರಿಸುವಂಥ ಮುನಿಗಳನ್ನೇ ಈ ವೇಶ್ಯೆಯರು ತಮ್ಮ ಬುಟ್ಟಿಯೊಳಗೆ ಹಾಕಿಕೊಂಡಿರುವರೆಂದಾಗ ಹಾಲು, ಮೊಸರು ಮತ್ತು ಬೆಣ್ಣೆಗಳಂತಹ ಪೌಷ್ಟಿಕ ಆಹಾರವನ್ನು ಸೇವಿಸುವಂಥ ಯುವಕರ ಪಾಡೇನು? ಅವರನ್ನು ತಮ್ಮೆಡೆಗೆ ಸೆಳೆದುಕೊಳ್ಳುವದು ಎಷ್ಟೊತ್ತಿನ ಕೆಲಸ? ಈ ಬಗೆಯ ಬೇಟೆಯಾಡುವಾಗಲಂತೂ ಅವರು ಅಷ್ಟೊಂದು ಪರಿಶ್ರಮವನ್ನೂ ವಹಿಸುವದಿಲ್ಲ.

ನೋಟಕ್ಕೆ ಸುಂದರಿಯರೂ, ಮನೋಹರೆಯರೂ ಆಗಿರುವ ಈ ವೇಶ್ಯೆಯರು ಪುರುಷರ ರಕ್ತ-ಮಾಂಸವನ್ನು ಹೀರಿಕೊಳ್ಳುವಂಥ ಪಿಶಾಚಿನಿಯರಾಗಿದ್ದಾರೆ. ಏಕೆಂದರೆ ಪಿಶಾಚಿನಿಯರು ಏನನ್ನು ಮಾಡುವರೆಂದು ನಾವು ಕೇಳಿರುವೆವೋ ಅವುಗಳನ್ನೆಲ್ಲ ಈ ವೇಶ್ಯೆಯರು ಮಾಡುತ್ತಾರೆ. ಪಿಶಾಚಿನಿಯರು ಯಾರನ್ನು ದಿಟ್ಟಿಸಿ ನೋಡುವರೋ ಅವರು ದಿನ ದಿನಕ್ಕೆ ಕ್ಷೀಣರಾಗಿ ಕೊನೆಗೊಂದು ಸತ್ತು ಹೋಗುತ್ತಾರೆ. ಅದೇ ರೀತಿಯಾಗಿ ವೇಶ್ಯೆಯರು ಕೂಡ ಯಾವನೊಬ್ಬನ ಮೇಲೆ ತಮ್ಮ ಓರೆನೋಟವನ್ನು ಬೀರಿದರೆ ಆವನು ಹುಚ್ಚನಂತಾಗಿ ಬಿಡುತ್ತಾನೆ. ಇಂಥ ಸಮಯವನ್ನೇ ಕಾಯುತ್ತಿರುವ ಅವಳು ತನ್ನ ಸೆಳವಿನೊಳಗೆ ಸಿಲುಕಿದಂಥವನನ್ನು ಆಡಿಸಿ, ಆವನಿಂದ ಪಡೆಯ

ಬೇಕಾದೆಲ್ಲವನ್ನೂ ಪಡೆದು ಕೊನೆಗೊಂದು ದಿನ ಅವನಿಗೆ 'ಇಲ್ಲ'ವೆನ್ನಿಸಿ ಬಿಡುವಳು.

ವೇಶ್ಯೆಯರು ಹಾವುಗಳಿಗಿಂತ ಭಯಂಕರರಾಗಿರುತ್ತಾರೆ. ಏಕೆಂದರೆ ಹಾವುಗಳಿಗೆ ಕೇವಲ ಹಲ್ಲುಗಳಲ್ಲಿ ಮಾತ್ರ ವಿಷವಿರುತ್ತದೆ. ಆದರೆ ವೇಶ್ಯೆಯ ದೇಹದಾದ್ಯಂತ ವಿಷವು ತುಂಬಿಕೊಂಡಿರುತ್ತದೆ. ಅಂತೆಯೇ ಹಾವು ಕಡಿದವನು ಬದುಕುತ್ತಾನೆ. ಆದರೆ ವೇಶ್ಯೆಯಿಂದ ಗಾಸಿಗೊಂಡವನು ಬದುಕುವದಿಲ್ಲ. ಇನ್ನೂ ಒಂದು ಮಾತೆಂದರೆ ಹಾವು ಮನುಷ್ಯನ ತೀರ ಸನಿಹಕ್ಕೆ ಬಂದು ಕಚ್ಚುವದು. ಆದರೆ ಇವಳದು ಹಾಗಲ್ಲ. ಸಾಕಷ್ಟು ದೂರದಿಂದಲೇ ಇವಳು ಕೇವಲ ನೋಟದಿಂದ— ಕಚ್ಚಿ ಬಿಡುವಳು. ಒಂದು ಸಲ ಇವಳ ಯಾವುದಾದರೊಂದು ಅಂಗವು ಪುರುಷನ ಮನವನ್ನು ಮುಟ್ಟಿತೆಂದರೆ ಅವನಿಗೆ ವಿಷವೇರಲು ಪ್ರಾರಂಭಿಸಿತೆಂದರೆ ಅಂಥವರನ್ನು ದೇವರೂ—ಇದ್ದರೆ—ಕಾಪಾಡುವದು ಸಾಧ್ಯವಿಲ್ಲ.

ವೇಶ್ಯೆಯ ವಿಷವು ಪುರುಷರಿಗಷ್ಟೇ ಸೀಮಿತವಾಗಿರದೆ ಅವರ—ಪುರುಷರ— ಮುಖಾಂತರ ಮನೆಯೊಳಗಿನ ಪತ್ನಿಯ ಆಹುತಿಯನ್ನೂ ತೆಗೆದುಕೊಳ್ಳುವದು. ಸೂಳೆಯರ ಭಕ್ತನಾಗಿರುವಂಥವನ ಕೈಹಿಡಿದವರು ಎಂತೆಂತಹ ಕಷ್ಟಪಡುತ್ತಾರೆಂಬುದು ಯಾರಿಗೂ ಅರಿಯದ ವಿಷಯವಲ್ಲ. ಹೀಗಿದ್ದರೂ ಆ ಭಕ್ತರು ಅವಳನ್ನು ಸ್ತುತಿಸುವದು ಹಾಗು ಅವಳು ತಮ್ಮನ್ನು ತ್ಯಜಿಸಿದರೆ ತಾವು ಈ ಲೋಕದಲ್ಲಿ ಬದುಕಿ ಬಾಳುವದು ಸಾಧ್ಯವೇ ಇಲ್ಲವೆಂದು ಭಾವಿಸುವದು ಆಶ್ಚರ್ಯಕರವಾಗಿದೆಯೆನ್ನುವಕ್ಕಿಂತ ಅವಳ— ವೇಶ್ಯೆಯ— ಮೋಹದ ಬಲೆಯು ಅಷ್ಟೊಂದು ಭಯಂಕರವಾಗಿರುತ್ತದೆ, ಪ್ರಭಾವಶಾಲಿಯಾಗಿರುತ್ತದೆ ಎಂದು ಹೇಳಿದರೆ ಸತ್ಯವನ್ನೇ ನುಡಿದಂತಾದೀತು ಅಲ್ಲವೆ ?

ವೇಶ್ಯಾಽಸೌ ಮದನ ಜ್ವಾಲಾ ರೂಪೇಂಧನ ಸಮೇಧಿತಾ ।
ಕಾಮಿಭಿರ್ಯತ್ರ ಹೂಯಂತೆ ಯೌವನಾನಿ ಧನಾನಿ ಚ ॥೯೦॥

ಈ ವೇಶ್ಯೆಯರು ಸುಂದರತೆಯೆಂಬ—ಸುಂದರತಾ ರೂಪದ—ಕಟ್ಟಿಗೆಗಳಿಂದ ಸುಡುವಂಥ ಪ್ರಚಂಡ ಕಾಮಾಗ್ನಿಯಾಗಿರುವರು. ಕಾಮುಕರಾದ ಪುರುಷರು ಈ ಅಗ್ನಿಯೊಳಗೆ ತಮ್ಮ ತಾರುಣ್ಯ ಹಾಗು ಐಶ್ವರ್ಯಗಳ ಆಹುತಿಯನ್ನು ಕೊಡುವರು.

ವೇಶ್ಯೆಯರು ಪ್ರಜ್ವಲಿಸುವ ಅಗ್ನಿಯಂತಿರುತ್ತಾರೆಂದು ಹೇಳಬಹುದು. ಅಗ್ನಿಯು ಕಟ್ಟಿಗೆಗಳಿಂದ ಪ್ರಜ್ವಲಿಸಿ ತನ್ನ ಸೆಳೆತಕ್ಕೆ ಸಿಕ್ಕದ್ದನ್ನೆಲ್ಲ ಎಳೆದುಕೊಂಡು ಸುಟ್ಟು ಬಿಡುವಂತೆ ಈ ವೇಶ್ಯಾ ರೂಪದ ಅಗ್ನಿಯು ತನ್ನ ರೂಪವೆಂಬ ಕಟ್ಟಿಗೆಯಿಂದ ಪ್ರಜ್ವಲಿಸತೊಡಗುವಳು- ಹಾಗು ತನ್ನ ಜ್ವಾಲೆಗಳ ಸೆಳೆತಮೊಳಗೆ ಸಿಲುಕಿದಂತಹ ಕಾಮಾಂಧ ತರುಣರನ್ನು ಅಗ್ನಿಯೊಳಕ್ಕೆ ಎಳೆದುಕೊಂಡು ಬಿಡುವಳು.

ಸಾಧಾರಣ ಅಗ್ನಿಯ ಹೊಡೆತಕ್ಕೆ ಸಿಲುಕಿದ ವಸ್ತುಗಳು ಸುರಕ್ಷಿತವಾಗಿ ಹೇಗೆ ಬರಲಾರವೋ, ಅರ್ಥಾತ್ ಯಾವ ರೀತಿಯಿಂದ ನಾಶವಾಗಿ ಬಿಡುವವೋ ವೇಶ್ಯಾರೂಪದ ಪ್ರಜ್ವಲಿಸುವ ಅಗ್ನಿಯ ಸೆಳೆತಕ್ಕೆ ಸಿಲುಕಿದ ತರುಣರೂ ಸುರಕ್ಷಿತವಾಗಿ ಹೊರಬರುವದಿಲ್ಲ. ಅವರು ತಮ್ಮ ಅಮೂಲ್ಯವಾದ ತಾರುಣ್ಯದ ಜೊತೆಗೆ ಐಶ್ವರ್ಯವನ್ನೂ ಆ ಅಗ್ನಿಗೆ ಆಹುತಿ ಕೊಟ್ಟು ಬಿಡುವರು. ಕೊನೆಗೆ ಅವರು ಕೂಡ ತಮ್ಮ ಕೈಹಿಡಿದ ಪತ್ನಿಯರನ್ನು, ಮಕ್ಕಳನ್ನು, ತಂದೆ ತಾಯಿಗಳನ್ನು ಅನಾಥರನ್ನಾಗಿ ಮಾಡಿ, ನಿರ್ಗತಿಕರನ್ನಾಗಿ, ಅನ್ನಾನ್ನಗತಿಕರನ್ನಾಗಿ ಮಾಡಿ ತಾವೂ ಆ ಬೆಂಕಿಯಲ್ಲಿ ದಗ್ಧರಾಗಿಬಿಡುವರು.

ಕಶ್ಚುಂಬತಿ ಕುಲಪುರುಷೋ ವೇಶ್ಯಾಧರ ಪಲ್ಲವಂ ಮನೋಜ್ಞಮಪಿ ।
ಚಾರಭಟಚೌರ ಚೇಟಕ ನಟವಿಟ ನಿಷ್ಠೀವನ ಶರಾವಮ್ ॥೯೧॥

ವೇಶ್ಯೆಯ ಅಧರ ಪಲ್ಲವಗಳು—ತುಟಿಗಳು—ಅತ್ಯಂತ ಮನೋಹರ-ಚಿತ್ತಾಕರ್ಷಕವಾಗಿವೆಯಾದರೂ—ಅವು—ಜಾರ, ನಟ, ವಿಟ, ದಾಸ, ಪಾಲೀಕಾರ ಹಾಗು ಗುಪ್ತಚಾರರು ಉಗುಳುವಂಥ ಸ್ಥಾನವಾಗಿರುವದು.

ಹೀಗಿರುವಾಗ ಯಾವ ಕುಲೀನ ಪುರುಷನು ಅವುಗಳನ್ನು—ಆ ತುಟಿಗಳನ್ನು ಚುಂಬಿಸಲು ಇಚ್ಛಿಪಡುತ್ತಾನೆ? ಅರ್ಥಾತ್ ಯಾವನೂ ಇಚ್ಛಿಸುವದಿಲ್ಲ.

ವೇಶ್ಯೆಯರ ತುಟಿಗಳು ನಿಜಕ್ಕೂ ಮನೋಹರವಾಗಿರುತ್ತವೆ ಚೇತೋಹಾರಿಯಾಗಿರುತ್ತವೆ. ಆದರೆ ಆ ತುಟಿಗಳು ತೋರಿಕೆಗೆ ಕಾಣುವಷ್ಟು ಪವಿತ್ರವಾಗಿರುವದಿಲ್ಲ. ಏಕೆಂದರೆ ಅವುಗಳ ಸ್ವಾದವನ್ನು ಎಲ್ಲರೂ-ದುಡ್ಡು ಕೊಟ್ಟಂಥವರೆಲ್ಲರೂ-ಅಂದರೆ ಕಳ್ಳರು, ನೀಚರು, ಮೋಸಗಾರರು, ರೋಗಿಗಳೇ ಮೊದಲಾದವರೆಲ್ಲರೂ ನೋಡಿರುತ್ತಾರೆ. ಅಂಥವರೆಲ್ಲರ ಉಗುಳಿನಿಂದ ಅದು ಮಲೀನವಾಗಿ ಹೋಗಿರುತ್ತದೆ. ಅರ್ಥಾತ್ ಆ ತುಟಿಗಳು ಅವರೆಲ್ಲರ ಉಗುಳಿನ ಸಂಚಯ ಸ್ಥಾನವಾಗಿರುತ್ತದೆ.

ಈ ವಿಷಯವು ಕುಲೀನ ಪುರುಷರಿಗೆ ಚನ್ನಾಗಿ ಗೊತ್ತಿರುತ್ತದೆ. ಅಂತೆಯೇ ಅವರು ವೇಶ್ಯೆಯರ ಚೇತೋಹಾರಿಯಾದ ತುಟಿಗಳನ್ನು ನೋಡಿದರೂ—ಅವುಗಳ ಹಿಂದೆ ಏನು ಅಡಗಿದೆಯೆಂಬುದನ್ನು ಚನ್ನಾಗಿ ಅರಿತುಕೊಂಡಿರುವದರಿಂದ—ಅವುಗಳನ್ನು ಚುಂಬಿಸಲು ಅರ್ಥಾತ್ ಅಧರ ಪಾನ ಮಾಡಲು ಎಂದಿಗೂ ಮುಂದುವರಿಯುವದಿಲ್ಲ. ಅಂದರೆ ಕಳ್ಳರ, ಸುಳ್ಳರ, ನೀಚರೇ ಮೊದಲಾದ ಘಟಿಂಗರ ಉಗುಳಿನ ಸಂಚಯ ಸ್ಥಾನದಲ್ಲಿ ತಮ್ಮ ಬಾಯನ್ನಿಡಲು ಒಳ್ಳೆಯವರು ಎಂದಿಗೂ ಇಚ್ಛಿಸುವದಿಲ್ಲ, ಅಪೇಕ್ಷಿಸುವದಿಲ್ಲ.

ಸೂಳೆಯು ಹಣವನ್ನು ಮೋಹಿಸುತ್ತಾಳೆಯೆ ವಿನಾ ಪುರುಷರನ್ನಲ್ಲ ಎಂದು ಹಿಂದೆಯೇ ಹೇಳಲಾಗಿದೆ. ಅಂತೆಯೇ ಅವಳು ತನ್ನ ಬಳಿ ಬಂದವನು ಯಾರೆಂದು ವಿಚಾರ ಮಾಡದೆ ಅವನು ಎಷ್ಟು ಹಣವನ್ನು ತಂದಿದ್ದಾನೆ ಎಂಬುದನ್ನು ನೋಡುವಳು. ಹಾಗು ಅವನಲ್ಲಿಂದ ಹಣವನ್ನು ಕಿತ್ತುಕೊಂಡು ತನ್ನ ದೇಹವನ್ನು ಅವರಿಗೆ- ಅವಳು ಕಳ್ಳನಿರಲಿ, ಸುಳ್ಳನಿರಲಿ, ಜಾರನಿರಲಿ, ರೋಗಿಯಿರಲಿ, ಯಾವನೇ ಇರಲಿ ಅವನಿಗೆ- ಯಾವುದೇ ಬಗೆಯ ಸಂಕೋಚವಿಲ್ಲದೆ ಅರ್ಪಿಸಿ ಬಿಡುವಳು.

ಹಣಕೊಟ್ಟು ಬಂದವನು ಅವಳನ್ನು ಸುಮ್ಮನೆ ಬಿಡುವದೂ ಸಾಧ್ಯವಿರುವದಿಲ್ಲ. ಅವರು ಅವಳ ಮನೋಹರವಾದ ತುಟಿಗಳನ್ನು ಕಚ್ಚುವರು.

ಸೀಪುವರು, ಅವಳ ಶರೀರವನ್ನು ಮಲಿನಗೊಳಿಸುವರು, ಅವಳ ಅಂಗ-ಅಂಗವನ್ನು ತಮ್ಮ ಕಾರ್ಯದ ಸಮಯದಲ್ಲಿ ಉಪಯೋಗಿಸಿಕೊಳ್ಳುವರು. ಅಂಥ ಸಮಯದಲ್ಲಿ ಅವರಿಗೆ ಅಂದರೆ ಸೂಳೆ ಹಾಗು ಅವರ ಭಕ್ತರಿಗೆ ಪವಿತ್ರ ಹಾಗು ಅಪವಿತ್ರವೆಂಬ ಪರಿವೆಯೇ ಇರುವದಿಲ್ಲ. ಹೀಗಿರುವಾಗ ಒಳ್ಳೆಯವರು ಅಂಥ ಸೂಳೆಯರ ಸನಿಹಕ್ಕೆ ಸುಳಿಯುವದು ಎಂದಿಗಾದರೂ ಸಾಧ್ಯವಿದೆಯೇ ? ಇಲ್ಲವೇ ಇಲ್ಲ.

ಕಾಮಿನಿ ಗರ್ಹಣ ಪ್ರಶಂಸೆ ಮುಗಿಯಿತು.



# ಸುವಿರಕ್ತ ಪ್ರಶಂಸೆ

ಧನ್ಯಾಸ್ತ ಏವ ಚಪಲಾಯತ ಲೋಚನಾನಾಂ
ತಾರುಣ್ಯ ದರ್ಪ ಧನ ಪೀನ ಪಯೋಧರಾಣಾಮ್ ।
ಕ್ಷಮೋದರೋ ಪರಿಲಸ ತ್ರಿವಲೀಲ ತಾನಾಂ
ದೃಷ್ಟ್ವಾಽಽ ಕೃತಿ ವಿಕೃತಿ ಮೇತಿ ಮನೋನ ಯೇಷಾಂ ॥೯೨॥

ವಿಶಾಲವಾದ ಚಪಲ—ಚಂಚಲ— ನೇತ್ರಗಳುಳ್ಳವಳು, ತಾರುಣ್ಯದ ಅಭಿಮಾನದಿಂದಿರುವವಳು, ಪುಷ್ಟವಾದ ಕಠಿಣ—ಬಿರುಸಾದ—ಸ್ತನಗಳುಳ್ಳವಳು ಹಾಗು ತೆಳ್ಳಗಿನ ಹೊಟ್ಟೆಯ ಮೇಲೆ ತ್ರಿವಲ್ಲಿಯು ಸುಶೋಭಿತವಾಗಿರುವಂಥ ಯುವತಿಯರ ಮುಖವನ್ನು ನೋಡಿದಾಗ, ಮನಸ್ಸು ವಿಕಾರವಾಗದಂಥವನು — ಕಾಮೋದ್ರೇಕಗೊಳ್ಳದಂಥವನು — ನಿಜಕ್ಕೂ ಧನ್ಯನೆಂದೇ ಹೇಳಬೇಕು.

ದೊಡ್ಡ-ದೊಡ್ಡ ಚಂಚಲ ಕಣ್ಣುಗಳುಳ್ಳವಳು, ಎದ್ದು ಕಾಣುವಷ್ಟು ಉಬ್ಬಿದಂಥ ಬಿರುಸಾದ ಮೊಲೆಗಳುಳ್ಳವಳು, ಹಾಗು ತೆಳ್ಳಗಿನ ಹೊಟ್ಟೆಯ ಕೆಳ ಭಾಗದಲ್ಲಿ ಮೂರು ಗೆರೆಗಳು ಮೂಡಿರುವಂಥ ಇದೇ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸಿದಂಥ ಸುಂದರ ಯುವತಿಯು ಕಣ್ಣಿಗೆ ಬಿದ್ದಾಗ, ಅವಳಿಗೆ ಮನಸೋಲದಂಥವರು ತೀರ ವಿರಳವೆಂದು ಹೇಳಬಹುದು. ಅಂಥ ಸುಂದರಿಯನ್ನು ಕಣ್ಮುಟ್ಟಿ ನೋಡಿದಾಗಲೂ ಯಾವನ ಹೃದಯದಲ್ಲಿ ಅಲ್ಲೋಲ—ಕಲ್ಲೋಲ ವಾಗುವದಿಲ್ಲವೋ, ಯಾವನ ಮನದೊಳಗೆ ವಿಕಾರವು ಉತ್ಪನ್ನವಾಗುವದಿಲ್ಲವೋ, ಯಾವನು ಕಾಮ ಪರವಶನಾಗುವದಿಲ್ಲವೋ ಅಂಥವನು ನಿಜಕ್ಕೂ ದೊಡ್ಡ ಮನುಷ್ಯನು.

ಅವನು ಇಡಿಯ ಜಗತ್ತನ್ನೇ ಗೆಲ್ಲಬಲ್ಲನೆಂದು ಧಾರಳವಾಗಿ ಹೇಳಬಹುದು. ಅವನಿಗಿಂತ ಮಿಗಿಲಾದ ಆತ್ಮ ಸಂಯಮಿಗಳು ಈ ಜಗತ್ತಿನೊಳಗೆ

ಬೇರೆ ಯಾರೂ ಸಿಕ್ಕಲಾರರು. ಅಂಥವರು ಯಾವುದೇ ಬಗೆಯ ಅಡೆತಡೆಗಳಿಲ್ಲದೆ ಸಹಜವಾಗಿ, ಲೀಲಾಜಾಲವಾಗಿ ಪರಮಪದವನ್ನು ಪಡೆಯುವರು.

ಏಕೆಂದರೆ ಅಂಥ ಸುರಸುಂದರಿಗೆ ಅವನ ಚಿತ್ತವನ್ನು ಹರಣಮಾಡಲು ಸಾಧ್ಯವಾಗಲಿಲ್ಲವೆಂದಾಗ ಜಗತ್ತಿನ ಬೇರಾವ ಜಂಜಡಗಳೂ ಅವರನ್ನು ಬಂಧಿಸಿಡಲಾರವು; ಅಂದರೆ ಉಳಿದ ಯಾವ ಪದಾರ್ಥಗಳೂ ಅವನನ್ನು ಮೋಹದೊಳಗೆ ಸಿಲುಕಿಸಲಾರವು. ಅಂಥ ತರುಣಿಯರಿಂದ ಮುಖವನ್ನು ಹೊರಳಿಸಿದಂಥವನು ಇಡಿಯ ಜಗತ್ತಿನಿಂದಲೇ ಮುಖ ತಿರುಗಿಸಬಲ್ಲನು. ಅವನು ನಿಜವಾದ ವಿರಕ್ತನು. ಮಹಾತ್ಮನು; ಏಕೆಂದರೆ:

ಅನುರಾಗ ಪೂರ್ಣಳಾದ ತರುಣಿ ಹಾಗು ಮೃತ್ಯು ಇವೆರಡೂ ಎದುರಿಗೆ ಗೋಚರವಾದಾಗ ಯಾವನ ಮನವು ವ್ಯಾಕುಲ ಗೊಳ್ಳುವದಿಲ್ಲವೋ, ಚಂಚಲ ವಾಗುವದಿಲ್ಲವೋ ಅವನು ನಿಜವಾದ ವಿರಕ್ತನು; ಮಹಾತ್ಮನು.

ಬಾಲೇ ಲೀಲಾ ಮುಕುಲಿತ ಮಮಿ ಸುಂದರಾ ದೃಷ್ಟಿ ಪಾತಾ :
ಕಿಂ ಕ್ಷಿಪ್ಯಂತೇ ವಿರಮ ವಿರಮ ವ್ಯರ್ಥ ಪಕ್ಷ ಶ್ರಮಂತೇ !
ಸಂಪ್ರತ್ಯನ್ಯೇ ವಯಮು ಪರತಂ ಬಾಲ್ಯಾಮಾಸ್ಥಾ ವನಾಂತಾ
ಕ್ಷೀಣೋ ಮೋಹಸ್ತೃಣಮಿವ ಜಗಜ್ಜಾಲ ಮಾಲೋಕ
ಯಾಮಃ ||೯೬||

ಹೇ ಬಾಲಿಕೆ! ಲೀಲಾವತಿಯಾದ ನೀನು ನಿನ್ನ ಅರೆ ತೆರೆದ ಕಣ್ಣುಗಳಿಂದ ಸುಂದರ ಕಟಾಕ್ಷವನ್ನು ನಮ್ಮೆಡೆಗೆ ಒಂದೇ ಸವನೆ ಏತಕ್ಕೆ ಬೀರುತ್ತಿರುವೆ ? ವಿಶ್ರಮಿಸು. ಕೊಂಚ ವಿಶ್ರಾಂತಿಯನ್ನು ತೆಗೆದುಕೊ ! ನಮಗಾಗಿ ನೀನು ಪಡುತ್ತಿರುವ ಈ ಶ್ರಮವು ವ್ಯರ್ಥವಾದುದಾಗಿದೆ. ಏಕೆಂದರೆ ಈಗ ನಾವು ಮೊದಲಿನಂತಿಲ್ಲ. ನಮ್ಮಲ್ಲಿಯ ಹುಡುಗ ಬುದ್ಧಿಯು ಮಾಯವಾಗಿದೆ. ಅಜ್ಞಾನವು ದೂರವಾಗಿ ಬಿಟ್ಟಿದೆ— ಅಂತೆಯೇ ಈಗ ನಾವು ಕಾನನದೊಳಗೆ ವಾಸಿಸುತ್ತಿದ್ದೇವೆ.— ಹಾಗು ನಾವು ಈ ಜಗತ್ತಿನ ಜಾಲಗಳನ್ನು ಹುಲ್ಲು ಕಡ್ಡಿಯ ಸಮಾನ—ತೃಣ ಸಮಾನ—ವೆಂದು ಭಾವಿಸುತ್ತೇವೆ.

ಇಯಂಬಾಲಾ ಮಾಂ ಪ್ರತ್ಯ ನವಸ್ತ ಮಿಂದೀ ವರದಲ-
ಪ್ರಭಾಶಿಕೋರಂ ಚಕ್ಷುಃ ಕ್ಷಿಪತಿ ಕಿಂ ಪ್ರೇತ ಮನಯಾ ।
ಗತೋ ಮೋಹೋಽ ಸ್ಮಾಕಂ ಸ್ಮರ ಶಬರ ಬಾಣ ವ್ಯತಿಕರ-
ಜ್ವಲಜ್ವಾಲಾಃ ಶಾಂತಾಸ್ತ ದಪಿ ನ ಬರಾಕೆ ವಿರಮತಿ ॥ ೯೪ ॥

ಕಮಲದ ದಳಗಳ ಶೋಭೆಯನ್ನು ಕೂಡ ನಾಚಿಸುವಂಥ ಕಣ್ಣು ಗಳಿಂದ-ಒಂದೇ ಸವನೆ- ನನ್ನನ್ನು ನೋಡುತ್ತಿರುವ ಈ ಬಾಲಿಕೆಯ ಉದ್ದೇಶವಾದರೂ ಏನಿರಬಹುದು? — ನನಗಂತೂ ಒಂದೂ ತಿಳಿಯು ಲೊಲ್ಲದು. ಆದರೂ ಈ ಬಾಲಿಕೆಯ ನೋಟದಿಂದಾಗಿ — ನನ್ನಲ್ಲಿ ಮನೆ ಮಾಡಿಕೊಂಡಿದ್ದಂಥ ಅಜ್ಞಾನವು ಸಂಪೂರ್ಣವಾಗಿ ನಷ್ಟವಾಯಿತು.— ಇಷ್ಟೇ ಅಲ್ಲ—ಕಾಮದೇವನೆಂಬ ಭಿಲ್ಲನ—ಕಾಡು ಪುರುಷನ—ಬಾಣದಿಂದ ಉತ್ಪನ್ನವಾಗಿದ್ದ ಅಗ್ನಿಯು ಕೂಡ—ಅವಳ ನೋಟದಿಂದ— ಶಾಂತವಾಗಿ ಬಿಟ್ಟಿತು. ಹೀಗಿದ್ದರೂ ಕೂಡ ಈ ಮೂರ್ಖ ಬಾಲಿಕೆಯು ವಿಶ್ರಾಂತಿ ಪಡೆಯಲೊಲ್ಲಳಲ್ಲ !

ಚೇತೋಹಾರಿಣಿಯರಾದ ತರುಣಿಯರು ವೀರ ವಿರಕ್ತರತ್ತ ಎಂತಹ ಉನ್ಮಾದಕ ದೃಷ್ಟಿಯನ್ನು ಬೀರಿದರೂ ಅವರ ಮನವು ವಿಕಾರಕ್ಕೊಳಗಾಗುವ ದರ ಬದಲು ತಮ್ಮೆಡೆಗೆ ದೃಷ್ಟಿ ಬೀರುತ್ತಿರುವಂಥ ತರುಣಿಯರ ಬಗೆಗೆ ಕರುಣೆಯು ಉತ್ಪನ್ನವಾಗುತ್ತದೆ. ಅವರ ಮನದಲ್ಲಿ ಇಷ್ಟೊಂದು ತದೇಕ ಚಿತ್ತಳಾಗಿ ನಮ್ಮನ್ನೇ ನೋಡುತ್ತಿರುವ ಈ ಬಾಲಿಕೆಯ ಬಯಕೆಯು ಏನಿರ ಬಹುದು ? ಪಾಪ ಕೋಮಲ ನಯನಗಳಿಗೆ ಎಷ್ಟೊಂದು ತೊಂದರೆ ಕೊಡುತ್ತಿರುವಳಲ್ಲ ! ಅವುಗಳಿಗೆ — ಕಣ್ಣುಗಳಿಗೆ — ಕೊಂಚ ವಿಶ್ರಾಂತಿ ಯನ್ನಿತ್ತರೆ ಅವಳಿಗೇ ಒಳ್ಳೆಯದಾದೀತು. ಎಂಬ ಕರುಣೆಯ ಭಾವನೆಯಲ್ಲಿ ಉತ್ಪನ್ನವಾಗುವದು.

ಶುಭ್ರಂ ಸದ್ಮ ಸವಿಭ್ರಮಾ ಯುವತಯಃ ಶ್ವೇತಾತ ಪತ್ರೋಜ್ವಲಾ,
ಲಕ್ಷ್ಮೀ ರಿತ್ಯನು ಭೂಯತೇ ಸ್ಥಿರಮಿವ ಸ್ಫೀತೆ ಶುಭೇ ಕರ್ಮಣಿ ।

ವಿಚ್ಛಿನ್ನೇ ನಿತರಾಮನಂಗ ಕಲಹ ಕ್ರೀಡಾ ತ್ರುಟತ್ತಂತು ಕಂ
ಮುಕ್ತಾ ಜಾಲಮಿವ ಪ್ರಯಾತಿ ಝಟಿತಿ ಭ್ರಶ್ಯದ್ದಿಶೋ
ದೃಶ್ಯತಾಂ ‖ ೯೫ ‖

ಮಾನವನು ಪೂರ್ವಜನ್ಮದಲ್ಲಿ ಮಾಡಿದಂಥ ಪುಣ್ಯ ಕರ್ಮಗಳ ಪ್ರಭಾವವು ಎಲ್ಲಿಯ ವರೆಗಿರುವದೋ ಅಲ್ಲಿಯ ವರೆಗೆ ಅವನಿಗೆ, ಇರಲಿಕ್ಕೆ ಒಳ್ಳೆಯ ಮನೆ,—ಉಪಭೋಗಿಸಲು—ಬಿನ್ನಾಣಗಿತ್ತಿಯರಾದ ಸುಂದರ ಯುವತಿಯರು, ಹಾಗು ಅತುಲ ಐಶ್ವರ್ಯ ಅರ್ಥಾತ್ ಛತ್ರ—ಚಾಮರ ಸಹಿತಳಾದ ಲಕ್ಷ್ಮಿಯು ಅವನಿಗೆ ಒಲಿಯುವಳು. ಆದರೆ ಪೂರ್ವ ಜನ್ಮದಲ್ಲಿ ಮಾಡಿದಂಥ ಪುಣ್ಯದ ಸಂಚಯವು ಮುಗಿಯುತ್ತಲೆ ಆ ಎಲ್ಲ ಸುಖ ಹಾಗೂ ಐಶ್ವರ್ಯದ ವಸ್ತುಗಳು,-ಮೈಥುನ ಸಮಯದ ಪ್ರಣಯ ಕಲಹದಲ್ಲಿ ಹರಿದು ಹೋದಂಥ ಹಾರ-ಸರ—ದೊಳಗಿನ ಮುತ್ತುಗಳಂತೆ — ಚಲ್ಲಾಪಿಲ್ಲಿಯಾಗಿ ಬಿಡುವವು.

ಪೂರ್ವ ಜನ್ಮದಲ್ಲಿ ಒಳ್ಳೆಯ ಕಾರ್ಯಗಳನ್ನು ಮಾಡಿ ಗಳಿಸಿದಂಥ ಪುಣ್ಯದ ಬಲದಿಂದ ಈ ಜನ್ಮದಲ್ಲಿ ಪುರುಷನಿಗೆ ಭೋಗಕ್ಕಾಗಿ ಸುಂದರಿಯು ರಾದ ಲಲನೆಯರು ಸಿಗುವರು. ಇರಲು ಅರಮನೆಯಂತಹ ಭವನವು ಸಿಗುವದು. ಆದರೆ ಸಂಗ್ರಹಿತವಾದ ಪುಣ್ಯವೆಲ್ಲ ವೆಚ್ಚವಾದೊಡನೆ ಅವುಗಳೆಲ್ಲ ಇಲ್ಲವಾಗಿ ಬಿಡುವವು. ಆದಕ್ಕಾಗಿ ಅಂಥ ಸ್ವರ್ಗೀಯ ಸುಖವು ಯಾವಾಗಲೂ ದೊರೆಯಬೇಕು; ಅದಕ್ಕೆ ಯಾವುದೇ ಬಗೆಯ ಚ್ಯುತಿಬರಬಾರದು ಎಂಬ ಇಚ್ಛೆಯುಳ್ಳವರು ಸಾಕಷ್ಟು ಒಳ್ಳೆಯ ಕಾರ್ಯಗಳನ್ನು ಮಾಡಿ ಪುಣ್ಯವನ್ನು ಗಳಿಸಿಕೊಂಡಿರಬೇಕು. ಅಂದರೆ ಅದುವೇ ಮುಂದಿನ ಜನ್ಮಕ್ಕೆ ಕಟ್ಟಿಟ್ಟ ಬುತ್ತಿಯಾಗುವದು.

ಸದಾ ಯೋಗಾಭ್ಯಾಸ ವ್ಯಸನ ವಶಯೋರಾತ್ಮ ಮನಸೋ—
ರವಿಚ್ಛಿನ್ನಾ ಮೈತ್ರಿ ಸ್ಫುರತಿ ಯಮಿನಸ್ತಸ್ಯ ಕಿಂ ತೈಃ ।
ಪ್ರಿಯಾಣಾ ಮಾಲಾ ಪೈರಧರ ಮಧುಭಿರ್ವ ಕ್ತ್ರ ವಿಧು ಭಿಃ
ಸನಿಶ್ವಾಸಾಮೋದೈಃ ಸಕುಚಕಲಶಾ ಶ್ಲೇಷ ಸುರತೈಃ ‖ ೯೬ ‖

ತಮ್ಮ ಮನವನ್ನು ಯಾವಾಗಲೂ ಅಧೀನದೊಳಗಿರಿಸಿಕೊಂಡು, ಆತ್ಮವನ್ನು ಯೋಗಾಭ್ಯಾಸದ ಸಾಧನೆಯಲ್ಲಿ ತೊಡಗಿಸಲಿಚ್ಛಿಸುವವರಿಗೆ ಅರ್ಥಾತ್ ತೊಡಗಿಸಿದವರಿಗೆ, ಸುಂದರಿಯರಾದ ತರುಣಿಯರೊಂದಿಗೆ ಮಾತುಕತೆಗಳು, ಅಧರಾಮೃತಪಾನ, ಶ್ವಾಸಗಳ ಪರಿಮಳ ಸಹಿತವಾದ ಮುಖಚಂದ್ರ ಕಲಶದಂತಿರುವ ಕುಚಗಳನ್ನು ಹೃದಯಕ್ಕೆ ಹೊಂದಿಸಿಕೊಂಡಂಥ ಕಾಮಕ್ರೀಡೆಯಿಂದಾಗುವ ಲಾಭವೇನು ?

ಇಂದ್ರಿಯಗಳು ಹಾಗು ಮನಸ್ಸನ್ನು ತನ್ನ ಅಧೀನದೊಳಗಿರಿಸಿಕೊಂಡು ಆತ್ಮವನ್ನು ಯೋಗಾಭ್ಯಾಸದಲ್ಲಿ ತೊಡಗಿಸಿದವರಿಗೆ ಜಗತ್ತಿನ ಪರಿವೆಯೇ ಇರುವದಿಲ್ಲ. ವಿಷಯಲಾಲಸೆಯುಳ್ಳ ಸ್ತ್ರೀಯರು ಭೋಗ ವಿಲಾಸವೇ ಜೀವನದ ಅಂತಿಮ ಗುರಿ ಹಾಗು ಆ ಸುಖದ ಸರಿಸಮಾನವಾದುದು ಬೇರಾವುದೂ ಇಲ್ಲವೆಂದು ಭಾವಿಸುವಂಥ ಸ್ತ್ರೀಯರು ಯೋಗಾಭ್ಯಾಸಿಗಳನ್ನು ಏಕಾಂತದಲ್ಲಿ ಸಂಧಿಸಿ ಅವರನ್ನು ಪ್ರಿಯ ವಚನಗಳಿಂದ ಸಂತುಷ್ಟಗೊಳಿಸಲೆತ್ನಿಸಿದರೆ, ತಮ್ಮ ತುಟಿಗಳನ್ನು ಅವರ ಮುಖದ ಸಮೀಪಕ್ಕೆ ಒಯ್ದರೆ ಇಲ್ಲವೆ ತಮ್ಮ ಬಿರುಸಾದ ಕುಚಗಳು ಅವರ ಎದೆಗೆ ಬಲವಾಗಿ ತಾಗುವಂತೆ ಘಟ್ಟಿಯಾಗಿ ಅಪ್ಪಿಕೊಂಡರೆ ಆ ಸರ್ವಸಂಗ ಪರಿತ್ಯಾಗಿ ಇವರತ್ತ ಗಮನವೀಯುಬಹುದೆ ? ಇಲ್ಲವೇ ಇಲ್ಲ. ಸ್ತ್ರೀಯರ ಯಾವ ಮೋಹನಾಸ್ತ್ರವೂ ಅವರೆದುರು ನಡೆಯಲಾರದು.

ಕಿಂ ಕಂದರ್ಪಕರಂ ಕದರ್ಥಯಸಿ ಕೋದಂಡ ಟಂಕಾರಿತಂ
ರೇ ರೇ ಕೋಕಿಲ ಕೋಮಲ ಕಲರವಂ ಕಿಂ ತ್ವಂ ವೃಥಾವಲ್ಗಸೇ |
ಮುಗ್ಧೆ ಸ್ನಿಗ್ಧ ವಿದಗ್ಧ ಮಧುರೈರ್ಲೋಲೈಃ ಕಟಾಕ್ಷೈರಲಂ
ಚೇತಶ್ಚುಂಬಿತ ಚಂದ್ರಚೂಡ ಚರಣಧ್ಯಾನಾಮೃತಂ ವರ್ತನೇ ||೯೭||

ಓ ಕಾಮದೇವನೆ! ನೀನು ನಿನ್ನ ಬಿಲ್ಲಿನ ಟೇಂಕಾರ ಶಬ್ದದಿಂದ ನಮಗೆ ತೊಂದರೆಯನ್ನೇತಕ್ಕೆ ಕೊಡುತ್ತಿರುವೆ? ಕೋಮಲ ಕೋಗಿಲೆಯೆ! ನಿನ್ನ ಮಧುರವಾಣಿಯಿಂದೇತಕ್ಕೆ ಮಾತನಾಡುತ್ತಿರುವೆ ? ಹೇ ಸುಂದರಿಯೆ ! ನೀನು ಚಾತುರ್ಯ ಪೂರ್ಣವಾದ ನಿನ್ನ ಸುಂದರ, ಮಧುರ ಹಾಗು ಚಂಚಲ

ಮಯವಾದ ನೇತ್ರ ಕಟಾಕ್ಷವನ್ನು ನನ್ನೆಡೆಗೆ ಬೀರದಿರು. ಅದರಿಂದ ಪ್ರಯೋಜನವೇನೂ ಆಗಲಾರದು. ಏಕೆಂದರೆ ನನ್ನ ಮನವು ಚಂದ್ರಚೂಡನ-ಮಹಾದೇವನ — ಚರಣಗಳ ಧ್ಯಾನರೂಪದ ಅಮೃತವನ್ನು ಸವಿಯುವದರಲ್ಲಿ ತಲ್ಲೀನವಾಗಿರುವದು.

ಮನವನ್ನು ಹಾಗು ತಮ್ಮ ಪಂಚೇಂದ್ರಿಯಗಳನ್ನು ಅಧೀನದೊಳಗಿರಿಸಿ ಕೊಂಡ ವೀರ ವಿರಕ್ತರಿಗೆ ಯಾವ ಆಮಿಷಗಳೂ ತಡೆಗಟ್ಟಲಾರವು. ಎಂಥ ಆಕರ್ಷಣೆಯೂ ಅವರ ಚಿತ್ತವನ್ನು ಚಂಚಲಗೊಳಿಸಲಾರದು. ಸ್ವತಃ ಕಾಮ ದೇವನು ಅವರ ಮೇಲೆ ಆಕ್ರಮಣ ಮಾಡಿದರೂ, ಕೋಗಿಲೆಗಳು ತಮ್ಮ ಮಧುರ ಕಂಠದಿಂದ ಕಾಮಾಗ್ನಿಯನ್ನು ಹೆಚ್ಚಿಸುವ ಉನ್ಮಾದಮಯ ಗೀತೆ ಗಳನ್ನು ಹಾಡಿದರೂ, ಸುಂದರಿಯರು ತಮ್ಮ ಓರೆನೋಟವನ್ನು ಬೀರಿದರೂ ಅವುಗಳಿಂದ ವಿರಕ್ತರ ಮೇಲೆ ಯಾವ ಪರಿಣಾಮವೂ ಆಗಲಾರದು. ಪರಿಣಾಮದ ಬದಲು ಅವರ ಬಗೆ ಕರುಣೆಯುಂಟಾಗುವದು.

ಯದಾಸೀದ ಜ್ಞಾನಂ ಸ್ಮರತಿ ಮಿರ ಸಂಚಾರ ಜನಿತಂ
ತದಾ ಸರ್ವಂ ನಾರೀಮಯ ಮಿದಂ ಶೇಷಂ ಜಗದ್ಭೂತ್ ।
ಇದಾನೀಮಸ್ಮಾಕಂ ಪಟುತರ ವಿವೇಕಾಂಜನ ದೃಶಾಂ
ಸಮೀ ಭೂತಾದೃಷ್ಟಿ, ಸ್ತ್ರೀ ಭುವನಮಪಿ ಬ್ರಹ್ಮ ಮನುತೆ ॥೯೮॥

ಕಾಮದ ಅಜ್ಞಾನವು—ಅಂಧಕಾರವು—ನನ್ನಲ್ಲಿ ಮನೆಮಾಡಿಕೊಂಡಿರುವವರೆಗೆ ನನಗೆ ಇಡಿಯ ಜಗತ್ತು ಸ್ತ್ರೀಮಯವಾಗಿ ಕಾಣಿಸುತ್ತಿದ್ದಿತು. ಆದರೆ ಈಗ ನನ್ನ ಕಣ್ಣುಗಳಿಗೆ ವಿವೇಕದ ಅಂಜನವನ್ನು ಹಚ್ಚಿಕೊಂಡಿದ್ದೇನೆ. ಅದಕ್ಕಾಗಿ ನನ್ನಲ್ಲಿ ಸಮದೃಷ್ಟಿಯು ಮನೆಮಾಡಿಕೊಂಡು ಬಿಟ್ಟಿರುವದು. ಅಂತೆಯೇ ನನಗೆ ಮೂರೂಲೋಕಗಳು ಬ್ರಹ್ಮಮಯವಾಗಿ ಕಾಣಿಸತೊಡಗಿವೆ.

ನನ್ನ ಶರೀರದ ಮೇಲೆ ಕಾಮದೇವನ ಪ್ರಭಾವವು ಬಿದ್ದಾಗ ನಾನು ಅಂಧಕಾರಮಯ ಅಜ್ಞಾನದೊಳಗೆ ತೊಳಲಾಡುತ್ತಿದ್ದೆನು. ಆಗ ನಾನು ಎತ್ತ ದೃಷ್ಟಿ ಹಾಯಿಸಿದರೂ ಅತ್ತ ಸುಂದರ ತರುಣಿಯರೇ ಕಂಡು ಬರುತ್ತಿ

ಷ್ಟರು. ಇಡಿಯ ಜಗತ್ತೇ ಸ್ತ್ರೀಮಯವಾಗಿ ಕಂಡು ಬರುತ್ತಿತ್ತು. ಆದರೆ ಈಗ ನನ್ನಲ್ಲಿ ಭಯಂಕರ ಪರಿವರ್ತನೆಯಾಗಿದೆ. ವಿವೇಕವೆಂಬ ಅಂಜನ ವನ್ನು-ಕಾಡಿಗೆಯನ್ನು-ನನ್ನ ಕಣ್ಣುಗಳಿಗೆ ಹಚ್ಚಿಕೊಂಡಿದ್ದೇನೆ. ಅಂತೆಯೇ ಈಗ ನನಗೆ ಸಮದೃಷ್ಟಿಯುಂಟಾಗಿ ಸ್ತ್ರೀಯರು ಕಾಣಿಸುವದೇ ಇಲ್ಲ. ಈ ಜಗತ್ತಿನೊಳಗಿನ ಪ್ರಾಣಿ ಮಾತ್ರವೆಲ್ಲ ಬ್ರಹ್ಮಮಯವಾದಂತಾಗಿದೆ. ಆಗಿಯೂ ಬಿಟ್ಟಿದೆ. ಅದಕ್ಕಾಗಿಯೇ ಈಗ ನಾನು ಅವನ ಧ್ಯಾನದಲ್ಲಿಯೇ ತಲ್ಲೀನನಾಗಿ ರುತ್ತೇನೆ. ಏಕೆಂದರೆ ವೈರಾಗ್ಯದ ಅಗ್ನಿಯು ಸಂಸಾರದ ಜಂಜಡಗಳಾದ ಭೋಗ-ವಿಲಾಸಾದಿಗಳನ್ನು ಬೇರು ಸಹಿತವಾಗಿ ಸುಟ್ಟು ಹಾಕುವದು.

ವೈರಾಗ್ಯೇ ಸಂಚರತ್ಯೇಕೊ ನೀತೌ ಭ್ರಮತಿ ಚಾಪರಃ |
ಶೃಂಗಾರೇ ರಮತೇ ಕಶ್ಚಿದ್ ಭುವಿ ಭೇದಃ ಪರಸ್ಪರಮ್ ||೯೯||

ಕೆಲವರು ವೈರಾಗ್ಯವನ್ನು ಮೆಚ್ಚುವರು, ಮತ್ತೆ ಕೆಲವರು ನೀತಿಯ ಲ್ಲಿಯೇ ತೃಪ್ತರಾಗಿ ಅದರೊಳಗೇ ತಲ್ಲೀನರಾಗಿರುವರು. ಇನ್ನುಳಿದವರು ಶೃಂಗಾರಗಳಲ್ಲಿ ಮಗ್ನರಾಗಿರುವರು ಈ ಜಗತ್ತಿನೊಳಗಿನ ಮಾನವರ ಬಯಕೆ ಗಳಲ್ಲಿ ಬಹಳಷ್ಟು ಭೇದಗಳಿವೆ.

ಜಗತ್ತು ಅತಿ ವಿಚಿತ್ರವಾದುದಾಗಿದೆ. ಇಲ್ಲಿ-ಜಗತ್ತಿನಲ್ಲಿ-ವಾಸವಾ ಗಿರುವಂಥ ಮಾನವರ ಅಭಿರುಚಿಯು ಒಂದೇ ಬಗೆಯಾಗಿರುವದಿಲ್ಲ. ಕೆಲವ ರಿಗೆ ಒಂದು ವಸ್ತುವು ಹಿಡಿಸಿದರೆ ಮತ್ತೊಬ್ಬರಿಗೆ ಬೇರೊಂದರ ಬಗ್ಗೆ ಅನು ರಾಗವುಂಟಾಗುವದು. ಎಲ್ಲರ ಮನಸ್ಸು ಹಾಗು ಅಭಿರುಚಿಗಳು ಒಂದೇ ಬಗೆಯ ವಾಗಿರುವದಿಲ್ಲ. ಕೆಲವರು ಈ ಸಂಸಾರವನ್ನೇ ದ್ವೇಷಿಸುವರು. ಮತ್ತೆ ಕೆಲವರು ಈ ಸಂಸಾರವು ನಿಃಸಾರವಾದುದು, ಇದರೊಳಗೆ ಏನೂ ಹುರುಳಿಲ್ಲ ವೆಂದು ಹೇಳುವರು. ಮತ್ತೆ ಕೆಲವರು ಇರುವ ವಿಷಯ ಸುಖಗಳೆಲ್ಲ ಈ ಸಂಸಾರದೊಳಗೇ ಇವೆ. ಜೀವದಿಂದಿರುವ ವರೆಗೆ ಅವುಗಳನ್ನು ಉಪಭೋಗಿಸಿ ಆನಂದ ತುಂದಿಲರಾಗಬೇಕು ಎಂದು ಹೇಳುವರು.

ಪರಮಾತ್ಮನ ಚಿಂತನೆಯಲ್ಲಿಯೇ ದಿನಗಳನ್ನು ಕಳೆಯುವವರೂ ಇಲ್ಲಿ ಸಿಕ್ಕುವರು. ಗ್ರಂಥ ವಾಚನದಲ್ಲಿ, ನೀತಿಯ ಮಾರ್ಗದಲ್ಲಿ ಮುನ್ನಡೆಯುವ

ವರಿಗೆ ಕೊರತೆಯಿಲ್ಲ. ಅಂಥವರು ಗ್ರಂಥಗಳ ವಾಚನ ಹಾಗು ನೀತಿಯ ಮಾರ್ಗವೇ ಸರ್ವಸ್ವವೆಂದು ಭಾವಿಸಿಕೊಂಡಿರುತ್ತಾರೆ. ಈ ರೀತಿಯಾಗಿ ಎಲ್ಲರೂ ತಾವು ಅನುಸರಿಸುತ್ತಿರುವ ಮಾರ್ಗವೇ ಸರಿಯಾದುದು, ಒಳ್ಳೆಯ ದಾದುದು ಎಂದು ಭಾವಿಸಿಕೊಂಡು ಅದೇ ಮಾರ್ಗದಲ್ಲಿಯೇ ಮುನ್ನಡೆಯುತ್ತ ಸಂತೋಷದಿಂದಿರುವದನ್ನು ನಾವು ಎಲ್ಲೆಡಿಗೂ ಕಾಣುತ್ತಿದ್ದೇವೆ.

ಯದ್ಯಸ್ಯ ನಾಸ್ತಿ ರುಚಿರಂ ತಸ್ಮಿಂಸ್ತಸ್ಯಾ ಸ್ಪೃಹಾ ಮನೋಜ್ಞೇऽಪಿ।
ರಮಣೀಯೇಪಿ ಸುಧಾಂಶೌ ನಮನಃ ಕಾಮಃ ಸರೋಜಿನ್ಯಾಃ॥೧೦೦॥

ಚಂದ್ರನು ಅತ್ಯಂತ ಸುಂದರನಾಗಿದ್ದರೂ ಕಮಲಿನಿಯು ಅವನನ್ನು ಪ್ರೀತಿಸುವದಿಲ್ಲ. ಏಕೆಂದರೆ, ಯಾರಿಗೆ ಯಾವ ವಸ್ತುವಿನ ಬಗೆಗೆ ಅಭಿರುಚಿ ಯಿರುವದಿಲ್ಲವೋ ಅವರು ಅದನ್ನು-ಆ ವಸ್ತುವು ಬೇಕಾದಷ್ಟು ಸುಂದರವಿರಲಿ ಚೇತೋಹಾರಿಯಿರಲಿ- ಕಣ್ಣೆತ್ತಿಯೂ ನೋಡುವದಿಲ್ಲ- ಏಕೆಂದರೆ- ಅದು ಅವರಿಗೆ, ಅವರ ಮನಕ್ಕೆ ಹಿಡಿಸುವದೇ ಇಲ್ಲ.

ಈ ಶ್ಲೋಕದಲ್ಲಿ ಮನಸ್ಸಿನ ವಿಷಯದ ಬಗ್ಗೆ ಹೇಳಲಾಗಿರುವದು. ಮನಸ್ಸು ಯಾವುದೊಂದು ವಸ್ತುವಿನ ಮೇಲೆ ಕುಳಿತಿತೆಂದರೆ ಅದು ಕೆಟ್ಟ ವಸ್ತುವೇ ಆಗಿರಲಿ ಅದನ್ನೇ ಬಯಸುತ್ತದೆ. ಅಂಥ ಸಮಯದಲ್ಲಿ ಒಳ್ಳೆಯ ವಸ್ತುಗಳು ಕೆಟ್ಟದ್ದಾಗಿ ಕಂಡು ಬರುವವು.

ಸುವಿರಕ್ತ ಪ್ರಶಂಸೆ ಮುಗಿಯಿತು.



# ಪರಿಶಿಷ್ಟ ಶ್ಲೋಕಗಳು

ಅಜಿತಾತ್ಮಸು ಸಂಬದ್ಧಃ ಸಮಾಧಿಕೃತ ಚಾಪಲಃ ।
ಭುಜಂಗ ಕುಟಿಲಃ ಸ್ತಬ್ಧೋ ಭ್ರೂವಿಕ್ಷೇಪಃ ಖಲಾಯತೇ ॥೧೦೧॥

ಜಿತೇಂದ್ರಿಯರಾದಂಥವರೊಂದಿಗೆ ಸಂಪರ್ಕವನ್ನಿರಿಸಿಕೊಂಡವನು, ಚಿತ್ತದ ಏಕಾಗ್ರತೆ ಇಲ್ಲದೆ ಸಮಾಧಿಯಲ್ಲಿರುವಾಗ ಚಂಚಲನಾಗಿರುವಂಥವನು; ವಿಷ ಸರ್ಪದಂತೆ ಕುಟಿಲ ಹಾಗು ಸ್ತಬ್ಧ ಸ್ತ್ರೀಯರ ಭ್ರೂಕ್ಷೇಪ ಇಲ್ಲವೆ ಕಟಾಕ್ಷಗಳಂತಹ ಆಚರಣೆಯುಳ್ಳವನಾಗಿರುವನು.

ಸ್ತ್ರೀಯರ ಕಟಾಕ್ಷವನ್ನು ಜಿತೇಂದ್ರಿಯರೊಂದಿಗೆ ಸಂಬಂಧವಿರಿಸುವದು ಮನಸನ್ನು ಏಕಾಗ್ರದಲ್ಲಿರಿಸಲು ತೊಂದರೆಯನ್ನೀಯುವದು. ಹಾಗು ಮೇಲಿಂದ ಮೇಲೆ ಸಮಾಧಿಯನ್ನು ಭಂಗಗೊಳಿಸುವದು. ಈ ರೀತಿಯ ಕಾರ್ಯಗಳನ್ನೆಸಗುವವರು ಕಾಳಕೂಟ ವಿಷವನ್ನು ಪಡೆದ ಘಟ ಸರ್ಪದೋಪಾದಿಯಲ್ಲಿರುವರು. ಆದರೆ ಇಲ್ಲಿ ವಿಚಾರ ಮಾಡತಕ್ಕ ಮಾತೆಂದರೆ ಕಟಾಕ್ಷವು ಜಿತೇಂದ್ರಿಯರೊಂದಿಗೆ ಸಂಬಂಧವನ್ನಿರಿಸಿಕೊಳ್ಳುವದಿಲ್ಲ; ಇಷ್ಟೇ ಅಲ್ಲ ಆ ಓರೆನೋಟವು ಅವರನ್ನು ಏನೂ ಮಾಡಲಾರದು. ಅಂದರೆ ಅವರ ಚಿತ್ತದಲ್ಲಿ ಚಂಚಲತೆಯನ್ನಾಗಲಿ, ಏಕಾಗ್ರತೆಗೆ ಭಂಗವನ್ನಾಗಲಿ ತರುವದಿಲ್ಲ. ಏಕೆಂದರೆ ಆ ಓರೆನೋಟದಲ್ಲಿ ಅಷ್ಟೊಂದು ಶಕ್ತಿಯೇ ಇರುವದಿಲ್ಲ. ಅಥವಾ ಜಿತೇಂದ್ರಿಯರ ವೃಢನಿರ್ಧಾರದೆದುರು ಈ ಓರೆನೋಟಗಳೇ ಮೊದಲಾದ ವಿಷಯದ ವಸ್ತುಗಳು ತೀರ ಸಪ್ಪೆಯಾಗಿ ಬಿಡುವವು. ಹಾಗು ತಮ್ಮಲ್ಲಿಯ ಕಾರ್ಯಪಟುತ್ವವನ್ನು ಕಳೆದುಕೊಂಡು ತೀರ ನಿರ್ಜೀವವಾಗಿ ಬಿಡುವವು. ವಿರಕ್ತರ ಮಹಿಮೆಯೇ ಅಂಥದು.

ಮತ್ತೇಭ ಕುಂಭ ಪರಿಣಾಹಿನಿ ಕುಂಕುಮಾರ್ದ್ರ—
ಕಾಂತಾಪಯೋಧರ ತಾಟೀ ರಸಖೇದ ಖಿನ್ನಃ ।
ವಕ್ಷೋನಿಧಾಯ ಭುಜಪಂಜರ ಮಧ್ಯವರ್ತಿ
ಧನ್ಯಃ ಕ್ಷಪಾಂ ಕ್ಷಪಯತಿ ಕ್ಷಣಲಬ್ಧ ನಿದ್ರಃ ॥೧೦೨॥

ಮೈಥುನ ಸಮಯದ ಶ್ರಮದಿಂದ ದಣಿದು, ಮದೋನ್ಮತ್ತ ಆನೆಯ ಗಂಡಸ್ಥಲದಂತೆ ವಿಸ್ತೀರ್ಣವಾಗಿದ್ದು ಕೇಶರದಿಂದ ತೊಯ್ದು ಬಿಟ್ಟಿರುವ ಸ್ತ್ರೀಯಸ್ತನಗಳ ಮೇಲೆ ತನ್ನ ಎದೆಯನ್ನೂರಿ–ಎದೆಯನ್ನಿರಿಸಿ–ಅವಳ ಭುಜ ಗಳೆಂಬ ಪಂಜರದ ಮಧ್ಯದಲ್ಲಿ ಒಂದು ಕ್ಷಣ ಮಲಗಿಕೊಂಡು ಯಾವನು ರಾತ್ರಿಯನ್ನು ಕಳೆಯುವನೋ ಅವನು ನಿಜಕ್ಕೂ ಧನ್ಯನು.

ಸಂಭೋಗ ಕ್ರಿಯೆಯನ್ನಾಚರಿಸಿದ ನಂತರ ಪುರುಷನು ಬಹಳದಣಿದು ಬಿಡುತ್ತಾನೆ. ಆಗಿನ ಆ ಸನ್ನಿವೇಶದಲ್ಲಿ ಅವನಿಗೆ ಒಂದೆರಡು ನಿಮಿಷಗಳ ವರೆಗೆ ಎದ್ದು ಕುಳಿತುಕೊಳ್ಳುವಷ್ಟು ಶಕ್ತಿಯೂ ಉಳಿದಿರುವದಿಲ್ಲ. ಆಗ ಅವನು ಸ್ತ್ರೀಯ ವಿಶಾಲವಾದ ವಕ್ಷಸ್ಥಲದ ಮೇಲೆ ತನ್ನ ಎದೆಯನ್ನೂರಿ, ಅವಳ ಎರಡೂ ಭುಜಗಳ ಮಧ್ಯದಲ್ಲಿ ಶಾಂತಿಯಿಂದ ಒರಗಿಕೊಳ್ಳುವನು. ಅರ್ಥಾತ್ ಅದೇ ಸ್ಥಿತಿಯಲ್ಲಿದ್ದುಕೊಂಡು ಒಂದೆರಡು ನಿಮಿಷಗಳ ವರೆಗೆ ವಿಶ್ರಾಂತಿಯನ್ನು ಪಡೆಯುವನು. ಕವಿಗಳು ಇಂಥ ಸನ್ನಿವೇಶಕ್ಕೂ ಒಂದು ನೂತನ ಮೆರುಗನ್ನು ಕೊಟ್ಟಿರುವರು. ಅಂದರೆ ಸಂಭೋಗದ ನಂತರ ಪುರು ಷನು ಮೇಲೆ ಹೇಳಿದ ರೀತಿಯಲ್ಲಿ ಸ್ತ್ರೀಯರ ಭುಜಗಳ ಮಧ್ಯದಲ್ಲಿ ಮಲಗಿ ಕೊಂಡು ಕೆಲ ನಿಮಿಷಗಳನ್ನು ಕಳೆಯುವದು ಭಾಗ್ಯವಂತರಿಗೇ ಸಾಧ್ಯ ವೆಂದೂ; ಹಾಗೆ ಮಾಡಲು ಅಂದರೆ ಆ ರೀತಿ ಆಚರಿಸಲು ಪೂರ್ವಜನ್ಮಕೃತ ಪುಣ್ಯವು ಬೇಕೆಂದೂ ಹೇಳುವರು.

ಸುಧಾಮಯೋಪಿ ಕ್ಷಯರೋಗಶಾಂತ್ಯೈ ನಾಸಾಗ್ರ ಮುಕ್ತಾಫಲ
ಕಚ್ಛಲೇನ |
ಅನಂಗ ಸಂಜೀವನ ದೃಷ್ಟಿ ಶಕ್ತಿರ್ಮುಖಾಮೃತಂ ತೇ ಪಿಬತೀವ–
ಚಂದ್ರಃ ||೧೦೪||

ಓ ಪ್ರಿಯತಮೆ! ಈ ಚಂದ್ರಬಿಂಬವು, ಅಮೃತಮಯ ಹಾಗು ಕಾಮ ಚೈತನ್ಯವನ್ನುಂಟು ಮಾಡುವಂತಹದಾಗಿದ್ದರೂ ತನ್ನ ಕ್ಷಯರೋಗದ ಶಾಂತಿ ಗಾಗಿ ತನ್ನ ಮೂಗಿನ ತುದಿಯೆದುರು ನೇತಾಡುತ್ತಿರುವ ಮುತ್ತಿನ ಸರಗಳ ಮಣಿಯಿಂದ ನಿನ್ನ ಅಧರಾಮೃತವನ್ನು ಸೇವಿಸುತ್ತಿರುವನು.

ಈ ಶ್ಲೋಕದಲ್ಲಿ ಕವಿಯು ನಾಸಿಕಾಗ್ರದ ಭಾಗದಲ್ಲಿ ನೇತಾಡುತ್ತಿರುವ ಮುತ್ತನ್ನು ಪೂರ್ಣ ಚಂದ್ರಕ್ಕೆ ಹೋಲಿಸಿಕೊಂಡು ಪ್ರಿಯತಮೆಗೆ ಹೀಗೆ

ಹೇಳಿರುವನು; ಓ ಸುಂದರಿ! ಚಂದ್ರನು ಸ್ವಯಂ ಅಮೃತಮಯನಾಗಿದ್ದರೂ ಆವನು ಪುರುಷನ ಹೃದಯದೊಳಗೆ ಕಾಮೋದ್ರೇಕವನ್ನುಂಟು ಮಾಡುವ ಸಾಮರ್ಥ್ಯವುಳ್ಳವನಾಗಿದ್ದರೂ, ಅರ್ಥಾತ್ ಸಾಕಷ್ಟು ಬಲಶಾಲಿಯಾಗಿದ್ದರೂ ತನ್ನ ರಾಜರೋಗ ಅಂದರೆ ಕ್ಷಯರೋಗವನ್ನು ಗುಣಪಡಿಸಲೋಸುಗ ಮುತ್ತಿನ ಸರದ ರೂಪವನ್ನು ಧಾರಣ ಮಾಡಿ ನಿನ್ನ ಅಧರಾಮೃತವನ್ನು ಅಂದರೆ ನತ್ತಿನ ರೂಪದಿಂದ ನಿನ್ನ ಮೂಗಿನೊಳಗೆ ಕುಳಿತು ಮೇಲಿಂದಮೇಲಿ ತುಟಿಗಳನ್ನು ಚುಂಬಿಸುತ್ತಿದ್ದಾನೆ. ಓಹ್! ನತ್ತಿನೊಳಗಿನ ಆ ಮುತ್ತು ಎಂಥ ಭಾಗ್ಯಶಾಲಿಯು! ಯಾವಾಗಲೂ ಆ ಸುಂದರಿಯ ಆಧರಗಳನ್ನು ಸ್ಪರ್ಶಿಸುವ ಭಾಗ್ಯವನ್ನು ಪಡೆದಂಥ ಆ ಮುತ್ತು ನಿಜಕ್ಕೂ ಧನ್ಯ. ಅದು ಪೂರ್ವಜನ್ಮದಲ್ಲಿ ಸಾಕಷ್ಟು ಪುಣ್ಯವನ್ನು ಗಳಿಸಿರಬೇಕು, ಅಂತೆಯೇ ಆ ಸ್ಥಾನ ದೊರದೆ.

ದಿಶವನ ಹರಿಣೀಭ್ಯೋ ವಂಶಕಾಂಡಚ್ಛವೀನಾಂ
ಕವಲ ಮುಪಲ ಕೋಟಿಚ್ಛಿನ್ನಮೂಲಂ ಕುಶಾನಾಮ್ ।
ಶುಕ-ಯುವತಿ ಕಪೋಲೋ ಪಾಂಡು ತಾಂಬೂಲವಲ್ಲೀ—
ಫಲಮರುಣಖಾಗ್ರೈಃ ಪಾಟಿತಂ ವಾವಧುಂಭ್ಯಃ ॥೧೦೪॥

ಓ ಪುರುಷರೆ! ನೀವು ಕಾನನದೊಳಗಿನ ಮೃಗಗಳಿಗೆ ಬಿದುರಿನಗಳ ದಂತೆ ನೀಳವಾದ, ಪೃಷ್ಟಭಾಗವು ಕಲ್ಲಿನ ತುದಿಯಿಂದ ಕತ್ತರಿಸಲ್ಪಟ್ಟ ಕುಶಮತಿ ಹುಲ್ಲನ್ನು ತಿನ್ನಲಿಕ್ಕೆ ಕೊಡಿರಿ. ಇಲ್ಲವೆ ಸುಂದರ ವಧುಗಳಿಗಾಗಿ ಕೆಂಪು-ಕೆಂಪಗಿನ ಉಗುರುಗಳಿಂದ ಮುರಿಯಲ್ಪಟ್ಟ, ಗಿಳಿಯ ಕಪೋಲಗಳಂತೆ ಕಾಣುತ್ತಿರುವಂಥ ಪೀಸ ವರ್ಣದ—ಹಗುರಾದ ಹಳದೀವರ್ಣದ-ತಾಂಬೂಲ ಗಳನ್ನು ಕೊಡಿರಿ. ಇವೆರಡರಲ್ಲಿ ಯಾವುದಾದರೊಂದನ್ನು ಮಾಡಿರಿ. ಅಷ್ಟು ಮಾಡಿದ್ದಾದರೆ ನಿಮ್ಮ ಜನ್ಮವು ಸಾರ್ಥಕವಾಗುವದು ಎಂದರ್ಥ.

ಶೃಂಗಾರ ಶತಕ ಮುಗಿಯಿತು.



ಭರ್ತೃಹರಿಯ———

# ನೀತಿ ಶತಕ

## ಮಂಗಲಾಚರಣ

ದಿಕ್ಕಾಲಾದ್ಯ ನವಚ್ಛಿನ್ನಾನಂತ ಚಿನ್ಮಾತ್ರ ಮೂರ್ತಯೇ।
ಸ್ವಾನು ಭೂತ್ಯೇಕ ಮಾನಾಯನಮಃ ಶಾಂತಾಯ ತೇಜಸೇ ॥೧॥

ಎಲ್ಲ ದಿಕ್ಕುಗಳಲ್ಲಿ ಮತ್ತು ಕಾಲಗಳಲ್ಲಿ ವ್ಯಾಪ್ತನಾಗಿರುವಂಥ ಹಾಗು ಕೇವಲ ಸ್ವಾನುಭವದಿಂದಲೇ ಅರಿತುಕೊಳ್ಳಲು ಸಾಧ್ಯನಾದಂಥ, ಅನಂತ ಚೈತನ್ಯ ಮೂರ್ತಿಯೂ, ಶಾಂತನೂ ಹಾಗು ತೇಜಸ್ಸ್ವರೂಪಿಯೂ ಆದ ಪರಮೇಶ್ವರನಿಗೆ ಅನಂತ ವಂದನೆಗಳು.

# ಅಜ್ಞ ನಿಂದೆ

ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ—
ಸಾಪ್ಯನ್ಯ ಮಿಚ್ಛತಿ ಜನಂ ಸ ಜನೋಽನ್ಯ ಸಕ್ತ:।
ಅಸ್ಮತ್ಕೃತೇ ಚ ಪರಿತುಷ್ಯತಿ ಕಾಚಿದನ್ಯಾ—
ಧಿಕ್ ತಾಂ ಚ ತಂ ಚ ಮದನಂ ಚ ಇಮಾಂ ಚ ಮಾಂ ಚ ॥೨॥

ನಿರಂತರವೂ ನಾನು ಯಾವ ಪ್ರಿಯತಮೆಯ ಚಿಂತನೆಯಲ್ಲಿ ಮಗ್ನನಾಗಿರುವೆನೊ, ಅವಳು ನನ್ನಿಂದ ವಿರಕ್ತಳಾಗಿದ್ದು ಬೇರೊಬ್ಬ ಪುರುಷನನ್ನು ಇಚ್ಛಿಸುತ್ತಾಳೆ. ಆ ಅನ್ಯ ಪುರುಷನು ಕೂಡ ಬೇರೊಬ್ಬ ವನಿತೆಗೆ ಆಸಕ್ತನಾಗಿದ್ದು, ಅವಳು ನನಗಾಗಿ ಪ್ರಾಣ ಕೊಡಲು ಸಿದ್ಧಳಾಗಿದ್ದಾಳೆ. ಅದಕ್ಕಾಗಿ— ನನ್ನ—ಪ್ರಿಯತಮೆಗೆ- ಅವಳು ಅನ್ಯ ಪುರುಷನನ್ನು ಪ್ರೇಮಿಸುತ್ತಿರುವದರಿಂದ— ಧಿಕ್ಕಾರವಿರಲಿ; ನನ್ನ ಪ್ರಿಯತಮೆಯು ಪ್ರೀತಿಸುತ್ತಿರುವಂಥ— ಆ ಪುರುಷನಿಗೂ ಧಿಕ್ಕಾರವಿರಲಿ;— ನನ್ನಲ್ಲಿ ಅನುರಕ್ತೆಯಾಗಿರುವ— ಮತ್ತೊಬ್ಬ ವನಿತೆಗೂ ಧಿಕ್ಕಾರವಿರಲಿ; ನನಗೂ ಧಿಕ್ಕಾರವಿರಲಿ; ಹಾಗು— ಇಷ್ಟಕ್ಕೆಲ್ಲ ಪ್ರೇರಣೆಯನ್ನಿತ್ತಿರುವ- ಆ ಕಾಮದೇವನಿಗೂ ಧಿಕ್ಕಾರವಿರಲಿ.

ಅಜ್ಞಃ ಸುಖಮಾರಾಧ್ಯಃ ಸುಖತರ ಮಾರಾಧ್ಯತೇ ವಿಶೇಷಜ್ಞಃ।
ಜ್ಞಾನ ಲವ ದುರ್ವಿದಗ್ಧಂ ಬ್ರಹ್ಮಾಪಿ ತಂ ನರಂ ನ ರಂಜಯತಿ ॥೩॥

ಮೂರ್ಖನನ್ನು—ಅಜ್ಞನನ್ನು- ಸಹಜವಾಗಿ, ಯಾವುದೇ ಬಗೆಯ ತೊಂದರೆಯಿಲ್ಲದೆ ಸಂತೋಷಪಡಿಸಬಹುದು. ಪಂಡಿತನಂತೂ ತೀರ ಸಹಜವಾಗಿ ಅಧೀನನಾಗುವನು. ಆದರೆ ಅಲ್ಪ ಬುದ್ಧಿಯವನನ್ನು ಮಾತ್ರ ಸಾಕ್ಷಾತ್ ಬ್ರಹ್ಮನೂ ಸಂತುಷ್ಟಗೊಳಿಸಲಾರನು.

ಪ್ರಸಹ್ಯ ಮಣಿ ಮುದ್ಧರೇನ್ಮಕರ ವಕ್ತ್ರದಂಷ್ಟ್ರಾಂತರಾತ್-
ಸಮುದ್ರಮಪಿ ಸಂತರೇತ್ಪ್ರಚಲ ದೂರ್ಮಿಮಾಲಾ ಕುಲಂ।

ಭುಜಂಗ ಮಪಿ ಕೋಪಿತಂ ಶಿರಸಿ ಪುಷ್ಟವದ್ ಧಾರಯೇತ್–
ನ ತು ಪ್ರತಿ ನಿವಿಷ್ಟ ಮೂರ್ಖಜನ ಚಿತ್ತ ಮಾರಾಧಯೇತ್ ॥೪॥

ಮನುಷ್ಯನು ತನ್ನ ಬಲದಿಂದ ಮೊಸಳೆಯ ದವಡೆಯೊಳಗಿನ ಮಣಿಯನ್ನು ತೆಗೆದುಕೊಳ್ಳುವದು ಸಾಧ್ಯವಿದೆ; ಸಿಟ್ಟಿನಿಂದ ಭುಸಗುಡುವ ಸರ್ಪವನ್ನು ಹೂವಿನಂತೆ ತಲೆಯ ಮೇಲೆ ಧರಿಸಿಕೊಳ್ಳುವುದೂ ಸಾಧ್ಯವಿದೆ. ಆದರೆ ಯಾವುದೊಂದು ವಸ್ತುವಿನ ಮೇಲೆ ಸ್ಥಿರವಾಗಿರುವಂಥ ಮೂರ್ಖನ ಚಿತ್ತವನ್ನು ಕದಲಿಸುವದು ಮಾತ್ರ ಯಾರಿಂದಲೂ ಸಾಧ್ಯವಿಲ್ಲ.

ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್–
ಪಿಬೇಚ್ಚ ಮೃಗ ತೃಷ್ಣಿ ಕಾಸು ಸಲಿಲಂ ಪಿಪಾಸಾರ್ದಿತಃ।
ಕದಾಚಿದಪಿ ಪರ್ಯಟಂಛ ಶಬಿಷಾಣ ಮಾಸಾದಯೇತ್–
ನ ತು ಪ್ರತಿ ನಿವಿಷ್ಟ ಮೂರ್ಖ ಜನ ಚಿತ್ತ ಮಾರಾಧಯೇತ್ ॥೫॥

ಪ್ರಯತ್ನ ಪಟ್ಟರೆ ಉಸುಕಿನಿಂದ ಎಣ್ಣೆಯನ್ನು ತೆಗೆಯಬಹುದು ಬಾಯಾರಿಕೆಯಿಂದ ಬಳಲುವಂಥವನು ಮೃಗ ಜಲದಿಂದ ತನ್ನ ತೃಷೆಯನ್ನು ಹಿಂಗಿಸಿಕೊಳ್ಳಲೂ ಬಹುದು. ಬಹಳಷ್ಟು ಪರಿಶ್ರಮ ಬಟ್ಟರೆ ಕೋಡುಗಳು ಮೂಡಿರುವ ಮೊಲಗಳನ್ನು ಕಾಣಬಹುದು. ಆದರೆ ಯಾವುದಾದರೊಂದು ವಸ್ತುವಿನ ಮೇಲೆ ಕೇಂದ್ರೀಕೃತವಾಗಿರುವಂಥ ಮೂರ್ಖನ ಮನಸ್ಸನ್ನು ಬದಲಿಸುವದು ಮಾತ್ರ ಸಾಧ್ಯವೇ ಇಲ್ಲ.

ವ್ಯಾಲಂ ಬಾಲ ಮೃಣಾಲತಂತು ಭಿರಸೌ ರೋದ್ಧುಂ ಸಮುಜ್ಜುಭತೇ
ಛೇತ್ತುಂ ವಜ್ರಮಣೀಂ ಛಿರೀಷ ಕುಸುಮ ಪ್ರಾಂತೇನ ಸನ್ನಹ್ಯತೇ।
ಮಾಧುರ್ಯಂ ಮಧು ಬಿಂದುನಾ ರಚಯಿತುಂ
ಕ್ಷಾರಾಂಬುಧೇರೀಹತೇ
ನೇತುಂ ವಾಂಛತಿ ಯಃ ಖಲಾನ್ಪಥಿ ಸತಾಂ ಸೂಕ್ತೈಃ ಸುಧಾ
—ಸ್ಯಂದಿಭಿಃ ॥೬॥

ಅತ್ಯಂತ ಕೋಮಲವಾದ ಕಮಲದ ದೇಟಿನ ಎಳೆಗಳಿಂದ ಆನೆಯನ್ನು ಕಟ್ಟಿಹಾಕಬೇಕೆಂಬ ಇಚ್ಛೆಯುಳ್ಳವನು, ವಜ್ರವನ್ನು ಸಿರಸಲ ಹೂವಿನ್ನ ಪಕಳೆಗಳಿಂದ ಬಂಧಿಸಲಿಚ್ಛಿಸುವವನು, ಒಂದು ಹನಿ ಜೇನು ತುಪ್ಪದಿಂದ ಉಪ್ಪು ನೀರಿನ ಸಮುದ್ರದಲ್ಲಿ ಮಧುರತೆಯನ್ನುಂಟು ಮಾಡಲು ಪ್ರಯತ್ನಿಸುವವನು, ತನ್ನ ಅಮೃತ ತುಲ್ಯವಾಣಿಯಿಂದ ದುಷ್ಟರನ್ನು ಸನ್ಮಾರ್ಗಕ್ಕೆ ತರುವಂಥ ಇಚ್ಛೆಯುಳ್ಳವನಾಗಿರುವನು.

ಸ್ವಾಯತ್ತ ಮೇಕಾಂತ ಗುಣಂ ವಿಧಾತ್ರಾ ವಿನಿರ್ಮಿತಂ ಛಾದನ
ಮಜ್ಞ ತಾಯಾಃ।
ವಿಶೇಷತಃ ಸರ್ವವಿದಾಂ ಸಮಾಜೇ ವಿಭೂಷಣಂ ಮೌನಮ
ಪಂಡಿತ ನಾಮ್ ॥೭॥

ಮೌನವನ್ನು ಪರಮಾತ್ಮನು ಪುರುಷರ ಸ್ವಾಧೀನಕ್ಕೊಪ್ಪಿಸಿ ಬಿಟ್ಟಿರುವನು. ಆ ಮೌನದೊಳಗೆ ಅನೇಕ ಗುಣಗಳಿರುವವು. ಅದನ್ನು ಕಾರ್ಯರೂಪದಲ್ಲಿ ತರುವದರಿಂದ ತಮ್ಮಲ್ಲಿಯ ಅಜ್ಞಾನವನ್ನು ಮುಚ್ಚುವಂಥ ಮುಚ್ಚಳಿಕೆಯಾಗಿ ಪರಿಣಮಿಸುವದು. ಅದರಲ್ಲಿಯೂ ವಿದ್ವಾಂಸರೇ ತುಂಬಿಕೊಂಡಿರುವಂಥ ಸಭೆಯೊಳಗೆ— ನಾಲಗೆಗೆ ಬೀಗ ಹಾಕಿಕೊಂಡು-ಮೌನಿಯಾಗಿರುವದು ಮೂರ್ಖನಿಗೆ ಆದರ್ಶಪ್ರಾಯವಾಗಿರುವದು.

ಯದಾ ಕಿಂಚಿದ್ ಜ್ಞೋಹಂ ದ್ವಿಪ ಇವ ಮದಾಂಧಃ ಸಮಭವಂ—
ತದಾ ಸರ್ವಜ್ಞೋಽಸ್ಮೀತ್ಯ ಭವದವಲಿಪ್ತಂ ಮಯ ಮನಃ।
ಯದಾ ಕಿಂಚಿತ್ ಕಿಂಚಿದ್ ಬುಧ ಜನ ಸಕಾಶಾದವಗತಮ್,
ತದಾ ಮೂರ್ಖೋಽಸ್ಮೀತಿ ಜ್ವರ ಇವ ಮದೋಂ ಮೆ ವ್ಯಪಗತಃ ॥೮॥

ಅಲ್ಪ ಜ್ಞಾನ ವಿದ್ದಾಗ ನಾನು; ಮದಗಜದಂತೆ ಮದಾಂಧನಾಗಿದ್ದೆನು ನನ್ನ ಚಿತ್ತ ಭಿತ್ತಿಯಲ್ಲಿ ನಾನೇ ಸರ್ವಜ್ಞನೆಂಬ ಕೊಬ್ಬಿದ್ದಿತು. ಆದರೆ ವಿದ್ವಾಂಸರ ಸಹವಾಸದೊಳಗೆ ಇರತೊಡಗಿದ ನಂತರ ನನ್ನಲ್ಲಿ ಕೊಂಚ ಕೊಂಚ ಜ್ಞಾನೋದಯವಾಗ ತೊಡಗಿ, ಮತ್ತದ-ಸೊಕ್ಕಿನ—ರೊಟ್ಟು ಜ್ವರದಂತೆ

ಇಳಿದು ಹೋಯಿತು. ಮತ್ತು ನಾನೆಷ್ಟು ಮೂರ್ಖನೆಂಬುದರ ಅರಿವು ಕೂಡ ಆಗಲೇ ಆಯಿತು.

ಕೃಮಿ ಕುಲಚಿತಂ ಲಾಲಕ್ಲಿನ್ನಂ ವಿಗಂಧಿ ಜುಗುಪ್ಸಿತಂ—
ನಿರುಪಮರಸಂ ಪ್ರೀತ್ಯಾ ಖಾದನ್ನ ರಾಸ್ಥಿ ನಿರಾಮಿಷಮ್।
ಸುರಪತಿ ಮಪಿ ಶ್ವಾ ಪಾರ್ಶ್ವಸ್ಥಂ ವಿಲೋಕ್ಯ ನ ಶಂಕತೇ,
ನ ಹಿ ಗಣಯತಿ ಕ್ಷುದ್ರೋ ಜಂತುಃ ಪರಿಗ್ರಹ ಫಲ್ಗುತಾಮ್ ॥೯॥

ಹುಳುಗಳಿಂದ ತುಂಬಿರುವಂಥ, ಕೀವದಿಂದ ತೊಯ್ದು, ದುರ್ವಾಸನೆಯುಳ್ಳ, ನಿಂದನೀಯ, ನೀರಸ–ರಸರಹಿತ– ಹಾಗೂ ಮಾಂಸ ರಹಿತನಾದ ಮಾನವನ ಮೂಳೆಯನ್ನು–ಎಲುವನ್ನು–ನಿರ್ಲಜ್ಜ ನಾಯಿಯು ಪ್ರೀತಿಯಿಂದ ಕಡಿದು ತಿನ್ನುತ್ತಿರುವಾಗ, ತನ್ನ ಬಳಿ ನಿಂತುಕೊಂಡಿರುವಂಥ ದೇವೇಂದ್ರನನ್ನು ಕೂಡ ಅದು—ಆ ನಾಯಿಯು— ಸಂಶಯ ದೃಷ್ಟಿಯಿಂದ ನೋಡುವದು—ಇದರ ತಾತ್ಪರ್ಯ ವಿಷ್ಟೆ!— ನೀಚ ಪುರುಷನು ತಾನೊಲಿದ ಪದಾರ್ಥದ ನಿಃಸಾರತೆಯ ಕಡೆಗೆ ಎಳ್ಳಷ್ಟು ಲಕ್ಷ್ಯ ಕೊಡುವದಿಲ್ಲ.

ಶಿರಃ ಶಾರ್ವಂ ಸ್ವರ್ಗಾತ್ಪಶುಪತಿ ಶಿರಸ್ತಃ ಕ್ಷಿತಿಧರಂ
ಮಹೀಧ್ರಾದುತ್ತುಂಗ ದವನಿಮ ವನೇಶ್ಚಾಪಿ ಜಲಧಿಮ್।
ಅಧೋಽಧೋ ಗಂಗೇಯಂ ಪದಮುಪಗತಾ ಸ್ತೋಕ ಮಥವಾ
ವಿವೇಕ ಭ್ರಷ್ಟಾನಾಂ ಭವತಿ ವಿನಿಪಾತಃ ಶತ ಮುಖಃ ॥೧೦॥

ಗಂಗೆಯು ಎಲ್ಲಕ್ಕೂ ಮೊದಲು ಸ್ವರ್ಗದಿಂದ ಶಿವನ ಮಸ್ತಕಕ್ಕಿಳಿದಳು. ಅನಂತರ ಅಲ್ಲಿಂದ ಹಿಮಾಲಯಕ್ಕೆ; ಹಿಮಾಲಯದ ಅಗ್ರಭಾಗದಿಂದ ಭೂಮಿಗಿಳಿದು ಅಲ್ಲಿಂದ ಸಮುದ್ರವನ್ನು ಸೇರಿದಳು. ಅಂದರೆ—ಅವಳು— ಕ್ರಮಕ್ರಮವಾಗಿ ಕೆಳಕ್ಕೆ ಇಳಿಯುತ್ತ ಬಂದಳು. ಅದೇ ರೀತಿಯಾಗಿ, ವಿವೇಕದಿಂದ ಭ್ರಷ್ಟನಾಗಿರುವಂಥ ಪುರುಷನು ದಿನ ದಿನಕ್ಕೆ ಅಧೋಗತಿಯತ್ತ ಇಳಿಯುತ್ತ ಹೋದರೆ ಅದರಲ್ಲಿ ಅಚ್ಚರಿಪಡುವಂತಹದೇನೂ ಇಲ್ಲ.

ಶಕ್ಯೋ ವಾರಯಿತುಂ ಜಲೇನ ಹುತಭುಕ್ ಛತ್ರೇಣ ಸೂರ್ಯಾತಪೋ
ನಾಗೇಂದ್ರೋ ನಿಶಿತಾಂಕುಶೇನ ಸಮದೋ ದಂಡೇನ ಗೋಗರ್ಧಭೌ।
ವ್ಯಾಧಿರ್ಭೇಷಜ ಸಂಗ್ರಹೈಶ್ಚ ವಿವಿಧೈರ್ಮಂತ್ರ ಪ್ರಯೋಗೈರ್ವಿಷಂ
ಸರ್ವಸ್ಯೌಷಧ ಮಸ್ತಿ ಶಸ್ತ್ರವಿಹಿತಂ ಮೂರ್ಖಸ್ಯ
ನಾಸ್ತ್ಯೌಷಧಂ ॥೧೧॥

ಜಲದಿಂದ ಅಗ್ನಿಯ ಬಾಧೆಯನ್ನು, ಕೊಡೆಯಿಂದ—ಛತ್ರದಿಂದ—ಸೂರ್ಯನ ತಾಪವನ್ನು, ತೀಕ್ಷ್ಣವಾದ ಅಂಕುಶದಿಂದ ಉನ್ಮತ್ತವಾದ ಆನೆಯನ್ನು; ದಂಡದಿಂದ ಕತ್ತೆಗಳೇ ಮೊದಲಾದ ಪಶುಗಳನ್ನು, ಅನೇಕ ಬಗೆಯ ಔಷಧಗಳಿಂದ ವ್ಯಾಧಿಯನ್ನು ಹಾಗು ಮಂತ್ರ ಪ್ರಯೋಗದಿಂದ ವಿಷಬಾಧೆಯನ್ನು ನಿವಾರಿಸಿಕೊಳ್ಳಬಹುದು. ಈ ರೀತಿಯಾಗಿ ಶಾಸ್ತ್ರಗಳಲ್ಲಿ ಎಲ್ಲವಕ್ಕೂ ನಿವಾರಣೋಪಾಯಗಳಿವೆ. ಆದರೆ ಮೂರ್ಖತೆಯನ್ನು ಹೋಗಲಾಡಿಸುವಂಥ ಔಷಧಿಯು ಮಾತ್ರ ಇಲ್ಲವೇ ಇಲ್ಲ.

ಸಾಹಿತ್ಯಸಂಗೀತ ಕಲಾವಿಹೀನಃ ಸಾಕ್ಷಾತ್ ಪಶುಃ ಪುಚ್ಛವಿಷಾಣ
ಹೀನಃ।
ತೃಣನ್ನ ಖಾದನ್ನಪಿ ಜೀವಮಾನಸ್ತದ್ಭಾಗಧೇಯಂ ಪರಮಂ
ಪಶೂನಾಮ್ ॥೧೨॥

ಸಾಹಿತ್ಯ; ಸಂಗೀತ ಹಾಗು ಕಲೆಗಳ ಬಗ್ಗೆ ಅಜ್ಞಾನವನ್ನು ಪ್ರಕಟಿಸುವಂಥವನು, ಕೋಡು—ಬಾಲಗಳಿಲ್ಲದಂತಹ ಪಶುವಿನ ಸಮಾನನೆಂದು ಹೇಳಬಹುದು. ಇಷ್ಟೇ ಅಲ್ಲ- ಅವನು ಹುಲ್ಲು ತಿಂದು ಜೀವಿಸದಿರುವದು ಪಶುಗಳ ಭಾಗ್ಯವಾಗಿರುವದು.

ಯೇಷಾಂ ನವಿದ್ಯಾ ನ ತಪೋ ನದಾನಂ ಜ್ಞಾನಂ ನ ಶೀಲಂ
ನ ಗುಣೋ ನ ಧರ್ಮಃ।
ತೇ ಮರ್ತ್ಯಲೋಕೇ ಭುವಿ ಭಾರಭೂತಾ ಮನುಷ್ಯ ರೂಪೇಣ ಮೃಗಾ
ಶ್ಚರಂತಿ ॥೧೩॥

ವಿದ್ಯೆ, ತಪಸಸ್ಸು, ದಾನ. ಜ್ಞಾನ, ಶೀಲ, ಗುಣ ಹಾಗು ಧರ್ಮಗಳು ಯಾವನ ಬಳಿ ಇರುವದಿಲ್ಲವೋ ಅವನು ಮೃತ್ಯು ಲೋಕದಲ್ಲಿ ಭೂಮಿಗೆ ಭಾರವಾದವನೆಂದು ತಿಳಿದಿರಬೇಕು. ಅಂಥವನು ಮಾನವ ರೂಪಧರಿಸಿದ ಪಶುವು.

ವರಂ ಪರ್ವತರ್ಗೇಷು ಭ್ರಾಂತಂ ವನಚರೈಃ ಸಹ।
ನ ಮೂರ್ಖಜಗ ಸಂಪರ್ಕ: ಸುರೇಂದ್ರ ಭವನೇಷ್ವಪಿ ॥೧೪॥

ದೇವೇಂದ್ರನ ಭವನದಲ್ಲಿ ಮೂರ್ಖರ ಸಹವಾಸದಲ್ಲಿರುವದಕ್ಕಿಂತ ದುರ್ಗಮವಾದ ಪರ್ವತ ಪ್ರದೇಶದೊಳಗೆ ವಾಸಿಸುತ್ತಿರುವಂಥ ವನಚರ ರೊಂದಿಗಿರುವದು ಬಹಳ ಒಳ್ಳೆಯದು.

ಅಜ್ಞಾನಿಂದೆ ಮುಗಿಯಿತು



# ವಿದ್ವತ್ ಪ್ರಶಂಸೆ

ಶಾಸ್ತ್ರೋಪಸ್ಕೃತ ಶಬ್ದ ಸುಂದರಗಿರ: ಶಿಷ್ಯಪ್ರದೇಯಾಗಮಾ
ವಿಖ್ಯಾತಾಃ ಕವಯೋ ವಸಂತಿ ವಿಷಯೇ ಯಸ್ಯ
ಪ್ರಭೋರ್ನಿರ್ಧನಾ:।
ತಂಜಾಡ್ಯಂ ವಸುಧಾಧಿಪಸ್ಯ ಸುಧಿಯಸ್ತ್ವರ್ಥಂ ವಿನಾಪೀಶ್ವರಾ:
ಕುತ್ಸ್ಯಾಃ ಸ್ಯುಃ ಕುಪರೀಕ್ಷಕಾ ಹಿ ಮಣಯೋ ಯೈರರ್ಘತ:
ಪಾತಿತಾ: ।।೧೫।।

ಶಾಸ್ತ್ರೋಕ್ತ ಶಬ್ದಗಳ ಸುಂದರ ವಾಣಿಯುಳ್ಳ, ಶಿಷ್ಯನಿಗೆ ಯೋಗ್ಯ ಶಿಕ್ಷಣವನ್ನೀಯುವ ವಿದ್ಯೆಯುಳ್ಳ ಓರ್ವ ಸುಪ್ರಸಿದ್ಧ ಪಂಡಿತನು ಯಾವುದೊಂದು ರಾಜ್ಯದಲ್ಲಿ ನಿರ್ಧನನಾಗಿ ವಾಸಿಸುತ್ತಿದ್ದರೆ ಅದು ಅಲ್ಲಿಯ ಅರಸನ ತಪ್ಪು. ವಿದ್ಯಾವಂತರು ಧನವಿಲ್ಲದಿದ್ದರೂ ಐಶ್ವರ್ಯಶಾಲಿಗಳೇ ಆಗಿರುವರು. ಯಾವುನೊಬ್ಬ ರತ್ನಪಡಿಯ ವ್ಯಾಪಾರಿಯು ತನ್ನಲ್ಲಿಯ ಕುತ್ಸಿತ ಮನೋಭಾವನೆಯಿಂದ ರತ್ನದ ಮೌಲ್ಯವನ್ನು–ಅದನ್ನು ಸರಿಯಾಗಿ ಪರೀಕ್ಷಿಸದೆಯೇ ಕಡಿಮೆ ಮಾಡಿದರೆ ಅದರ— ಆ ರತ್ನದ—ಬೆಲೆಯು ಕಡಿಮೆಯಾಗಲಾರದು.

ಹರ್ತುರ್ಯಾತಿ ನಗೋಚರಂ ಕಿಮಪಿ ಶಂ ಪುಷ್ಣಾತಿ ಯತ್ಸರ್ವದಾ
ಹ್ಯರ್ಥಿಭ್ಯ: ಪ್ರತಿ—ಪಾದ್ಯ ಮಾನಮನಿಶಂ ಪ್ರಾಪ್ನೋತಿ ವೃದ್ಧಿಂ
ಪರಾಂ।
ಕಲ್ಪಾಂತೇಷ್ವಪಿ ನ ಪ್ರಯಾತಿ ನಿಧನಂ ವಿಧ್ಯಾಖ್ಯ ಮಂತರ್ಧನಂ
ಯೇಷಾಂ ತಾಂಪ್ರತಿ ಮಾನಮುಜ್ಝುತ ನೃಪಾ: ಕಸ್ತೈ:
ಸಹಸ್ಪರ್ಧತೇ ।।೧೬।।

ಓ ಅರಸರೇ! ಕಳ್ಳರ ಕಣ್ಣಿಗೆ ಗೋಚರವಾಗದಂತಹ ವಿದ್ಯಾರೂಪೀ ಧನವುಳ್ಳವನನ್ನು, ಯಾವಾಗಲೂ ಸುಖವನ್ನು ವೃದ್ಧಿಗೊಳಿಸುತ್ತಿರುವವನ್ನು

ಹಾಗು ಕಲ್ಪಾಂತರದಲ್ಲಿಯೂ ನಾಶವಾಗದಂಥವನೊಂದಿಗೆ ಇಲ್ಲದ ದುರಭಿ ಮಾನವನ್ನು ಪ್ರದರ್ಶಿಸಬೇಡಿರಿ. ಏಕೆಂದರೆ ಅವರಿಗೆ ಸಮಾನವಾದುದು ಈ ಜಗತ್ತಿನೊಳಗೆ ಯಾವುದೂ ಇಲ್ಲ ಅಂದರೆ ಅವರನ್ನು ಸ್ಪರ್ಧಿಸುವವರು ಯಾರೂ ಇಲ್ಲ.

ಅಧಿಗತ ಪರಮಾರ್ಥಾನ್ ಪಂಡಿತಾನ್ಮಾವಮಂಸ್ಥಾ
ಸ್ತೃಣಮಿವ ಲಘುಲಕ್ಷ್ಮೀರ್ನೈವ ತಾನ್ಸಂರುಣಾದ್ಧಿ।
ಅಭಿನವ ಮದಲೇಖಾ ಶಾಮ ಗಂಡಸ್ಥಲಾನಾಂ
ನ ಭವತಿ ವಿಸತಂತುರ್ವಾರಣಂ ವಾರಣಾನಾಮ್ ।೧೭।

ಮೋಕ್ಷ ಮಾರ್ಗದ ಜ್ಞಾನವನ್ನು ಸಂಪಾದಿಸಿರುವಂಥ ಆ ಪಂಡಿತರನ್ನು ಅವಮಾನಗೊಳಿಸಬೇಡಿರಿ. ಏಕೆಂದರೆ ನವೀನ ಮದಧಾರೆಯಿಂದ ಶೋಭಾ ಯಮಾನವಾದ ಶಾಮ ವರ್ಣದ ಮಸ್ತಕವುಳ್ಳ ಆನೆಯನ್ನು, ಕಮಲದ ದೇಟಿನ ಸೂಕ್ಷ್ಮ ಎಳೆಗಳು ಯಾವ ರೀತಿಯಾಗಿ ತಡೆಗಟ್ಟಲಾರವೋ ಹಾಗೆ. ನಿಮ್ಮಲ್ಲಿಯ ಹುಲ್ಲುಕಡ್ಡಿಗೆ ಸಮಾನವಾದ ತುಚ್ಛ ಸಂಪತ್ತು ಅವರನ್ನು— ಆ ಪಂಡಿತರನ್ನು— ಎಂದೆಂದಿಗೂ ತಡೆಗಟ್ಟಲಾರದು.

ಅಂಭೋಜಿ ನೀವನ ವಿಹಾರ ವಿಲಾಸ ಮೇವ,
ಹಂಸಸ್ಯ ಹಂತಿ ನಿತರಾಂ ಕುಪಿತೋ ವಿಧಾತಾ।
ನತ್ವಸ್ಯ ದುಗ್ಧ-ಜಲಭೇದ ವಿಧೌ ಪ್ರಸಿದ್ಧಾಂ,
ವೈದಗ್ಧ್ಯ ಕೀರ್ತಿಮಪಹರ್ತುಮಸೌ ಸಮರ್ಥ ॥೧೮॥

ಪರಮಾತ್ಮನು ಒಂದು ವೇಳೆ ಹಂಸಗಳ ಮೇಲೆ ಕುಪಿತನಾದರೆ, ಅವು ಗಳ—ಹಂಸಗಳ—ವಿಹಾರ ಸ್ಥಾನವಾದ ಕಮಲಗಳು ತುಂಬಿದಂತಹ ಸರೋವರವನ್ನು ನಾಶಮಾಡಬಹುದು. ಆದರೆ ಹಂಸದ ಹೃದಯದೊಳಗೆ ಮನೆಮಾಡಿ ಕೊಂಡಿರುವಂಥ ಹಾಲು—ನೀರುಗಳನ್ನು ಬೇರೆ ಬೇರೆ ಮಾಡುವ ಬುದ್ಧಿಯನ್ನು, ಪ್ರಸಿದ್ಧ ಕೀರ್ತಿಯನ್ನು ಕಸಿದುಕೊಳ್ಳುವದು

ವಿಘಾತನಿಂದಲೂ ಸಾಧ್ಯವಿಲ್ಲ. ಇವರ ತಾತ್ಪರ್ಯವಿಷ್ಟೆ! ಯಾವುನಾದ ರೊಬ್ಬರಿಗೆ ಯಾವುದೇ ರೀತಿಯಿಂದ ಹಾನಿಯನ್ನುಂಟು ಮಾಡುವದು ಸಾಧ್ಯವಿದೆಯೇ ವಿನಾ ಅವನಲ್ಲಿಯ ಗುಣವನ್ನು ಮಾತ್ರ ಕಸಿದು ಕೊಳ್ಳುವದು ಸಾಧ್ಯವಿಲ್ಲ.

> ಕೇಯೂರಾಣಿ ನ ಭೂಷಯಂತಿ ಪುರುಷಂ ಹಾರಾ ನ
> ಚಂದ್ರೋಜ್ವಲಾ,
> ನ ಸ್ನಾನಂ ನ ವಿಲೇಪನಿ ನ ಕುಸುಮಂ ನಾಲಂಕೃತಾ ಮೂರ್ಧಜಾಃ।
> ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾ ಧಾರ್ಯತೇ,
> ಕ್ಷೀಯಂತೇ ಖಲು ಭೂಷಣಾನಿ ಸತತಂ ವಾಗ್ಭೂಷಣಂ ಭೂಷಣಂ
> ॥೧೯॥

ಪುರುಷನಿಗೆ, ಅವನ ಬಲವಾದ ಬಾಹುಗಳಿಂದಾಗಲಿ, ಕಂಠದೊಳಗೆ ಧರಿಸಿದ ಉಜ್ವಲ ಚಂದ್ರಹಾರದಿಂದಾಗಲಿ, ಮೇಲಿಂದ ಮೇಲೆ ಸ್ನಾನ ಮಾಡುವದು, ಪುಷ್ಪಗಳಿಂದ ಸಿಂಗರಿಸಿಕೊಳ್ಳುವದು ಹಾಗು ಕೂದಲುಗಳನ್ನು ಅಂದವಾಗಿ ಸಿಂಗರಿಸಿ ಕೊಳ್ಳುವದರಿಂದಾಗಲಿ ಶೋಭೆಯು ಬರುವದಿಲ್ಲ.— ಆದರೆ ಆ ಶೋಭೆಯು—ಸಂಸ್ಕಾರ ಹೊಂದಿದಂಥ ವಾಣಿಯಿಂದ ಮಾತ್ರ ಕಂಡುಬರುವದು. ಏಕೆಂದರೆ—ಮೇಲೆ ಕಾಣಿಸಿದಂಥ—ಭೂಷಣಗಳು ಮುಂದೊಂದು ದಿನ—ಅವಶ್ಯವಾಗಿ ನಾಶವಾಗುವವು. ಆದರೆ ವಾಗ್ಭೂಷಣವು ಮಾತ್ರ ಪುರುಷನಿಗೆ ನಿಜವಾದ ಭೂಷಣವಾಗಿರುವದು.

> ವಿದ್ಯಾನಾಮ ನರಸ್ಯ ರೂಪಮಧಿಕಂ ಪ್ರಚ್ಛನ್ನ ಗುಪ್ತಂ ಧನಂ
> ವಿದ್ಯಾ ಭೋಗಕರಿ ಯಶಃ ಸುಖಕರಿ ವಿದ್ಯಾಗರೂಣಾಂ ಗುರುಃ।
> ವಿದ್ಯಾ ಬಂಧು ಜನೋ ವಿದೇಶ ಗಮನೇ ವಿದ್ಯಾಪರಾ ದೇವತಾ,
> ವಿದ್ಯಾರಾಜಸು ಪೂಜ್ಯತೇ ನಹಿ ಧನಂ ವಿದ್ಯಾವಿಹೀನಃ ಪಶುಃ ॥೨೦॥

ವಿದ್ಯೆಯು ಮಾನವನ ಶ್ರೇಷ್ಠ ಸ್ವರೂಪವೂ, ಒಳ್ಳೇ ರೀತಿಯಿಂದ ಬಚ್ಚಿಟ್ಟಂಥ ಐಶ್ವರ್ಯವೂ ಆಗಿರುವದು. ಇಷ್ಟೇ ಅಲ್ಲ, ವಿದೆ ಭೋಗ್ಯಯು

ಯಶಸ್ಸು ಹಾಗು ಸುಖ—ಸಮೃದ್ಧಿಗಳನ್ನೀಯುವಂಥದಾಗಿದೆ. ಅದು ಗುರುವಿನ ಗುರುವೂ, ವಿದೇಶದಲ್ಲಿರುವಾಗ ಬಂಧು ವರ್ಗವೂ ಆಗಿರುವದು. ವಿದ್ಯೆಯು ಶ್ರೇಷ್ಟ ದೇವತೆಯಾಗಿದೆ. ಅರಸರಲ್ಲಿಯೂ ಕೂಡ ಪೂಜ್ಯತೆಯು ವಿದ್ಯೆಗಿದೆಯೆ ವಿನಾ ಹಣಕ್ಕಲ್ಲ. ಯಾವನಲ್ಲಿ ವಿದ್ಯೆಯಿಲ್ಲವೋ ಅವನು ಪಶು ಸಮಾನ.

ಕ್ಷಾಂತಿ ಶ್ಚೇದನ ಲೇನ ಕಿಂ ಕಿಮರಿಭಿಃ ಕ್ರೋಧೋಽಸ್ತಿ ಚೆದ್ದೇಹಿತಾಂ,
ಜ್ಞಾತಿಶ್ಚೇದನ ಲೇನ ಕಿಂ ಯದಿ ಸುಹೃದ್ದಿ ವ್ಯೌಷಧೈಃ ಕಿಂ ಫಲಂ ।
ಕಿಂ ಸರ್ಪೈರ್ಯದಿ ದುರ್ಜನಾ: ಕಿಮು ಧನೈರ್ವಿದ್ಯಾಽ ನವಿದ್ಯಾಯದಿ
ಪ್ರೀಡಾ ಚೇತ್ಕಿಮು ಭೂಷಣೈ: ಸುಕವಿತಾ ಯದ್ಯಸ್ತಿ ರಾಜ್ಯೇನ ಕಿಂ ॥ ೨೧ ॥

ಕ್ಷಮೆಯು ಯಾವ ಪುರುಷನ ಬಳಿಯಿರುವದೋ ಅವನಿಗೆ ಕವಚದ— ದುಷ್ಟರಿಂದ ಕಾಪಾಡಲು-ಆವಶ್ಯಕತೆ ಏನಿದೆ ? ಕ್ರೋಧವು ಯಾವನ ಬಳಿ ಇರುವದೋ ಅವನಿಗ ಶತ್ರುವಿನ ಅವಶ್ಯಕತೆಯೇ ಇಲ್ಲ. ಏಕೆಂದರೆ ಕ್ರೋಧವು ಅವನನ್ನು ವೈರಿಯಂತೆ ನಾಶಮಾಡಿ ಬಿಡುವದು. ಜ್ಞಾತಿಯಾಗಿದ್ದರೆ ಅಗ್ನಿಯ ಅವಶ್ಯಕತೆಯಿಲ್ಲ. ಅಂದರೆ ಅವನಲ್ಲಿ ಅಗ್ನಿಯಂತೆ ಭಸ್ಮ ಮಾಡುವ ಯೋಗ್ಯತೆ ಇರುವದು. ಮಿತ್ರನು ಸಮೀಪದಲ್ಲಿದ್ದರೆ ಔಷಧಿಗಳ ಅವಶ್ಯಕತೆಯಿಲ್ಲ. ದುರ್ಜನರ ಸಹವಾದಲ್ಲಿದ್ದರೆ ಹಾವಿನ ಅವಶ್ಯಕತೆಯು ಇಲ್ಲ. ದೋಷ ರಹಿತವಾದ ವಿದ್ಯೆಯುಳ್ಳವನಿಗೆ ಐಶ್ವರ್ಯದ—ಧನದ ಅವಶ್ಯಕತೆಯೇ ಇಲ್ಲ. ಲಜ್ಜೆಯು ಇದ್ದರೆ ಉಳಿದ ಆಭರಣಗಳ-ಭೂಷಣಗಳ ಆವಶ್ಯಕತೆಯೆ ಇಲ್ಲ. ಹಾಗು ಸುಂದರ ಕವಿತೆಯ ಎದುರು ಒಂದು ರಾಜ್ಯ ವೇನು ಮಾಡೀತು?

ದಾಕ್ಷಿಣ್ಯಂ ಸ್ವಜನೇ ದಯಂ ಪರಿಜನೇ ಶಾಠ್ಯಂ ಸದಾ ದುರ್ಜನೇ,
ಪ್ರೀತಿ: ಸಾಧುಜನೇ ನಯೋ ನೃಪಜನೇ ವಿದ್ವಜ್ಜನೇ ಚಾರ್ಜವಂ।
ಶೌರ್ಯ ಶತ್ರು ಜನೇ ಕ್ಷಮಾ ಗುರುಜನೇ ನಾರಿಜನೇ ಧೃಷ್ಟತಾ
ಏ ತ್ಯೆವಂ ಪುರುಷಾ: ಕಲಾಸು ಕುಶಲಾಸ್ತೆಷ್ವೇವ ಲೋಕಸ್ಥಿತಿಃ ॥೨೨॥

ತನ್ನ ಕುಟುಂಬದವರೊಂದಿಗೆ ಉದಾರತೆಯಿಂದಿರುವ, ಸೇವಕರನ್ನು ದಯೆಯಿಂದ ಕಾಣುವ, ದುರ್ಜನರನ್ನು ಶಿಕ್ಷಿಸುವ, ಸಜ್ಜನರನ್ನು ಪ್ರೀತಿಸುವ ರಾಜಸಭೆಯಲ್ಲಿ ನೀತಿಯಿಂದಿರುವ, ವಿದ್ವಾಂಸರೊಂದಿಗೆ ನಮ್ರತೆಯಿಂದಿರುವ, ಶತೃಗಳಿದುರು ಶೌರ್ಯವನ್ನು ಪ್ರದರ್ಶಿಸುವ, ಹಿರಿಯರಲ್ಲಿ ಕ್ಷಮೆಯನ್ನು ಯಾಚಿಸುವ ಹಾಗೂ ಸ್ತ್ರೀಯರೊಂದಿಗೆ ದೃಷ್ಟತೆಯಿಂದಿರುವಂಥ ಜನರ ಮೇಲೆಯೇ ಈ ಜಗತ್ತಿನ ಆಗು ಹೋಗುಗಳು ನಿರ್ಧರವಾಗಿರುವವು.

ಜಾಡ್ಯಂ ಧಿಯೋ ಹರತಿ ಸಿಂಚತಿ ವಾಚಿ ಸತ್ಯಂ,
ಮನೋನ್ನತಿಂ ದಿಶತಿ ಪಾಪಮು ಪಾಕರೋತಿ ।
ಚೇತ: ಪ್ರಸಾದಯತಿ ದಿಕ್ಷು ತನೋತಿ ಕೀರ್ತಿ
ಸತ್ ಸಂಗತಿ: ಕಥಯ ಕಿನ್ನ ಕರೋತಿ ಪುಂಸಾಮ್ ॥೨೩॥

ಸಜ್ಜನರ ಸಹವಾಸವು, ಬುದ್ಧಿಯ ಜಡತ್ವವನ್ನು-ಅಜ್ಞಾನವನ್ನು-ನಾಶ ಮಾಡುವದು, ವಾಣಿಯನ್ನು-ಮಾತುಗಳನ್ನು-ಸತ್ಯದತ್ತ ತಿರುಗಿಸುವದು, ಮರ್ಯಾದೆ ಮತ್ತು ಉನ್ನತಿಯನ್ನು—ಮಟ್ಟವನ್ನು-ಹೆಚ್ಚಿಸುವದು ಪಾಪವನ್ನು ದೂರ ಓಡಿಸುವದು ಅರ್ಥಾತ್ ಹೋಗಲಾಡಿಸುವದು, ಮನವನ್ನು ಯಾವಾಗಲೂ ಪ್ರಸನ್ನವಾಗಿರಿಸುವದು, ಹಾಗು ದಶದಿಶೆಗೂ ಕೀರ್ತಿಯು ಹಬ್ಬುವಂತೆ ಮಾಡುವದು. ಅಂದಾಗ ಸಜ್ಜನರ ಸಹವಾಸವು ಏನನ್ನು ಮಾಡಲಾರದು ? ಅಂದರೆ ಅದು ಎಲ್ಲವನ್ನೂ ಮಾಡಬಲ್ಲದು ಎಂದರ್ಥ.

ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ ।
ನಾಸ್ತಿ ತೇಷಾಂ ಯಶಃ ಕಾಯೇ ಜರಾ ಮರಣಜಂ ಭಯಮ್ ॥೨೪॥

ರಸಗಳನ್ನು ಸಿದ್ಧಿಗೊಳಿಸಿದ ಅರ್ಥಾತ್ ಸರ್ವ ರಸಗಳಲ್ಲಿ ಪ್ರವೀಣರಾಗಿರುವಂಥ ಪುಣ್ಯಾತ್ಮನಾದ ಕವೀಶ್ವರನು ಧನ್ಯನು. ಯಶಸ್ವರೂಪದ ಕಾರ್ಯವನ್ನು-ದೇಹವನ್ನು-ಹೆಚ್ಚಿಸಿದಂಥ, ಬೆಳೆಯಿಸಿದಂಥ ಅವರಿಗೆ ಜರಾ ಮರಣಗಳ ಭಯವು ಎಳ್ಳಷ್ಟೂ ಇರುವದಿಲ್ಲ.

ಸೂನುಃ ಸಚ್ಚರಿತಃ ಸತೀ ಪ್ರಿಯತಮಾ ಸ್ವಾಮೀ
ಪ್ರಸಾದೋನ್ಮುಖಃ
ಸ್ನಿಗ್ಧಂ ಮಿತ್ರಮವಂಚಕ: ಪರಿಜನೋ ನಿಃಕ್ಲೇಶಲೇಶಂ ಮನ:|
ಆಕಾರೋ ರುಚಿರ: ಸ್ಥಿರಶ್ಚ ವಿಭವೋ ವಿದ್ಯಾವದಾತಂ ಮುಖಂ
ತುಷ್ಟೇ ವಿಷ್ಟಪಹಾರಿಣೀಷ್ಟದ ಹರೌ ಸಂಪ್ರಾಪ್ಯತೇ
ದೇಹಿನಾಮ್ ||೨೫||

ಸರ್ವ ಪ್ರಾಣಿಗಳಿಗೆ ಮನೋರಥವನ್ನೀಯುವಂಥ ಸ್ವರ್ಗದ ನಿವಾಸಿ ಯಾದ ನಾರಾಯಣನು ಯಾರಿಗೆ ಪ್ರಸನ್ನನಾಗುವನೋ ಅವರಿಗೆ—ಸುಂದರ ಪುತ್ರರು, (ಪತಿಗೆ) ಪತಿವ್ರತೆಯುರಾದ ಪತ್ನಿಯರು. ಕರುಣಾ ದೃಷ್ಟಿಯಿಂದ ನೋಡುವಂಥ ಸ್ವಾಮಿ, ಪ್ರೇಮದಿಂದ ಕಾಣುವಂಥವರು, ಒಳ್ಳೆಯ ಗೆಳೆಯರು, ವಂಚಿಸದಂತಹ ಪರಿವಾರದವರು, ಕ್ಲೇಶ ರಹಿತ ಮನಸ್ಸು, ಸುಂದರ ಸ್ವರೂಪ, ಸ್ಥಿರವಾದ—ಎಂದೆಂದಿಗೂ ನಾಶವಾಗದಂತಹ ಮುಖಚರ್ಯೆ ಇವುಗಳೆಲ್ಲ ಲಭಿಸುವವು.

ಪ್ರಾಣಾಘಾತಾನ್ನಿವೃತ್ತಿ: ಪರಧನ ಹರಣೇ ಸಂಯಮ: ಸತ್ಯವಾಕ್ಯಂ
ಕಾಲೇ ಶಕ್ತ್ಯಾ ಪ್ರದಾನಂ ಯುವತಿ ಜನ ಕಥಾಮೂಕಭಾವ:
ಪರೇಷಾಂ|
ತೃಷ್ಣಾ ಸ್ರೋತೋ ವಿಭಂಗೋ ಗುರುಷು ಚವಿನಯಃ
ಸರ್ವಭೂತಾನುಕಂಪಾ
ಸಾಮಾನ್ಯಂ ಸರ್ವ ಶಾಸ್ತ್ರೇಷ್ವನುಪಹತ ವಿಧಿ: ಶ್ರೇಯ ಸಾಮೇಷ
ಪಂಥಾ: ||೨೬||

ಪ್ರಾಣ ಹತ್ಯೆಯಿಂದ ನಿರ್ಲಿಪ್ತನಾಗಿರುವುದು ಅರ್ಥಾತ್ ಪ್ರಾಣ ಹತ್ಯೆ ಮಾಡದಿರುವುದು, ಎರಡನೆಯರ ಹಣವನ್ನು ಎತ್ತಿಹಾಕುವ ವಿಚಾರವನ್ನು ಮನದೊಳಗೆ ತಾರದಿರುವುದು, ಯಾವಾಗಲೂ ನಿಜವನ್ನೇ ಹೇಳುವುದು, ಪ್ರಸಂಗ ಬಂದಾಗ ಯೋಗ್ಯತೆಗಳನುಸಾರವಾಗಿ ದಾನ ಮಾಡುವುದು. ಬಯಕೆಗಳಿಗೆ ಬಲಿಯಾಗದಿರುವುದು. ಹಿರಿಯರೊಂದಿಗೆ ನಮ್ರತೆಯಿಂದಿರು

ವ್ರದೇ ಮೊದಲಾದ ಕಲ್ಯಾಣಕಾರಕ ಮಾರ್ಗಗಳನ್ನು ಸಾಮಾನ್ಯವಾಗಿ ಸರ್ವ ಶಾಸ್ತ್ರಗಳಲ್ಲಿ ಹೇಳಲಾಗಿದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ

ಪ್ರಾರಭ್ಯತೇ ನ ಖಲು ವಿಘ್ನಭಯೇನ ನೀಚೈ:
ಪ್ರಾರಭ್ಯ ವಿಘ್ನ ವಿಹಿತಾ ವಿರಮಂತಿ ಮಧ್ಯಾ: |
ವಿಘ್ನೈ: ಪುನ: ಪುನರಪಿ ಪ್ರಿತಿ ಹನ್ಯಮಾನು:
ಪ್ರಾರಭ್ಯ ಚೋತ್ತಮ ಜನಂ ನ ಪರಿತ್ಯಜಂತಿ ||೨೭||

ನೀಚರಾದ ಪುರುಷರು ವಿಘ್ನವು ಬರುವದೆಂಬ ಹೆದರಿಕೆಯಿಂದ ಕಾರ್ಯವನ್ನು ಪ್ರಾರಂಭಿಸುವದಿಲ್ಲ; ಮಧ್ಯಮ ತರಗತಿಯ ಜನರು ಕಾರ್ಯವನ್ನು ಪ್ರಾರಂಭಿಸುತ್ತಾರೆ. ಆದರೆ ಅದರಲ್ಲಿ ಯಾವುದಾದರೂ ವಿಘ್ನವು ತಲೆದೋರಿತೆಂದರೆ ಅದನ್ನು ಅಷ್ಟಕ್ಕೇ ಬಿಟ್ಟು ಬಿಡುತ್ತಾರೆ. ಆದರೆ ಉತ್ತಮರು ಮೇಲಿಂದ ಮೇಲೆ ವಿಘ್ನಗಳ ಪರಂಪರೆಯೇ ಎದುರಾದರೂ ಅವರು ಕಾರ್ಯವನ್ನು ಪೂರ್ಣಗೊಳಿಸದೆ ಎಂದಿಗೂ ಬಿಡಲಾರರು. ಅರ್ಥಾತ್ ಅವರು ಕಾರ್ಯವನ್ನು ಪೂರ್ಣ ಮಾಡುತ್ತಾರೆಂದರ್ಥ.

ಪ್ರಿಯಾ ನ್ಯಾಯ್ಯಾ ವೃತ್ತಿರ್ಮಲಿನಮಸುಭಂಗೇಽಪ್ಯಸುಕರಂ
ತ್ವಸಂತೋ ನಾಭ್ಯರ್ಥ್ಯಾ: ಸುಹೃದಪಿ ನಯಾಚ್ಯ: ಕೃಶಧನಂ:|
ವಿಪದುಚ್ಚೈ: ಸ್ಥೇಯಂ ಪದಮನು ವಿಧೇಯಂ ಚಮಹತಾಂ
ಸತಾಂ ಕೇನೋದ್ದಿಷ್ಟಂ ವಿಷಮ ಮಸಿಧಾರಾವ್ರತಮಿದಂ ||೨೮||

ನ್ಯಾಯಃ ಯುಕ್ತವಾದ ಮಾರ್ಗವನ್ನು ಅನುಸರಿಸುವದು ಅರ್ಥಾತ್ ಎಲ್ಲರಿಗೂ ಪ್ರಿಯವಾದ ನಡವಳಿಕೆಯಿಂದಿರುವುದು, ಪ್ರಾಣ ಹೋಗುವಂಥ ಪ್ರಸಂಗದಲ್ಲಿಯೂ ಪಾಪ ಕರ್ಮಗಳನ್ನು ಮಾಡದಿರುವುದು, ದುಷ್ಟರಲ್ಲಿ ಅಥವಾ ಅಲ್ಪ ಧನವಿದ್ದವರಲ್ಲಿ ಏನನ್ನಾದರೂ ಬೇಡದಿರುವುದು, ಎಂತಹ ಕಷ್ಟದ ಪ್ರಸಂಗ ಬಂದರೂ ತನ್ನ ಸ್ಥಾನದಿಂದ ಅಲುಗಾಡದಿರುವದು

ದಿಲ್ಲ. ಹಾಗು ಸಿಂಹವು ತನ್ನ ಪಕ್ಕದಲ್ಲಿಯೇ ಮಲಗಿಕೊಂಡಿರುವಂಥ ನರಿಯನ್ನು ಸುಮ್ಮನೇ ಬಿಟ್ಟು ಆನೆ ಇದ್ದಲ್ಲಿಗೆ ಹೋಗಿ ಅದನ್ನು ಕೊಲ್ಲುವದು. ಅಂದರೆ, ತಿಳುವಳಿಕೆ ಇದ್ದಂಥವರೆಲ್ಲರೂ, ಎಷ್ಟೇ ಕಷ್ಟಗಳು ಬಂದರೂ ತಮ್ಮ ಪುರುಷಾರ್ಥಕ್ಕೆಸರಿಯಾದ ಫಲವನ್ನೇ ಅಪೇಕ್ಷಿಸುತ್ತಾರೆ; ಎಂಬುದು ಈ ಮಾತಿನಿಂದ ವ್ಯಕ್ತವಾಗುವದು.

ಲಾಂಗೂಲ ಚಾಲನ ಮಧಶ್ಚರಣಾವ ಪಾತಂ,
ಭೂಮೌ ನಿಪತ್ಯ ವದನೋದರ ದರ್ಶನಂಚ ।
ಶ್ವಾ ಪಿಂಡದಸ್ಯ ಕುರುತೇ ಗಜ ಪುಂಗವಸ್ತು
ಧೀರಂ ವಿಲೋಕಯತಿ ಚಾಟು ಶತೈಶ್ಚ ಭುಂಕ್ತೇ ॥೨೩॥

ತುತ್ತು ರೊಟ್ಟಿಯನ್ನು ನೀಡುವವನೆದುರು ನಾಯಿಯು ತನ್ನ ಬಾಲವನ್ನು ಅಲ್ಲಾಡಿಸುತ್ತ, ಹಿಂಗಾಲುಗಳನ್ನು ಮಡಿಚಿ, ಭೂಮಿಗೊರಗಿಕೊಂಡು ಹೊಟ್ಟೆ ಹಾಗು ಬಾಯಿಗಳನ್ನು ತೋರಿಸುವದು. ಅರ್ಥಾತ್ ತನ್ನ ದೀನತೆಯನ್ನು ಪ್ರದರ್ಶಿಸುವದು. ಆದರೆ ಆನೆಯು ತನಗೆ ಆಹಾರವನ್ನೀಯುವವನನ್ನು ಕೂಡ ಒಂದು ಸಲ ಗಾಂಭೀರ್ಯದಿಂದ ನೋಡುತ್ತದೆ. ಹಾಗೂ ನೂರಾರು ಸಲ ಅವನು— ಆಹಾರವನ್ನೀಯುವವನು—ಮಧುರ ಮಾತುಗಳನ್ನಾಡಿದ ನಂತರ ಆಹಾರವನ್ನು ಸ್ವೀಕರಿಸುವದು. ಇದರ ತಾತ್ಪರ್ಯವಿಷ್ಟೆ: ಉತ್ತಮರು, ತಮಗೆ ಪ್ರಾರ್ಥಿಸಿಕೊಂಡಾಗಲೂ ಯಾವುದೊಂದು ವಸ್ತುವನ್ನು ಒಮ್ಮಿಂದೊಮ್ಮೆಲೆ ಸ್ವೀಕರಿಸುವದಿಲ್ಲ ಆದರೆ ಅಧಮರು ಮಾತ್ರ ಇದಕ್ಕೆ ವಿಪರೀತರಾಗಿರುತ್ತಾರೆ.

ಪರಿವರ್ತಿನಿ ಸಂಸಾರೇ ಮೃತಃ ಕೊ ವಾ ನ ಜಾಯತೇ ।
ಸ ಜಾತೋ ಏನ ಜಾತೇನ ಯಾತಿ ವಂಶಃ ಸಮುನ್ನತಿಂ ॥೨೪॥

ಚಕ್ರದಂತೆ ಒಂದೇಸವನೆ ತಿರುಗುತ್ತಿರುವ ಈ ಸಂಸಾರದೊಳಗೆ ಸತ್ತ ನಂತರ ಹುಟ್ಟದವರು ಯಾರಿದ್ದಾರೆ? ಅರ್ಥಾತ್ ಎಲ್ಲರೂ ಹುಟ್ಟುವ

ಲೆಂದರ್ಥ. ಆದರೆ ಯಾವನ ಜನ್ಮದಿಂದ ವಂಶದ ಹೆಸರು ಬೆಳಕಿಗೆ ಬರುವದೋ ಅಂಥ ಮಹಾ ಪುರುಷನ ಬದುಕು ಮಾತ್ರ ಸಫಲವೆನ್ನಿಸುವದು.

ಕುಸುಮಸ್ತ ಬಕಸ್ಯೇವ ದ್ವಯಿ ವೃತ್ತಿರ್ಮನಸ್ವಿನಃ ।
ಮೂರ್ಧ್ನಿ ವಾ ಸರ್ವ ಲೋಕಸ್ಯ ವಿಶೀರ್ಯೇತ ವನೇಥವಾ ॥೩೩॥

ಶ್ರೇಷ್ಠ ಪುರುಷರ ನಡಾವಳಿಯು ಹೂವಿನಂತೆ ಎರಡು ವಿಧವಾಗಿರುವದು. ಇನ್ನುಳಿದವರಿಗಿಂತ ಮಿಗಿಲಾಗಿ ಅವರ ಮಸ್ತಕದ ಮೇಲೆ ಶೋಭಿಸುವದು, ಇಲ್ಲವೆ ಅರಣ್ಯದಲ್ಲಿಯೇ ಒಣಗಿ ನಾಶವಾಗಿ ಬಿಡುವದು; ಹೀಗೆ ಎರಡು ವಿಧವಾಗಿರುವದು.

ಸನ್ತ್ಯನ್ಯೇಪಿ ಬೃಹಸ್ಪತಿ ಪ್ರಭೃತಯಃ ಸಂಭಾವಿತಃ ಪಂಚಷಾ—
ಸ್ತಾನ್ಪ್ರತ್ಯೇಷ ವಿಶೇಷ ವಿಕ್ರಮ ರುಚಿ ರಾಹುರ್ನ ವೈರಾಯತೇ ।
ದ್ವಾವೇಥ ಗ್ರಸತೇ ದಿನೇಶ್ವರ ನಿಶಾಪ್ರಣೇಶ್ವರೌ ಭಾಸ್ವರೌ—
ಭ್ರಾತಃ ಪರ್ವಣಿ ಪಶ್ಯ ದಾನವಪತಿ ಶೀರ್ಷಾವ ಶೇಷಾಕೃತಿಃ ॥೩೪॥

ಪರಾಕ್ರಮದೊಳಗೆ ವಿಶೇಷ ಅಭಿರುಚಿಯನ್ನಿರಿಸಿಕೊಂಡಂಥ ರಾಹುವು ಬೃಹಸ್ಪತಿಯೇ ಮೊದಲಾದ ನಾಲ್ಕಾರು ಗ್ರಹಗಳೊಂದಿಗೆ ವೈರವನ್ನು ಸಾಧಿಸುವದಿಲ್ಲ, ಆದರೆ, ಓ ಸೋದರಾ! ರಾಕ್ಷಸಾಧಿಪತಿಯಾದ ಆ ರಾಹುವು ಹುಣ್ಣಿಮೆ ಹಾಗು ಅಮವಾಸ್ಯೆಯ ದಿನದಂದು ಪರಮ ತೇಜಸ್ವಿಗಳಾದ ಚಂದ್ರ ಸೂರ್ಯರ ಮೇಲೆಯೇ ಆಕ್ರಮಣ ಮಾಡುವನು. ಅವರನ್ನು ನುಂಗಲು ಪ್ರಯತ್ನಿಸುವನು. ಇದರರ್ಥವಿಷ್ಟೆ ! ನಿಜವಾದ ಶೂರನು ತನ್ನ ಸರಿಸಮಾನರಾದವರೊಂದಿಗೆ ಕಾದಲು ಸಿದ್ಧನಾಗುವನೆ ವಿನಾ ನಿರ್ಬಲ—ದುರ್ಬಲರಿಗೆ ಎಂದೆಂದಿಗೂ ತೊಂದರೆ ಕೊಡುವದಿಲ್ಲ.

ವಹತಿ ಭುವನ ಶ್ರೇಣಿಂ ಶೇಷಃ ಫಣಾ ಫಲಕ ಸ್ಥಿತಾಂ
ಕಮಠ ಪತಿನಾ ಮಧ್ಯೇ ಪೃಷ್ಠಂ ಸದಾ ಸ ವಿಧಾರ್ಯತೇ ।
ತಮಪಿ ಕುರುತೇ ಕ್ರೋಡಾ ಧೀನಂ ಪಯೋಧಿರನಾದರಂ—
ದಹಹ ಮಹತಾಂ ನಾಃ ಸೀಮಾನಶ್ಚರಿತ್ರ ವಿಭೂತಿಯಃ ॥ ೩೫ ॥

ಆ ದಿಶೇಷನು ಈ ಬ್ರಹ್ಮಾಂಡವನ್ನು ತನ್ನ ಹರವಾದ ಹೆಡೆಯ ಮೇಲೆ ಹೊತ್ತು ಕೊಂಡಿದ್ದಾನೆ. ಅಂಥ ಆದಿಶೇಷನನ್ನು ಆಮೆಯು ತನ್ನ ಬೆನ್ನ ಮೇಲೆ ಇರಿಸಿಕೊಂಡಿರುವದು. ಹಾಗು ಆ ಆಮೆಯನ್ನು ಸಮುದ್ರವು ತನ್ನೊಳಗಿಟ್ಟುಕೊಳ್ಳಲಿಚ್ಛಿಸದೆ ಹಂದಿಯ ವಶಕ್ಕೊಪ್ಪಿಸಿರುವದು. ಅಂತೆಯೇ ಮಹಾನ್ ಪುರುಷರ ಚರಿತ್ರೆಯು, ಅವರ ಅಸ್ತಿತ್ವವು ಸೀಮಾತೀತವಾಗಿರುವದೆಂದು ಹೇಳುವದು ಸುಳ್ಳಲ್ಲ.

ಯದ್ರಚೇತನೋಽಪಿ ಪಾದೈ: ಸ್ಪಷ್ಟ ಪ್ರಜ್ವಲತಿ ಸವಿತುರಿನ ಕಾಂತ:|
ತತ್ತೇಜಸ್ವಿ ಪುರುಷ: ಪರಕೃತ ನಿಕರ್ತಿ ಕಥಂ ಸಹತೇ ||೩೭||

ಚೈತನ್ಯ—ಪ್ರಾಣ — ರಹಿತವಾಗಿದ್ದರೂ ಕೂಡ ಸೂರ್ಯಕಾಂತ ಮಣಿಯು ಸೂರ್ಯನ ಕಿರಣ ರೂಪದ ಪಾದಗಳ ಸ್ಪರ್ಶವಾಗುತ್ತಲೆ ಅದು ಹೊತ್ತಿಕೊಳ್ಳುವದು. ಹೀಗಿರುವಾಗ ತೇಜಸ್ವಿಯಾದ ಪುರುಷನು—ಸಚೇತನನಾಗಿರುವಂಥವನು-ಎರಡನೆಯವರಿಂದಾದಂಥ ಅಪಕಾರವನ್ನು ಅದು ಹೇಗೆ ಸಹಿಸಬಲ್ಲನು? ಎಂದೆಂದಿಗೂ ಸಹಿಸಲಾರನು.

ಸಿಂಹ: ಶಿಶುರಪಿ ನಿಪತತಿ ಮದಮಲಿನಕಪೋಲ ಭಿತ್ತಿಷು ಗಜೇಷು|
ಪ್ರಕೃತಿರಿಯಂ ಸತ್ತ್ವವತಾಂ ನ ಖಲು ವಯಸ್ತೇಜಸಾಂಹೇತು:||೩೮||

ಸಿಂಹವು ಚಿಕ್ಕ ವಯಸ್ಸಿನಲ್ಲಿಯೂ ಕೂಡ-ಶೈಶವಾಸ್ಥೆಯಲ್ಲಿಯೂ ಸಹ ಮದದಿಂದ ಮಲಿನವಾದ ಗಂಡಸ್ಥಲದ ಆನೆಯ ಮೇಲೆಯೇ ಆಕ್ರಮಣ ಮಾಡುವದು. ತೇಜಸ್ವಿಗಳ ಸ್ವಭಾವವೇ ಆ ರೀತಿಯಾಗಿರುತ್ತದೆ. ಏಕೆಂದರೆ ತೇಜಸ್ಸಿನ, ಪ್ರತಿಷ್ಠೆಯ ಉದ್ದೇಶವು ಅವಸ್ಥೆಯನ್ನು—ಇರುವಿಕೆಯನ್ನು— ಎಂದಿಗೂ ಅವಲಂಬಿಸಿರುವದಿಲ್ಲ.

ಮಾನ—ಶೌರ್ಯ ಪ್ರಶಂಸೆ ಮುಗಿಯಿತು.



# ದ್ರವ್ಯ ಪ್ರಶಂಸೆ

ಜಾತಿರ್ಯಾತು ರಸಾತಲಂ ಗುಣಗಣಸ್ತತ್ರಾಪ್ಯಧೋ ಗಚ್ಛತಾತ್,
ಶೀಲಂ ಶೈಲ ತಟಾತ್ಪ ತತ್ವ ಭಿಜನಃ ಸಂದಹ್ಯತಾಂ ವಹ್ನಿನಾ ।
ಶೌರ್ಯೇ ವೈರಿಣಿ ವಜ್ರಮಾರು ನಿಪತತ್ವರ್ಥೋಽಸ್ತು ನಃ ಕೇವಲಂ,
ಏನೈಕೇನ ವಿನಾ ಗುಣಾ ಸ್ತೃಣಲವ ಪ್ರಾಯಾಃ ಸಮಸ್ತಾ ಇಮೇ॥೩೯॥

ಜಾತಿಯು ಒಂದು ವೇಳೆ ರಸಾತಳಕ್ಕಿಳಿದು ಹೋಗಿರಲಿ, ಉತ್ತಮ ಗುಣಗಳೆಲ್ಲ ಅದಕ್ಕೂ—ರಸಾತಳಕ್ಕೂ—ಕೆಳಮಟ್ಟಕ್ಕೆ ತಲುಪಿರಲಿ, ಶೀಲವು ಪರ್ವತಾಗ್ರಹದಿಂದ ಕೆಳಕ್ಕುರುಳಿ ನಾಶವಾಗಿ ಬಿಟ್ಟಿರಲಿ, ಕುಲೀನತೆ ಎಂಬುದು ಅಗ್ನಿಯ ಎಳೆತಕ್ಕೆ ಸಿಲುಕಿ ಭಸ್ಮವಾಗಿ ಹೋಗಿರಲಿ, ಶೌರ್ಯರೂಪೀ ಶತ್ರುವಿನ ಮೇಲೆಯೂ ವಜ್ರಾಘಾತವಾಗಿರಲಿ, ಇನ್ನೂ ಏನೇನೊ ಆಗಿದ್ದರೂ ನಮಗೇನು ? ನಮಗೆ ಐಶ್ವರ್ಯವೊಂದಿದ್ದರೆ ಸಾಕು. ಉಳಿದವುಗಳಿಂದ ನಮಗೆ ಸಂಬಂಧವೇ ಇಲ್ಲ. ದುಡ್ಡಿಲ್ಲದವನ ಬಳಿಯ ಒಳ್ಳೆಯ ಗುಣಗಳು ಹುಲ್ಲುಕಡ್ಡಿಗಿಂತಲೂ ಕಡೆಯಾಗಿರುವವು. ಅರ್ಥಾತ್ ದುಡ್ಡೇ ದೊಡ್ಡಪ್ಪ ಎಂಬುದು ಇದರರ್ಥ.

ತಾನೀಂದ್ರಿಯಾಣ್ಯ ವಿಕಲಾನಿ ತದೇವ ನಾಮ
ಸಾ ಬುದ್ಧಿರ ಪ್ರತಿಹಿತಾ ವಚನಂ ತದೇವ ।
ಅರ್ಥೋಽಷ್ಮಣಾ ವಿರಹಿತ: ಪುರುಷ: ಸ ಏವ
ಸ್ವನ್ಯ: ಕ್ಷಣೇನ ಭವತೀತಿ ವಿಚಿತ್ರ ಮೇತತ್ ॥೪೦॥

ವಿಕಲ ಹೊಂದಿರದಂಥ ಸಂಪೂರ್ಣ ಇಂದ್ರಿಯಗಳೂ ಅವುಗಳೆ ಆಗಿವೆ. ಅವೇ ಹೆಸರುಗಳಿವೆ. ಪ್ರಬಲವಾದ ಬುದ್ಧಿ ಮತ್ತೆ ಹಾಗು ವಚನಗಳು ಕೂಡ ಅವೇಆಗಿವೆ. ಇಷ್ಟೆಲ್ಲ ಇದ್ದರೂಕೂಡ ಅವನ ಬಳಿ ಹಣವೊಂದಿರದಿದ್ದರೆ ಅವನು

ಎಲ್ಲಿಂದ ಎಲ್ಲಿಗೋ ತಲುಪಿ ಬಿಡುವನು. ನಿಜಕ್ಕೂ ಇದು ಆಶ್ಚರ್ಯದ ಸಂಗತಿ ಯಾಗಿರುವದು. ಇದರಿಂದ ದುಡ್ಡಿಲ್ಲದವನ ಬಳಿಯ ಏನೆಲ್ಲವೂ ವ್ಯರ್ಥ ಎಂಬುದು ವ್ಯಕ್ತವಾಗುವದು.

ಯಸ್ಯಾಸ್ತಿ ವಿತ್ತಂ ನರಃ ಕುಲೀನಃ
ಸ ಪಂಡಿತಃ ಸ ಶೃತವಾಂಗುಣಜ್ಞಃ ।
ಸ ಏವ ವಕ್ತಾ ಸ ಚ ದರ್ಶನೀಯಃ
ಸರ್ವೇ ಗುಣಾಃ ಕಾಂಚನ ಮಾಶ್ರಯಂತೆ ॥೪೧॥

ಐಶ್ವರ್ಯವು ಎಂಥವನ ಬಳಿಯೇ ಇರಲಿ—ಅವನು ಚಾಂಡಾಲ ನಾಗಿರಲಿ ಇಲ್ಲವೆ ಕ್ರೂರನಾಗಿರಲಿ—ಅವನು ಕುಲೀನನೂ, ಪಂಡಿತನೂ, ಶಾಸ್ತ್ರಜ್ಞನೂ, ಸದ್ಗುಣಿಯೂ, ಸುಖಂಡನೂ ಹಾಗು ದರ್ಶನಯೋಗ್ಯನೂ ಆಗಿರುವನು. ಇದರರ್ಥ ವಿಷ್ಟೆ: ಒಳ್ಳೆಯ ಗುಣಗಳೆಲ್ಲ ಐಶ್ವರ್ಯದ ಆಶ್ರಯದಲ್ಲಿ ಪರಿ ಪೋಷಣೆ ಹೊಂದುವವು. ಅಂತೆಯೇ ಹಿರಿಯರು ಹೊನ್ನು ಇದ್ದವರ ತೊನ್ನು ಮುಚ್ಚಿತು ಎಂದು ಹೇಳುತ್ತಾರೆ. ಅದರಲ್ಲಿ ಅತಿಶಯೋಕ್ತಿ ಏನೂ ಇರುವದಿಲ್ಲ.

ದೌರ್ಮಂತ್ರ್ಯಾ ನೃಪತಿರ್ವಿನಶ್ಯತಿ ಯತಿಃ ಸಂಗಾತ್ಸುತೊ ಲಾಲನಾದ್ವಿ
ಪ್ರೋನಧ್ಯಯನಾತ್ಕುಲಂ ಕೃತನಯಾ ಚ್ಛೀಲಂಖಲೋಪಾಸನಾತ್।
ಹ್ರೀರ್ಮದ್ಯಾದ ನವೇಕ್ಷಣದಪಿ ಕೃಷಿ: ಸ್ನೇಹಃ ಪ್ರವಾಸಾಶ್ರಯಾ ।
ನ್ಮೈತ್ರೀ ಚಾಪ್ರಣಯಾತ್ ಸಮೃದ್ಧಿರನಯಾತ್ತ್ಯಾಗಾತ್ ಪ್ರಮಾದಾದ್ಧನಮ್ ॥ ೪೨ ॥

ದುಷ್ಟನಾದ ಮಂತ್ರಿಯು ಕೊಡುವ ಸಲಹೆಗಳಿಂದ ಅರಸನು ಹಾಳಾಗಿ ಹೋಗುವನು. ದುರ್ಜನರ ಸಹವಾಸದಿಂದ ತಪಸ್ವಿಯು, ಅತಿಯಾದ ಅಕ್ಕರತೆಯಿಂದ ಪುತ್ರನು, ವಿದ್ಯೆಯನ್ನು ಕಲಿಯದಿರುವದರಿಂದ ಬ್ರಾಹ್ಮಣನು, ಕುಪುತ್ರನಿಂದ ಕುಲವು ಅರ್ಥಾತ್ ವಂಶವು, ದುಷ್ಟಜನರ ಸೇವೆ

ಯಲ್ಲಿರುವದರಿಂದ ಶೀಲವು ಮದ್ಯವನ್ನು ಸೇವಿಸುವದರಿಂದ ಲಜ್ಜೆಯು, ನಿರ್ಲಕ್ಷ್ಯ ಮಾಡುವದರಿಂದ, ಭೂಮಿಗಳು ಯಾವಾಗಲೂ ಪರದೇಶದಲ್ಲಿಯೇ ಇರುವದರಿಂದ ಗೆಳೆತನವು, ಅನ್ಯಾಯದ ವರ್ತನೆಯನ್ನು ಮುಂದುವರೆಯಿಸು ವದರಿಂದ ಮೈತ್ರಿಯು, ಅನೀತಿಯುತವಾದ ಆಚರಣೆಯು ಸಮೃದ್ಧಿಯು ಅರ್ಥಾತ್ ಬೆಳವಣಿಗೆಯು, ಅಸಾವಧಾನತೆ—ಅಜಾಗರೂಕತೆ—ಯಿಂದಾದ ಪ್ರಮಾದದಿಂದ ಹಾಗು ಖರ್ಚುಮಾಡುವದರಿಂದ ಐಶ್ವರ್ಯವೂ ನಷ್ಟ ಹೊಂದುವವು.

ದಾನ ಭೋಗೋ ನಾಶಸ್ತಿ ಸ್ರೋ ಗತಯೋ ಭವಂತಿ ವಿತ್ತಸ್ಯ ।
ಯೋನ ದದಾತಿ ನ ಭುಂಕ್ತೇ ತತ್ಯ ತೃತಿಯಾ ಗತಿರ್ಭವತಿ ॥೪೩॥

ದಾನ, ಭೋಗ ಹಾಗು ನಾಶ ಇವು ಮೂರೂ ಐಶ್ವರ್ಯದ ಗತಿಗಳಾ ಗಿರುವವು. ದಾನವನ್ನು ಮಾಡುವಂಥವನು ಮತ್ತು ಹಣವನ್ನು ತನಗಾಗಿ ಉಪಯೋಗಿಸದಂಥವನು ಅರ್ಥಾತ್ ತನಗಾಗಿ ಏನೂ ವೆಚ್ಚ ಮಾಡದಿರು ವಂಥ ಜಿಪುಣನು, ಇಂಥವರ ಹಣವು—ಐಶ್ವರ್ಯವು—ನಾಶರೂಪದ ಮೂರನೆಯಗತಿಯನ್ನು ಹೊಂದುವದು-

ಮಣಿ: ಶಾಣೋಲ್ಲೀಢ: ಸಮರ ವಿಜಯೀ ಹೇತಿ ನಿಹತೊ,
ಮದಕ್ಷೀಣೋ ನಾಗ: ಶರದಿ ಸರಿತ: ಶ್ಯಾನ ಪುಲಿನಾಃ ।
ಕಲಾ ಶೇಷಶ್ಚಂದ್ರ ಸುರತ ಮರ್ದಿತಾ ಬಾಲವನಿತಾ
ತನಿಮ್ನಾ ಶೋಭಂತೇ ಗಲಿತ ವಿಭವಾಶ್ಚಾರ್ಥಿಸುಜನಾ: ॥೪೪॥

ಸಾಣೆ ಹಿಡಿದು ಅಣಿಗೊಳಿಸಿದಂಥ ಮಣಿ, ಯುದ್ಧರಂಗದಲ್ಲಿ ಗೆದ್ದು ಗಾಯಗೊಂಡು ಬಂದಿರುವಂಥ ಶೂರ ಸೈನಿಕ, ಮದವು ಇಳಿದಂಥ ಆನೆ, ಎಲ್ಲಿ ದೃಷ್ಟಿ ಹಾಯಿಸಿದರೂ ಉಸುಕೇ ಕಾಣುವಂಥ ಶರದ್ ಋತುವಿನ ನದಿ, ದ್ವಿತೀಯ ತಿಥಿಯ ಚಂದ್ರ, ಕಾಮುಕ್ರೀಡೆಯ ಸಮಯದಲ್ಲಿ ಬಲವಾಗಿ —ಅತಿಯಾಗಿ—ಮರ್ದಿಸಲ್ಪಂಥ ಯುವತಿ, ಹಾಗು ಅತಿಯಾಗಿ ದಾನವಿತ್ತು

ಬರಿಗೈಯಾದಾಗ ದಾರಿದ್ರ್ಯಕ್ಕೆ ಭಯಪಡುವ ಪುರುಷ, ಇಂಥವರೆಲ್ಲರೂ ತಮ್ಮಲ್ಲಿಯ ದುರ್ಬಲತೆಯಿಂದಲೇ ಹೆಚ್ಚು ಶೋಭೆಯನ್ನುಂಟು ಮಾಡುವವರಾಗಿದ್ದಾರೆ.

ಪರಿಕ್ಷೀಣಃ ಕಶ್ಚಿತ್ ಸ್ಪೃಹಯತಿ ಯವಾನಾಂ ಪ್ರಸೃತಯೇ,
ಸ ಪಶ್ಚಾತ್ ಸಂಪೂರ್ಣೋ ಗಣಯತಿ ಧರಿತ್ರೀಂ ತೃಣ ಸಮಾಮ್ ।
ಅತಶ್ಚಾ ನೈಕಾಂತ್ಯಾಂದು ಗುರು ಲಘು ತಯಾರ್ಥೇಷು ಧನಿನಾ-
ಮನಸ್ಥಾ ವಸ್ತೂನಿ ಪ್ರಥಯತಿ ಚ ಸಂಕೋಚಯತಿ ಚ ॥೪೫॥

ಯಾವನೊಬ್ಬನಿಗೆ ದಾರಿದ್ರ್ಯವು ಬಂದಾಗ, ಅರ್ಥಾತ್ ಬಡತನವು ಬಂದಾಗ ಅವನು ಯಾವಾಗಲೂ ಜವನನ್ನೇ ಸ್ಮರಿಸುತ್ತಿರುವನು. ಇಂಥ ಜೀವನವನ್ನು ಸಾಗಿಸುವದಕ್ಕಿಂತ ಸತ್ತು ಹೋಗುವದು ಮೇಲು ಎನ್ನುವನು. ಆದರೆ ಅವನಿಗೇ ಮತ್ತೆ ಐಶ್ವರ್ಯವು ದೊರೆತದ್ದಾದರೆ ಅವನು ಇಡಿಯ ಜಗತ್ತನ್ನೇ ತೃಣ ಸಮಾನವೆಂದು ಭಾವಿಸುವನು. ಆದಕ್ಕಾಗಿ ಹಣದ ಈ ಎರಡೂ ಅವಸ್ಥೆಗಳು ಪುರುಷನನ್ನು ಶ್ರೇಷ್ಠನನ್ನಾಗಿಯೂ, ಕನಿಷ್ಠನನ್ನಾಗಿಯೂ ಮಾಡುವವೆಂಬುದು ವ್ಯಕ್ತವಾಗುವದು. ಅಂದರೆ ಪರಿಸ್ಥಿತಿಯೇ ಯಾವುದೊಂದು ವಸ್ತುವಿನ ಮೌಲ್ಯದ ಆಕುಂಚನ ಹಾಗು ಪ್ರಸರಣೆಗೆ ಕಾರಣವಾಗಿರುವದು.

ರಾಜಂದುಧುಕ್ಷಸಿ ಯದಿ ಕ್ಷಿತಿ ಧೇನುಮತಾಂ
ತೇನಾದ್ಯ ವತ್ಸಮಿವ ಲೋಕಮಮುಂ ಪುಷಾಣ।
ತಸ್ಮಿಂಶ್ಚ ಸಮ್ಯಗನಿಶಂ ಪರಿಪುಷ್ಯ ಮಾಣೇ
ನಾನಾ ಫಲಂ ಫಲತಿ ಕಲ್ಪಲತೇವ ಭೂಮಿಃ ॥೪೬॥

ಓ ಭೂಪತಿಯೇ! ನಿನ್ನ ಮನದೊಳಗೆ ಪೃಥ್ವೀ ರೂಪದ ಗೋವಿನ ಹಾಲನ್ನು ಹಿಂಡಿಕೊಳ್ಳುವ- ಕರೆದುಕೊಳ್ಳುವ—ಇಚ್ಛೆಯಿದೆಯಲ್ಲವೆ? ಹಾಗಿದ್ದರೆ ಮೊದಲು ಪ್ರಜಾ ರೂಪಿಯಾದ ಕರುವನ್ನು ಚನ್ನಾಗಿ ಪೋಷಣೆ ಮಾಡುವದನ್ನು ಕಲಿ. ಪ್ರಜೆಗಳ ಲಾಲನೆ—ಪಾಲನೆಗಳು ಒಳ್ಳೆಯ ರೀತಿ

ಯಿಂದ ನಡೆಯ ತೊಡಗಿದವೆಂದರೆ ಆಗ ಪೃಥ್ವಿಯು ಕಲ್ಪ ವೃಕ್ಷದಂತೆ ನಾನಾ ಬಗೆಯ ಫಲಗಳನ್ನು ನಿಸ್ಸಂದೇಹವಾಗಿ ಕೊಡುವದು ಈ ಮಾತನ್ನು ಚನ್ನಾಗಿ ಗಮನದಲ್ಲಿರಿಸಿಕೊಂಡು ವರ್ತಿಸು.

ಸತ್ಯಾಽನೃತಾ ಚ ಪರುಷಾ ಪ್ರಿಯವಾದಿನಿ ಚ
ಹಿಂಸ್ರಾ ದಯಾಲು ರೂಪಿ ಚಾರ್ಥಪರಾವದಾನ್ಯಾ।
ನಿತ್ಯ ವ್ಯಯಂ ಪ್ರಚುರ ನಿತ್ಯಾಧನಾಗವಂ ಚ
ವಾರಾಂಗನೇವ ನೃಪನೀತಿ ರನೇಕ ರೂಪಾ ||೪೭||

ರಾಜ ನೀತಿಯು ವೇಶ್ಯೆಯಂತೆ–ಸೂಳೆಯಂತೆ—ಒಡ್ಡೋಲಗದೊಳಗ ನಾನಾ ಬಗೆಯ ರೂಪಗಳನ್ನು ಧರಿಸುವದು; ಕೆಲ ಕೆಲವು ಸಲ ಅಸಭ್ಯ ರೀತಿ ಯಿಂದ ವರ್ತಿಸುವದು, ಮತ್ತೆ ಕೆಲವು ಸಲ ಕಠೋರವಾಗಿ ವರ್ತಿಸುವದು. ಮತ್ತು ಕೆಲವು ಸಲ ಮಧುರವಾಣಿಯಿಂದ ಮಾತನಾಡಿಸುವದು' ಒಮ್ಮೊಮ್ಮೆ ಹಿಂಸಿಸುವದು, ಒಂದೊಂದು ಸಲ ದಯೆಯನ್ನು ಪ್ರದರ್ಶಿಸುವದು, ಮತ್ತೆ ಕೆಲವು ಸಲ ಜಿಪುಣತನದಿಂದ ವರ್ತಿಸಿದರೆ ಮತ್ತೊಮ್ಮೆ ಉದಾರತೆಯಿಂದ ವರ್ತಿಸುವದು. ಹಾಗು ಕೆಲವೊಂದು ಸಮಯದಲ್ಲಿ ಬಹಳಷ್ಟು ಹಣವನ್ನು ಕೊಳ್ಳೆ ಹೊಡೆದರೆ ಮತ್ತೊಮ್ಮೆ ಬಹಳಷ್ಟು ಸಂಚಯ ಮಾಡುವ ಪ್ರವೃತ್ತಿ ಯುಳ್ಳವರಾಗಿರುತ್ತಾರೆ. ಅದಕ್ಕಾಗಿ ಅರಸು ಹಾಗು ವೇಶ್ಯೆ ಇವರೀರ್ವರ ಗುಣಗಳು ಒಂದೇ ಆಗಿವೆ. ಅದಕ್ಕಾಗಿಯೇ ಹಿಂದಿನ ಕಾಲದ ಹಿರಿಯರು ಸೂಳೆಯು ಯಾರ ಹೆಂಡತಿಯಾಗಳು ಎಂದೂ, ಅರಸನ ಗೆಳೆತನವು ಏರಿ ಕೆಯ ಬಿಸಿನಂತೆ ಎಂದೂ ಹೇಳಿರುವದರಲ್ಲಿ ಎಷ್ಟೊಂದು ಅರ್ಥವು ಅಡಗಿದೆ ಎಂಬುದು ವ್ಯಕ್ತವಾಗುವದು.

ಆಜ್ಞಾ ಕೀರ್ತಿ: ಪಾಲನಂ ಬ್ರಾಹ್ಮಣಾನಾಂ ದಾನಂ ಭೋಗೋ
ಮಿತ್ರ–ಸಂರಕ್ಷಣಂಚ।
ಏಷಾಮೇತೇ ಷಡ್‌ಗುಣಾ ನ ಪ್ರವೃತ್ತಾಃ ಕೋರ್ಥ ಸ್ತೇ ಷಾಪ್–
ಪಾರ್ಥಿವೋಪಾಶ್ರಯೇಣ ||೪೮||

ಎಲ್ಲರಿಗೂ ಆಜ್ಞೆಯನ್ನು ಮಾಡುವ ಶಕ್ತಿಯು, ಹಾಗು ಕೀರ್ತಿ, ಬ್ರಾಹ್ಮಣರನ್ನು ಪರಿಪಾಲಿಸುವಿಕೆ; ದಾನ ಮಾಡುವದು, ಭೋಗಿಸುವದು, ಮಿತ್ರರನ್ನು ಸಂರಕ್ಷಿಸುವದು ಈ ಆರು ಗುಣಗಳು ಯಾವನಲ್ಲಿ ಮನೆ ಮಾಡಿ ಕೊಂಡಿರುವದಿಲ್ಲವೋ ಅವನು ಅರಸನ ಆಶ್ರಯದಲ್ಲಿದ್ದರೂ ಉಪಯೋಗವೇನು? ಉಪಯೋಗವೇನೂ ಇಲ್ಲವೆಂದರ್ಥ.

ಯದ್ಧಾತ್ರಾ ನಿಜ ಭಾಲ ಪಟ್ಟ ಲಿಖಿತಂ ಸ್ತೋಕಂ ಮಹದ್ವಾ ಧನಂ
ತತ್ಪ್ರಾಪ್ನೋತಿ ಮರುಸ್ಥಲೇಪಿ ನಿತರಾಂ ಮೇರೋ ತತೋ
ನಾಧಿಕಮ್ ।
ತದ್ಧೀರೋ ಭವವಿತ್ತವಸ್ತು ಕೃಪಣಾಂ ವೃತ್ತಿಂ ವೃಥಾ ಮಾ ಕೃಥಾಃ
ಕೂಪೇ ಪಶ್ಯಪಯೋನಿಧಾವಪಿ ಘಟೋ ಗೃಹ್ಣಾತಿ
ತುಲ್ಯಂ ಜಲಂ ॥೬೯॥

ವಿಧಾತನು ಭಾಗ್ಯದೊಳಗೆ ಬರೆದಷ್ಟು ಸಂಪತ್ತನ್ನು—ಅದು ಸ್ವಲ್ಪವೇ ಇರಬಹುದು. ಬಹಳಷ್ಟೇ ಆಗಿರಬಹುದು—ಅವನು ಮಾರವಾಡದ ಮರು ಪ್ರದೇಶದಲ್ಲಿದ್ದರೂ ಅಲ್ಲಿ ಅವಶ್ಯವಾಗಿ ದಯಪಾಲಿಸುವನು, ಅರ್ಥಾತ್ ಅಷ್ಟು ಅವನು ಎಲ್ಲಿದ್ದರೂ ಸಿಕ್ಕುವದು. ಆದರೆ ಭಾಗ್ಯದೊಳಗಿರುವದಕ್ಕಿಂತ ಹೆಚ್ಚಿಗೆ ಬೇಕೆಂದರೆ ಅವನು ಮೇರು ಪರ್ವತಕ್ಕೆ ಹೋದರೂ ಸಿಕ್ಕಲಾರದು. ಅದಕ್ಕಾಗಿ ಓ ಮಾನವರೇ! ಧೃತಿಗೆಡದಿರಿ. ಧೈರ್ಯವಾಗಿರಿ! ಧನಿಕರೆದುರು ಕೈಯೊಡ್ಡಿ ವೃಥಾ ದೀನತೆಯನ್ನು ಪ್ರದರ್ಶಿಸಬೇಡಿರಿ. ಏಕೆಂದರೆ ಒಂದು ಕೊಡವು ಭಾವಿಯೊಳಗಾಗಲಿ, ಸಮುದ್ರದೊಳಗಾಗಲಿ, ಅಷ್ಟೇ ನೀರನ್ನು ಸ್ವೀಕರಿಸುವುದೇ ವಿನಾ ಭಾವಿಯೊಳಗೆ ನೀರು ಕಡಿಮೆ ಇರುತ್ತವೆಂದು ಸ್ವಲ್ಪನ್ನು ಹಾಗು ಸಮುದ್ರದೊಳಗೆ ಅಪಾರ ಜಲ ರಾಶಿ ಇರುವದೆಂದು ಹೆಚ್ಚಾಗಿ ನೀರನ್ನು ಸ್ವೀಕರಿಸುವದಿಲ್ಲವೆಂಬ ಮಾತನ್ನು ಮರೆಯಬೇಡಿರಿ

ತ್ವಮೇವ ಚಾತಕಾಧಾರೋಽಸೀತಿ ಕೇಷಾಂ ನ ಗೋಚರಃ।
ಕಿಮಂ ಭೋದವರಾ ಸ್ಮಾಕಂ ಕಾರ್ಪಣ್ಯೋಕ್ತಿಂ ಪ್ರತೀಕ್ಷಸೇ ॥೫೦॥

ಓ ಶ್ರೇಷ್ಠ ಮೇಘವೆ! ಚಾತಕ ಪಕ್ಷಿಗಳಾದ ನಮಗೆ ನೀನೇ ಆಧಾರ ಭೂತನಾಗಿರುವಿಯೆಂಬುದು ಈ ಜಗತ್ತಿನೊಳಗೆ ಯಾರಿಗೆ ಗೊತ್ತಿಲ್ಲ? ಅದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ಹೀಗಿದ್ದರೂ ಕೂಡ ನೀನು ನಮ್ಮಿಂದ ದೀನವಾಣಿಯನ್ನು ಏತಕ್ಕೆ ಅಪೇಕ್ಷಿಸುವೆ? ಅರ್ಥಾತ್ ನಾವು ದೀನರಾಗಿ ನಿನ್ನನ್ನು ಸ್ತುತಿಸಬೇಕೆಂಬುದನ್ನು ನೀನು ಏತಕ್ಕೆ ಪ್ರತೀಕ್ಷಿಸುವಿ? ಹಾಗೆ ಮಾಡುವದು ಒಳ್ಳೆಯದಲ್ಲ ನಾವು ಬೇಡದಲೇ ನೀನು ಕೊಡಬೇಕು. ಏಕೆಂದರೆ ನೀನೇ ನಮಗೆ ಆಧಾರನಾಗಿರುವಿ.

ರೇ ರೇ ಚಾತಕ ಸಾವಧಾನ ಮನಸಾ ಮಿತ್ರ ಕ್ಷಣಮಃ ಶ್ರೂಯತಾ
ಮಮ್ಭೋದಾ ಬಹವೋಹಿಸಂತಿ ಗಗನೇ ಸರ್ವೇಪಿ ನೈತಾದೃಶ:|
ಕೇ ಚಿದ್ ವೃಷ್ಟಿ ಭಿರಾರ್ದ್ರಯಂತಿ ವಸುಧಾಂ ಗರ್ಜಂತಿ ಕೇಚಿದ್
ವೃಥಾ,
ಯಂ ಯಂ ಪಶ್ಯಸಿ ತಸ್ಯ ತಸ್ಯ ಪುರತೋ ಮಾ ಬ್ರೂಹಿ ದೀನಂ
ವಚಃ |೫೧|

ಓ ಚಾತಕ ಪಕ್ಷಿಯೇ! ಒಂದೇ ಒಂದು ಕ್ಷಣ ಸಾವಧಾನ ಚಿತ್ತದಿಂದ ನನ್ನ ಮಾತುಗಳನ್ನು ಕೇಳು. ಆಕಾಶದೊಳಗೆ—ಗಗನ ಮಂಡಲದೊಳಗೆ—ಮೋಡಗಳು ಬಹಳಷ್ಟಿವೆಯಾದರೂ ಅವೆಲ್ಲವುಗಳೂ ನಿನ್ನ ಪ್ರಾರ್ಥನೆಯನ್ನು ಮನ್ನಿಸುವದಿಲ್ಲ. ಅವುಗಳಲ್ಲಿ ಕೆಲವು ಮಾತ್ರ ನಿನ್ನ ವಿನಂತಿಗೆ ಮಾನ್ಯತೆಯನ್ನಿತ್ತು ಭೂಮಿಯನ್ನು ನೀರಿನಿಂದ ತುಂಬಿಸುವವು. ಅರ್ಥಾತ್ ಮಳೆಗರೆಯುವವು. ಆದರೆ ಉಳಿದವುಗಳು ಕೇವಲ ಗರ್ಜಿಸಿ ಮರೆಯಾಗಿ ಬಿಡುವವು. ಅದಕ್ಕಾಗಿ ನೀನು ಕಂಡ ಕಂಡವರನ್ನು ಯಾಚಿಸಬೇಡ.

ದ್ರವ್ಯ ಪ್ರಶಂಸೆ ಮುಗಿಯಿತು.



# ದುರ್ಜನ ನಿಂದೆ

ಅಕರುಣತ್ವಮಕಾರಣ ವಿಗ್ರಹಃ ಪರಧನೇ ಪರಯೋಷಿತಿ ಚಸ್ಪ್ರಹಾ।
ಸುಜನ ಬಂಧು ಜನೇಷ್ವ ಸಹಿಷ್ಣುತಾ ಪ್ರಕೃತಿ ಸಿದ್ಧ ಮಿದಂ
ಹಿ ದುರಾತ್ಮ—ನಾಮ್ ||೫೨||

ಯಾರಿಗೂ ದಯೆಯನ್ನು ತೋರದಿರುವದು ಅರ್ಥಾತ್ ನಿರ್ದಯಿಯಾಗಿರುವದು, ಕಾರಣವಿಲ್ಲದೆಯೇ ಇತರರನ್ನು ದ್ವೇಷಿಸುವದು, ಪರರ ಧನವನ್ನು ಹಾಗು ಪರಸ್ತ್ರೀಯರನ್ನು ಅಪೇಕ್ಷಿಸುವದು, ಸಜ್ಜನರು ಹಾಗು ಸ್ವಜನರನ್ನು ವಿನಾಕಾರಣವಾಗಿ ದ್ವೇಷಿಸುವದು ಇವುಗಳೆಲ್ಲ ದುರ್ಜನರ ಸ್ವಾಭಾವಿಕ ಲಕ್ಷಣಗಳಾಗಿವೆ.

ದುರ್ಜನಃ ಪರಿಹರ್ತವ್ಯೋ ವಿದ್ಯಯಾಽಲಂಕೃತೋಽಪಿ ಸನ್।
ಮಣಿನಾ ಭೂಷಿತಃ ಸರ್ಪಃ ಕಿಂ ಸೌನ ಭಯಂಕರ ||೫೩||

ದುಷ್ಟನಾದವನು ಯಾವಾಗಲೂ, ಎಂಥ ಸಮಯದಲ್ಲಿಯೂ, ಅವನು ಹೇಗೆಯೇ ಇದ್ದರೂ ಕೂಡ ಅವನು ದುಷ್ಟನೇ ಸರಿ. ಇಷ್ಟೇ ಅಲ್ಲ. ದುಷ್ಟನಾದವನು ವಿದ್ಯಾ ಭೂಷಣನಾಗಿದ್ದರೂ ಕೂಡ ಅವನ ಸಹವಾಸವು ಯೋಗ್ಯವಲ್ಲ. ಅರ್ಥಾತ್ ಅಂಥವನ ಸಹವಾಸವೂ ಯೋಗ್ಯವಲ್ಲ. ಏಕೆಂದರೆ ಬಹು ಮೂಲ್ಯದ ಮಣಿಯನ್ನು ಪಡೆದಿರುವದೆಂದು ಯಾರಾದರೂ ಭಯಂಕರವಾದ ಸರ್ಪದ ಸನಿಹಕ್ಕೆ ಸುಳಿಯುವರೆ ? ಎಂದಿಗೂ ಇಲ್ಲ. ಅದಕ್ಕಾಗಿ ವಿದ್ಯಾ ಭೂಷಿತನಾಗಿದ್ದರೂ ದುರ್ಜನನು ಪರಿತ್ಯಾಗಕ್ಕೆ ಯೋಗ್ಯನಾಗಿರುವನು.

ಜಾಡ್ಯಂ ಹಿಮತಿ ಗಣ್ಯತೇ ವ್ರತರುಚೌ ದಂಭಃ ಶುಚೌ ಕೈತವಂ,
ಶೂರೇ ನಿರ್ಘೃಣತಾ ಮುನೌ ವಿಮತಿತಾ ದೈನ್ಯಂ ಪ್ರಿಯಾಲಾಪಿನಿ।

ತೇಜಸ್ವಿನ್ಯವಲಿಪ್ತತಾ ಮುಖರತಾ ವಕ್ತರ್ಯರ್ಶಕ್ತಿಃ ಸ್ಥಿರೇ
ತತ್ಕೋನಾಮ ಗುಣೋಭವೇತ್ಸ ಗುಣಿನಾಂ ಯೋ ದುರ್ಜನೈರ್ನಾ-
—ಂಕಿತಂ ||೫೬||

ದುರ್ಜನರ ನಡವಳಿಕೆಯು ಅತಿ ವಿಚಿತ್ರವಾದುದಾಗಿರುವದು. ಏಕೆಂದರೆ ಅವರು ಲಜ್ಜಾವಂತರನ್ನು ಮೂರ್ಖರೆಂದೂ, ಯಾವುದೊಂದು ವ್ರತವನ್ನು ಆಚರಿಸುತ್ತ ಅದೇ ದಿಶೆಯಲ್ಲಿ ಮುಂದುವರಿಯುತ್ತಿರುವವರನ್ನು ಡಾಂಭಿಕರೆಂದೂ, ಪಾವಿತ್ರ್ಯವನ್ನು ಕಾಯ್ದುಕೊಂಡು ಹೋಗುವವನಿಗೆ ಕೈಲಾಗದವನೆಂದೂ, ಅಪ್ರತಿಮ ವೀರರನ್ನು ನಿರ್ದಯಿ ಹಾಗೂ ಕಾಟಕನೆಂದೂ, ತಪೋಧನರಾದ ಮುನಿಪುಂಗವರನ್ನು ಮೂರ್ಖರೆಂದೂ, ಮಧುರವಾಗಿ ಮಾತನಾಡುವವನನ್ನು ದೀನನೆಂದೂ, ಉಜ್ವಲ ತೇಜಸ್ಸಿನಿಂದ ಮಿನುಗುತ್ತಿರುವವನನ್ನು ಸೊಕ್ಕಿನವನೆಂದೂ, ಒಳ್ಳೆಯ ಮಾತುಗಾರರನ್ನು ವಾಚಾಳಿಯೆಂದೂ ಹಾಗು ಸ್ಥಿರಚಿತ್ತನನ್ನು ಸೋಮಾರಿಯೆಂದೂ ಕರೆಯುವರು. ಹೀಗಿರುವಾಗ, ಸದ್ಗುಣಿಗಳಲ್ಲಿ, ದುರ್ಜನರು ನಿಂದಿಸದಂತಹ ಯಾವ ಗುಣವಿದೆ? ಯಾವುದೂ ಇಲ್ಲ.

ಲೋಭಶ್ಚೇದ ಗುಣೇನ ಕಿಂ ಪಿಶುನತಾ ಯದ್ಯಸ್ತಿ ಕಿಂ ಪಾತಕೈಃ
ಸತ್ಯಂ ಚೇತ್ತಪಸಾ ಚ ಕಿಂ ಶುಚಿ ಮನೋಯದ್ಯಸ್ತಿ ತೀರ್ಥೇನ ಕಿಂ|
ಸೌಜನ್ಯಂ ಯದಿ ಕಿಂ ಜನೈಃ ಸುಮಹಿಮಾ ಯದಸ್ತಿ ಕಿಂ ಮಂಡನೈಃ
ಸದ್ವಿದ್ಯಾಯದಿ ಕಿಂ ಧನೈರಪಯಶೋ ಯದ್ಯಸ್ತಿ ಕಿಂ ಮೃತ್ಯುನಾ
|| ೫೫ ||

ಲೋಭವು—ಅತಿ ಆಸೆಯು— ಯಾವನಲ್ಲಿ ಮನೆಮಾಡಿಕೊಂಡಿರುವದೋ ಮತ್ತೆ ಅವನಲ್ಲಿ ಬೇರೆ ಅವಗುಣಗಳೇ ಬೇಕಿಲ್ಲ. ಕುಟಿಲ ಕಾರಸ್ಥಾನಿಯಾದವನು ಬೇರೆ ಪಾತಕದ ಕಾರ್ಯಗಳನ್ನು ಮಾಡುವದೇ ಬೇಡ. ಅವನನ್ನು ಪಾಪಿಯನ್ನಾಗಿ ಮಾಡಲು ಅದೊಂದೇ ಗುಣಸಾಕು. ಸತ್ಯವಂತನಾಗಿದ್ದರೆ ತಪವನ್ನಾಚರಿಸುವದೇ ಬೇಡ. ಒಂದು ವೇಳೆ ಮನಸ್ಸ ಶುದ್ಧನಾಗಿದ್ದರೆ, ತೀರ್ಥಯಾತ್ರೆಗಳನ್ನು ಮಾಡುವದರಿಂದ ಪ್ರಯೋಜನವಾದರೂ

ಏನು ? ಒಳ್ಳೆಯ ಹೃದಯುದವನಿದ್ದರೆ ಬಂಧು ವರ್ಗದವರ ಅವಶ್ಯಕತೆ ಏನಿದೆ? ಕೀರ್ತಿಯೊಂದಿದ್ದರೆ ಬೇರೆ ಆಭೂಷಣಗಳೇತಕ್ಕೆ ಬೇಕು? ಸದ್ವಿದ್ಯೆ ಇದ್ದವನಿಗೆ ಹಣದ ಅವಶ್ಯಕತೆಯಿಲ್ಲ. ಹಾಗು ಅಪಯಶವು ಯಾವನ ಪಾಲಿಗೆ ಬಂದಿರುವದೊ ಅಂಥವನು ಸತ್ತರೂ ಪ್ರಯೋಜನವೇನು? ಅರ್ಥಾತ್ ಅವನು ಸತ್ತರೂ ಕೂಡ ಅಪಯಶದ ಕಲಂಕವು ಮಾತ್ರ ಶಾಶ್ವತವಾಗಿ ಉಳಿದುಕೊಳ್ಳುವದು.

ಶಶಿ ದಿವಸ ಧೂಸರೋ ಗಲಿತ ಯೌವನಾ ಕಾಮಿನಿ,
ಸರೋವಿಗತ ವಾರಿಜ ಮುಖಮನಕ್ಷರಂ ಸ್ವಾಕೃತೇಃ|
ಪ್ರಭುರ್ಧನ ಪರಾಯಣಃ ಸತತ ದುರ್ಗತಃ ಸಜ್ಜನೋ
ನೃಪಾಂಗಣಗತಃ ಖಲೋ ಮನಸಿ ಸಪ್ತ ಶಲ್ಯಾನಿ ಮೇ ||೫೬||

ಹಗಲಿನ ಸಮಯದಲ್ಲಿ ಮಲಿನವಾಗಿ ಕಾಣುವಂಥ ಚಂದ್ರಬಿಂಬ, ಯೌವನವು ಕಳೆದು ಹೋಗಿ ವೃದ್ಧಳಾಗಿರುವ ಸ್ತ್ರೀ, ಕಮಲಗಳೇ ಇಲ್ಲದಂತಹ ಸರೋವರ, ನೋಡಲಿಕ್ಕೆ ಸುಂದರವೂ ಸುಸ್ವರೂಪಿಯೂ ಆಗಿದ್ದರೂ ಕೂಡ ಅಕ್ಷರಗಳನ್ನರಿಯದಂಥವನ ಮುಖ, ಕೀರ ಜಿಪುಣನಾದಂಥ ಒಡೆಯನು, ಕಡು ಬಡವನಾಗಿರುವಂಥ ಸಜ್ಜನನು ಹಾಗು ರಾಜ ಸಭೆಯೊಳಗಿನ ದುಷ್ಟರು, ಈ ಏಳು ಬಗೆಯ ಜನರು ನಮ್ಮ ಮನಕ್ಕೆ ಯಾವಾಗಲೂ ಮುಳ್ಳಿನಂತೆ ಚುಚ್ಚುತ್ತಿರುತ್ತಾರೆ.

ನ ಕಶ್ಚಿಚ್ಚಂಡ ಕೋಪಾನಾ ಮಾತ್ಮೀಯೋ ನಾಮ ಭುಭುಜಾಮ್|
ಹೋತಾರಮಪಿ ಜುಹ್ವಾನಂ ಸ್ಪೃಷ್ಟೋ ದಹತಿ ಪಾವಕಃ ||೫೭||

ಯಾವಾಗಲೂ ಕುಪಿತನಾಗಿರುವಂಥ ಅರ್ಥಾತ್ ಶೀಘ್ರ ಕೋಪಿಯಾದ ಅರಸನಿಗೆ ಬಹುಶಃ ಪ್ರಿಯರಾದವರು ಯಾರೂ ಇರುವದಿಲ್ಲ. ಅರ್ಥಾತ್ ಅಂಥವರನ್ನು ಎಲ್ಲರೂ ದೂರವೇ ಇರಿಸುತ್ತಾರೆ. ಶೀಘ್ರ ಕೋಪಿ ಅರಸನು ಅಗ್ನಿ ಇದ್ದಂತೆ ಎಂದು ಹೇಳಬಹುದು. ಏಕೆಂದರೆ ಅಗ್ನಿಯನ್ನು ಹೋಮ ಮಾಡುವವನು ಸ್ಪರ್ಶಿಸಿದರೂ ಕೂಡ ಅದು ಅವನನ್ನು ಸುಡದೆ

ಬಿಡಲಾರದು. ಅದೇ ರೀತಿಯಾಗಿ ಶೀಘ್ರ ಕೋಪಿಯಾದ ಅರಸನು ಕೂಡ ಯಾವ ಸಮಯದಲ್ಲಿ ಏನು ಮಾಡುವನೆಂಬುದನ್ನು ಹೇಳುವದು ಯಾರಿಗೂ ಸಾಧ್ಯವಿಲ್ಲ. ಅದಕ್ಕಾಗಿಯೇ ಅಂಥವರಿಗೆ ಪ್ರಿಯರಾದವರು ಯಾರೂ ಇರುವದಿಲ್ಲ. ಅರ್ಥಾತ್ ಅಂಥವರಿಂದ ಅದಷ್ಟು ದೂರವೇ ಇರುತ್ತಾರೆ.

ಮೌನಾನ್ಮೂಕಃ ಪ್ರವಚನ ಪಟುರ್ವಾಚಕೋ ಜಲ್ಪಕೋವಾ,
ದೃಷ್ಟ: ಪಾರ್ಶ್ವೆ ವಸತಿ ಚ ತದಾ ದುರತಶ್ಚಾಪ್ರಗಲ್ಭ:।
ಕ್ಷಾಂತ್ಯಾ ಭೀರುರ್ಯಾನಿ ನ ಸಹತೇ ಪ್ರಾಯರೋ ನಾಭಿಜಾತಃ
ಸೇವಾ ಧರ್ಮ: ಪರಮಗಹನೋ ಯೋಗಿನಾಮಪ್ಯ ಗಮ್ಯ: ॥೫೮॥

ಸೇವಾ ಧರ್ಮವು ಅತ್ಯಂತ ಕಠಿಣವಾದುದಾಗಿದೆ. ಅದು ಸರ್ವಸಂಗ ಪರಿತ್ಯಾಗಿಗಳಾದ ಯೋಗಿಗಳಿಂದ ನೀಗಿಸಿಕೊಂಡು ಹೋಗುವದೂ ಕಠಿಣವಾದುದಾಗಿರುವದು. ಏಕೆಂದರೆ ಒಂದು ವೇಳೆ ಸೇವಕನು ಮೌನಿಯಾಗಿದ್ದರೆ ಮೂಕನೆಂದೂ, ಬಹಳಷ್ಟು ಮಾತನಾಡಿದರೆ ವಾಚಾಳಿಯೆಂದೂ, ಸಮೀಪದಲ್ಲಿದ್ದರೆ ಅವಿಧೇಯನೆಂದೂ, ಅಷ್ಟು ದೂರದಲ್ಲಿ ನಿಂತುಕೊಂಡಿದ್ದರೆ ಮೂರ್ಖನೆಂದೂ ಸಹನ ಶೀಲತೆಯುಳ್ಳವನಾಗಿದ್ದರೆ ಅಂಜು ಬುರುಕನೆಂದೂ ಹಾಗು ಸಹನ ಶೀಲನಾಗದೆ ಕುಲಹೀನನೆಂದೂ ಹೋದರೆ ಕರೆಯಿಸಿಕೊಳ್ಳುವನು. ಅಂದಾಗ ಸೇವಕ ಧರ್ಮವು ಎಂಥದೆಂಬುದರ ಅರಿವಾಗುವದು.

ಉದ್ಭಾಸಿತಾ ಖಿಲ ಖಲಸ್ಯ ವಿಶೃಂ ಖಲಸ್ಯ
ಪ್ರಾಗ್ಜಾತ ವಿಸ್ಮೃತ ನಿಜಾಧಮ ಕರ್ಮವೃತ್ತೇಃ ।
ದೈವಾದ ವಾಪ್ತ ವಿಭವಸ್ಯ ಗುಣದ್ವಿಷೋಽಸ್ಯ
ನೀಚಸ್ಯ ಗೋಚರಗತೈ: ಸುಖ ಮಾಸ್ಯತೇ ಕೈ: ॥೫೯॥

ಸದ್ಗುಣಗಳನ್ನು ದ್ವೇಷಿಸುವಂಥ, ದೈವದೊಂದಿಗೆ ವಿಭವನಾಗುವಂಥ, ಯಾವಾಗಲೂ ದುಷ್ಟತನವನ್ನು ಪ್ರದರ್ಶಿಸುವಂಥ, ಹಾಗು ಪೂರ್ವ ಜನ್ಮದಲ್ಲಿ ಮಾಡಿದಂಥ ಅಧಮ ಕರ್ಮಗಳು ಯಾವನಿಗೆ ಈ ಜನ್ಮದಲ್ಲಿ ಉದಯವಾಗುತ್ತಿರುವವೋ ಅಂಥವರ ಅರ್ಥಾತ್ ಅಂಥ ನಿರಂಕುಶ ದುಷ್ಟರ ಸಹ

ವಾಸದಲ್ಲಿರುವದರಿಂದ ಯಾರಾದರೂ ಸುಖಿ ಯಾಗಿರಲು ಎಂದಿಗಾದರೂ ಸಾಧ್ಯವಿದೆಯೋ ಇಲ್ಲವೇ ? ಇಲ್ಲ.

ಆರಂಭಗುರ್ವಿ ಕ್ಷಯಿಣಿ ಕ್ರಮೇಣ ಲಧ್ವಿಪುರಾ ಬುದ್ಧಿಮತಿ ಚ.
ಪಶ್ಚಾತ್ ।
ದಿನಸ್ಯ ಪೂರ್ವಾರ್ದ್ಧ ಪರಾರ್ದ್ಧ ಭಿನ್ನಾ ಛಾಯೇದ ಮೈತ್ರಿ ಖಲಸ—
ಜ್ಜನಾನಾಮ್ ॥೬೮॥

ದುಷ್ಟರ ಮತ್ತು ಸಜ್ಜನರ ಗೆಳೆತನವು ದಿವಸದ ಪೂರ್ವಾರ್ಧ—.ಬೆಳಗಿನಿಂದ ಮಧ್ಯಾಹ್ನದ ವರೆಗೆ—ಹಾಗು ಉತ್ತರಾರ್ಧ-ಮಧ್ಯಾಹ್ನದಿಂದ ಸಾಯಂಕಾಲದ ವರೆಗೆ—ಗಳ ನೆರಳಿ ನೋಪಾದಿಯಲ್ಲಿರುವದು ದುಷ್ಟರ ಗೆಳೆತನವು ಆರಂಭದಲ್ಲಿ ಉದ್ದವೂ, ಅಗಲವೂ ಆಗಿದ್ದು ಬರು ಬರುತ್ತ ಕಡಿಮೆ ಯಾಗಿ ಬಿಡುವದು. ಆದರೆ ಸಜ್ಜನರ ಗೆಳೆತನವು ಮೊದಲು ತೀರ ಚಿಕ್ಕದಾಗಿದ್ದು ಅನಂತರ ಕೊನೆಯ ವರೆಗೆ ಬೆಳೆಯುತ್ತಲೇ ಹೋಗುವದು.

ಮೃಗ ಮೀನ ಸಜ್ಜನಾನಾಂ ತೃಣ ಜಲ ಸಂತೋಷ ವಿಹಿತ ವೃತ್ತಿ
ನಾಮ್।
ಲುಬ್ಧ ಕಧೀವರ ಪಿಶುನಾ ನಿಷ್ಕಾರಣ ಮೇವ ವೈರಿಣೋ ಜಗತಿ ॥೬೧॥

ಈ ಜಗತ್ತಿನೊಳಗೆ ಮೃಗಗಳು ಹುಲ್ಲು ತಿಂದು, ಮೀನುಗಳು ನೀರು ಕುಡಿದು ಹಾಗು ಸಜ್ಜನರು ಸಂತೋಷಪಟ್ಟು ತಮ್ಮ ತಮ್ಮ ಜೀವನವನ್ನು ಸಾಗಿಸುವರು. ಹೀಗಿದ್ದರೂ ಇವುಗಳೊಂದಿಗೆ ಅಂದರೆ ಬೇಟೆಗಾರರು ಮೃಗಗಳೊಂದಿಗೆ, ಮೀನುಗಾರರು ಮೀನುಗಳೊಂದಿಗೆ ಹಾಗು ದುಷ್ಟರು ಸಜ್ಜನರೊಂದಿಗೆ ವೈರವನ್ನು ಸಾಧಿಸುವರು.

ದುರ್ಜನ ನಿಂದೆ ಮುಗಿಯಿತು.



# ಸಜನ ಪ್ರಶಂಸೆ

ವಾಂಛಾ ಸಜ್ಜನ ಸಂಗಮೇ ಪರಗುಣೇ ಪ್ರೀತಿರ್ಗುರೌ ನಮ್ರತಾ,
ವಿದ್ಯಾಯಾಂ ವ್ಯಸನಂ ಸ್ವಯೋಷಿತಿ ರತಿರ್ಲೋಕಾಪವಾದಾದ್ಭಯಂ|
ಭಕ್ತಿ: ಶೂಲಿನಿ ಶಕ್ತಿರಾತ್ಮದಮನೇ ಸಂಸರ್ಗ ಮುಕ್ತಿಃ ಖಲೇ
ಎತೇ ಏಷು ಬಸಂತಿ ನಿರ್ಮಲ ಗುಣಾಸ್ತೇ ಭ್ಯೋ
ನರೇಭ್ಯೋನಮಃ |೬೨|

ಸಜ್ಜನರ ಸಂಗದಲ್ಲಿರಬೇಕೆಂಬ ಇಚ್ಛೆಯುಳ್ಳವನು, ಎರಡನೆಯವರ ಒಳ್ಳೆಯ ಗುಣಗಳನ್ನು ಪ್ರೀತಿಸುವಂಥವನು, ಹಿರಿಯರೊಂದಿಗೆ ನಮ್ರತೆಯಿಂದಿರುವವನು, ಯಾವಾಗಲೂ ವಿದ್ಯೆಯತ್ತ ಮನಸ್ಸು ಹಾಕುವವನು, ತನ್ನ ಪತ್ನಿಯೊಂದಿಗೇ ಪ್ರೇಮ ಮಾಡುತ್ತಿರುವಂಥವನು, ಆತ್ಮದ ಮನವುಳ್ಳವನು ಅರ್ಥಾತ್ ತನ್ನ ಮನವನ್ನು ಅಂಕಿತದಲ್ಲಿರಿಸಿಕೊಂಡಂಥವನು ಹಾಗು ದುಷ್ಟರ ಸಹವಾಸದಿಂದ ದೂರವಿರುವಂಥ ಗುಣಗಳನ್ನು ಅಳವಡಿಸಿಕೊಂಡಿರುವಂಥ ದಿವ್ಯಗುಣಗಳುಳ್ಳ ಪುರುಷರಿಗೆ ನಾನು ನಮಸ್ಕರಿಸುತ್ತೇನೆ.

ವಿಪದಿ ಧೈರ್ಯ ಮಥಾಭ್ಯುದಯೇ ಕ್ಷಮಂ ಸದಸಿ ವಾಕ್
ಪಟುತಾಯುಧಿ ವಿಕ್ರಮ:|
ಯಶಸಿ ಚಾಭಿರುಚಿರ್ವ್ಯಸನಂ ಶ್ರುತೌ ಪ್ರಕೃತಿ ಸಿದ್ಧಮಿದಂ ಹಿ
ಮಹಾತ್ಮನಾಂ ||೬೩||

ಎಂತಹ ವಿಪತ್ತಿನ ಸಮಯದಲ್ಲಿಯೂ ಧೈರ್ಯದಿಂದಿರುವದು, ಅಭ್ಯುದಯದ ಸಮಯದಲ್ಲಿ. ಕ್ಷಮೆಯಿಂದಿರುವದು, ಮಾತುಗಳಲ್ಲಿ ಚತುರತೆಯನ್ನು ವ್ಯಕ್ತಗೊಳಿಸುವದು, ಯುದ್ಧದಲ್ಲಿ ಪರಾಕ್ರಮವನ್ನು ಪ್ರದರ್ಶಿಸುವದು,ಯಶಸ್ಸನ್ನು ಪ್ರೀತಿಸುವದು ಹಾಗು ವಿದ್ಯಾರ್ಜನೆಯತ್ತ ಉತ್ಕಟ ಇಚ್ಛೆಯನ್ನು ತೋರುವದೇ ಮೊದಲಾದ ಗುಣಗಳು ಮಹಾತ್ಮರಾದವರಲ್ಲಿ ಸ್ವಾಭಾವಿಕವಾಗಿಯೆ ಬೇರೂರಿಕೊಂಡಿರುವವು.

ಪ್ರದಾನಂ ಪ್ರಚ್ಛನ್ನಂ ಗೃಹ ಮುಪಗತೇ ಸಂಭ್ರಮವಿಧಿಃ,
ಪ್ರಿಯಂ ಕೃತ್ವಾ ಕೌನಂ ಸದಸಿ ಕಥನಂ ಚಾಪ್ಯುಪ ಕೃತೇಃ।
ಅನುತ್ಸೇಕೋ ಲಕ್ಷ್ಮ್ಯಾಂ ನಿರಭಿ ಭವಸಾರಾ: ಪರಕಥಾಃ
ಸತಾಂ ಕೆನೋದ್ದಿಷ್ಟಂ ವಿಷಮ ಮಸಿಧಾರಾ ವ್ರತಮಿದಂ ॥೬೪॥

ದಾನ ಮಾಡಿದ್ದನ್ನು ಗುಪ್ತವಾಗಿರಿಸುವದು, ಮನೆಗೆ ಬಂದ ಅತಿಥಿಯನ್ನು ಸತ್ಕರಿಸುವದು, ಎರಡನೆಯವರಿಗೆ ಒಳ್ಳೆಯದನ್ನು ಮಾಡಿದ ನಂತರ ಮತ್ತೆ ಆ ಬಗ್ಗೆ ಮೇಲಿಂದ ಮೇಲೆ ಚರ್ಚೆ ಮಾಡದಿರುವದು, ಅರ್ಥಾತ ಅವನಿಗೆ ನಾನೇ ಕೆಲಸ ಮಾಡಿ ಕೊಟ್ಟೆನೆಂದು ಬಡಾಯಿ ಕೊಚ್ಚಿಕೊಳ್ಳದಿರುವದು, ಎರಡನೆಯವರಿಗೆ ಮಾಡಿದ ಉಪಕಾರವನ್ನು ನಾಲ್ಕು ಜನರೆದುರು ಹೇಳದಿರುವದು, ಐಶ್ವರ್ಯವು ಬಂದಾಗಲೂ. ದುರಭಿಮಾನಿಯಾಗದಿರುವದು, ಇಂಥ ಖಡ್ಗದ ತೀಕ್ಷ್ಣ ಧಾರೆಯಂಥ ವ್ರತಗಳನ್ನು ಸಜ್ಜನರಿಗೆ ಕಲಿಸಿದವರು ಯಾರು? ಅಂದರೆ ಇಂಥವುಗಳನ್ನು ಸಜ್ಜನರಿಗೆ ಯಾರೂ ಕಲಿಸುವದಿಲ್ಲ. ಅವು ತಂತಾನೇ ಹುಟ್ಟಿಕೊಳ್ಳುವವು.

ಕರೇ ಶ್ಲಾಘ್ಯಸ್ ತ್ಯಾಗ: ಶಿರಸಿ ಗುರುಪಾದ ಪ್ರಣಯಿತಂ,
ಮುಖೇ ಸತ್ಯಾಪಾಣಿ ವಿಜಯಿ ಭುಜಯೋರ್ವೀರ್ಯಮತುಲಂ।
ಹೃದಿ ಸ್ವಚ್ಛಾ ವೃತ್ತಿ: ಶ್ರುತ ಮಧಿಗತಂ ಚ ಶ್ರವಣಯೋ-
ರ್ವಿನಾಽಪ್ಯೈಶ್ವರ್ಯೇಣ ಪ್ರಕೃತಿ ಮಹತಾಂ ಮಂಡನ
ಮಿದಂ ॥೬೫॥

ದಾನವನ್ನೀಯುವದರಿಂದ ಕೈಗಳ ಶೋಭೆಯು, ಹಿರಿಯ ಚರಣಕ್ಕೆ ಎರಗುವದರಿಂದ ಮಸ್ತಕದ-ಹಣೆಯ-ಶೋಭೆಯು, ಯಾವಾಗಲೂ ನಿಜವನ್ನೇ ನುಡಿಯುವದರಿಂದ ಮುಖದ ಶೋಭೆಯು, ಅತುಲ ಪರಾಕ್ರಮವನ್ನು ಪ್ರದರ್ಶಿಸುವದರಿಂದ ಎರಡೂ ಭುಜಗಳ ಶೋಭೆಯು, ಸ್ವಚ್ಛ, ನಿರ್ಮಲ ವೃತ್ತಿಯಿಂದಾಗಿ ಹೃದಯದ ಶೋಭೆಯು ಹಾಗು ಶಾಸ್ತ್ರಾಧ್ಯಯನದಿಂದ ಕಿವಿಗಳ ಶೋಭೆಯು ಹೆಚ್ಚುವದು. ಇವುಗಳೆಲ್ಲ ಸತ್ಪುರುಷರಿಗೆ ಐಶ್ವರ್ಯರಹಿತ ಭೂಷಣಗಳಾಗಿರುವವು.

ಸಂಪತ್ಸು ಮಹತಾಂ ಚಿತ್ತಂ ಭವೇ ದುತ್ಪಲ ಕೋಮಲಂ|
ಆಪತ್ಸು ಚ ಮಹಾಶೈಲ ಶಿಲಾ ಸಂಗಾತ ಕರ್ಕಶಮ್ ||೬೬||

ತಮ್ಮ ಬಳಿಯಲ್ಲಿ ಬೇಕಾದಷ್ಟು ಐಶ್ವರ್ಯವಿದ್ದರೂ, ಮಹಾತ್ಮರ ಚಿತ್ತವು ವಿಚಲವಾಗದೆ ಕಮಲ ದೋಪಾದಿಯಲ್ಲಿ ಕೋಮಲವಾಗಿರುವದು. ಆದರೆ ಸಂಕಟ ಸಮಯದಲ್ಲಿ ಮಾತ್ರ ಅವರ ಚಿತ್ತವು ದೊಡ್ಡ ಶಿಲೆಯಂತೆ ಕಠೋರವಾಗಿ ಬಿಡುವದು. ಅಂದರೆ ಐಶ್ವರ್ಯವಿದ್ದಾಗ ಕೋಮಲ ಮನ ವಿದ್ದಂತೆ ವಿಪತ್ತು ಬಂದಾಗ ಕಠೋರತೆಯಿಂದ ಅದನ್ನು ಎದುರಿಸುವದು.

ಸಂತಪ್ತಾಯಸಿ ಸಂಸ್ಥಿತಸ್ಯ ಪಯಸೊ ನಾಮಾಪಿ ನ ಜ್ಞಾಯತೇ,
ಮುಕ್ತಾಕಾರ ತಯಾ ತದೇವ ನಲಿನೀ ಪತ್ರ ಸ್ಥಿತ ರಾಜತೇ|
ಸ್ವಾತ್ಯಾಂ ಸಾಗರ ಶುಕ್ತಿ ಮಧ್ಯ ಪತಿತಂ ತನ್ಮೌಕ್ತಿಕಂ ಜಾಯತೇ
ಪ್ರಾಯೇಣಾಧಮ ಮಧ್ಯಮೋತ್ತಮ ಜುಷಾಮೇವಂವಿಧಾ—
—ವೃತ್ತಯ: ||೬೭||

ನೀರಿನ ಒಂದು ಹನಿಯು ಕಾಯ್ದ ಕಬ್ಬಿಣದ ಮೇಲೆ ಬಿದ್ದರೆ ಅದರ ಗುರುತು ಕೂಡ ಉಳಿಯದಂತೆ ನಾಶವಾಗಿ ಬಿಡುವದು, ಆದರೆ ಅದೇ ಒಂದು ಹನಿಯು ಕಮಲ ಪತ್ರದ ಮೇಲೆ ಬಿದ್ದುದಾದರೆ ಮುತ್ತಿನಂತೆ ಶೋಭಾಯಮಾನವಾಗಿ ಕಾಣುವದು. ಹಾಗು ಅದೇ ಜಲಬಿಂದುವು ಸ್ವಾತೀ ನಕ್ಷತ್ರದಲ್ಲಿ ಸಮುದ್ರದೊಳಗಿನ ಸಿಂಪಿನೊಳಗೆ ಬಿದ್ದುದಾದರೆ ಬಹು ಮೂಲ್ಯದ ಮುತ್ತಾಗಿ ಬಿಡುವದು. ಇದರಿಂದ ಯಾವುದೊಂದು ವಸ್ತುವು ತನ್ನ ಸಂಪರ್ಕ-ಸಹವಾಸ-ದಿಂದಾಗಿಯೇ ಅಧಮ, ಮಧ್ಯಮ ಹಾಗು ಉತ್ತಮವಾಗುವದೆಂಬುದು ಸಿದ್ಧವಾಗುವದು.

ಯಃ ಪ್ರೀಣಯೇತ್ ಸುಚರಿತೈಃ ಪಿತರಂ ಸ ಪುತ್ರೋ
ಯದ್ಭರ್ತುರೇವ ಹಿತ ಮಿಚ್ಛತಿ ತತ್ಕಲತ್ರಮ್|
ತನ್ಮಿತ್ರ ಮಾಪಾದಿ ಸುಖೇ ಚ ಸಮಕ್ರಿಯಂ ಯದ್,
ಏತತ್ರಯಂ ಜಗತಿ ಪುಣ್ಯಕೃತೋ ಲಭಂತೇ ||೬೮||

ತನ್ನ ಒಳ್ಳೆಯ ಚಾರಿತ್ರ್ಯದಿಂದ ತಂದೆಯನ್ನು ಸಂತೋಷಗೊಳಿಸು ವಂಥವನೇ ನಿಜವಾದ ಪುತ್ರನು, ತನ್ನ ಪತಿಯ ಹಿತವನ್ನು ನಿರಂತರವೂ ಬಯಸುವಂಥವಳೇ ನಿಜವಾದ ಪತ್ನಿಯು; ಸುಖ—ದುಃಖಗಳಲ್ಲಿ ಒಂದೇ ರೀತಿಯಾಗಿ ನಡೆದುಕೊಳ್ಳುವಂಥವನೇ ನಿಜವಾದ ಪುತ್ರನು. ಈ ರೀತಿಯ ಒಳ್ಳೆಯ ಮಗು, ಪತ್ನಿ ಹಾಗು ಗೆಳೆಯರು ಈ ಜಗತ್ತಿನೊಳಗೆ ಸಿಗುವದು ದುರ್ಲಭವೆಂದೇ ಹೇಳಬೇಕು. ಆದರೆ ಯಾರಿಗೆ ಇಂಥವರ ಸಂಪರ್ಕ ದೊರೆ ತಿರುವದೋ ಅಂಥ ಪುರುಷರು ನಿಜವಾಗಿಯೂ ಪುಣ್ಯವಂತರೆಂದು ಭಾವಿಸ ತಕ್ಕದ್ದು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಏಕೋದೇವಃ ಕೇಶವೋ ವಾಶಿವೋ ವಾ ಏಕಂ ಮಿತ್ರಂ ಭೂಪಿತಿರ್ವಾ-
ಯತಿರ್ವಾ ।
ಏಕೋವಾಸಃ ಪತ್ತನೇ ವಾ ವನೇ ವಾ ಏಕಾ ನಾರೀ ಸುಂದರೀ ವಾ-
ದರೀವಾ ॥೬೯॥

ಯಾವಾಗಲೂ ಒಬ್ಬನೇ ದೇವನ-ಅವನು ಕೇಶವನೇ ಆಗಿರಬಹುದು ಇಲ್ಲವೆ ಮಹಾದೇವನೇ ಆಗಿರಬಹುದು— ಸೇವೆಯನ್ನು ಮಾಡತಕ್ಕದ್ದು. ಹಾಗು ಒಬ್ಬನೇ ಒಳ್ಳೆಯ ಮಿತ್ರನನ್ನು— ಅವನು ಅರಸನೇ ಆಗಿರಲಿ ಇಲ್ಲವೆ ಸನ್ಯಾಸಿಯಾಗಿರಲಿ— ಮಾಡಿಕೊಳ್ಳತಕ್ಕದ್ದು. ಒಂದೇ ಸ್ಥಳದಲ್ಲಿ ವಾಸ ಮಾಡುವದು ಯೋಗ್ಯವಾದುದಾಗಿದೆ. ವಾಸಮಾಡತಕ್ಕ ಸ್ಥಳವು ನಗರವೇ ಆಗಿರಲಿ ಇಲ್ಲವೆ ಕಾಡಾರಣ್ಯವೇ ಆಗಿರಲಿ. ಆದರೆ ಅವೆರಡರಲ್ಲಿ ಯಾವು ದೊಂದನ್ನು ಮಾತ್ರ ಆರಿಸಿಕೊಳ್ಳತಕ್ಕದ್ದು. ಹಾಗು ಯಾವಾಗಲೂ ಒಬ್ಬಳೇ ಸ್ತ್ರೀಯಳನ್ನು ಪ್ರೀತಿಸತಕ್ಕದ್ದು. ಅವಳು ಸುರಸುಂದರಿಯೋ ಆಗಿರಲಿ ಅಥವಾ ಗುಹೆಯಂತೆ ಭಯಂಕರಳೇ ಆಗಿರಲಿ. ಅದನ್ನು ಬಿಟ್ಟು ಕಂಡ ಕಂಡ ಸ್ತ್ರೀಯರನ್ನು ಪ್ರೀತಿಸುವದು ಯಾರಿಗೂ ಒಳ್ಳೆಯದಲ್ಲ- ಅದಕ್ಕಾಗಿ ಯಾವಾಗಲೂ ಒಂದೇ ಒಂದನ್ನು ಮೆಚ್ಚುವದು ಯಥಾ ಯೋಗ್ಯ ವಾಗಿದೆ.

ಸನ್ನುತ್ಯೈನ್ನೋನ್ನಮನ್ತಃ ಪರಗುಣಕಥನೈಃ ಸ್ವಾನುಗುಣಾಂಖ್ಯಾಪ
ಯಂತಃ,
ಸ್ವಾರ್ಥನ್ ಸಂಪಾದಯಂತೋ ವಿತತ ಪೃಥು ತರಾರಂಭಯತ್ನಾಃ
ಪರಾರ್ಥೇ।
ಕ್ಷಾಂತ್ಯೈ ವಾಕ್ಷೇಪರೂಕ್ಷಾಕರ ಮುಖರ ಮುಖಾಂದು ಜನಾಂದು
ಪಯನ್ತಃ
ಸನ್ತಃ ನಾಶ್ಚರ್ಯ ಚರ್ಯಾ ಜಗತಿ ಬಹುಮತಾಃ ಕಸ್ಯನಾಭ್ಯರ್ಚನೀ
ಯಾಃ ॥೭೦॥

ಈ ಜಗತ್ತಿನೊಳಗೆ ಯಾರ ಪೂಜನೀಯರೂ ಅಲ್ಲದಂತಹ ಅದ್ಭುತ ನಡಾವಳಿಯ ಸಜ್ಜನರೂ ಇರುವರು. ಅವರು ತಮ್ಮಲ್ಲಿಯ ನಮ್ರತೆ ಯಿಂದಲೇ ಉನ್ನತಮಟ್ಟಕ್ಕೇರುವರು. ಯಾವಾಗಲೂ ಇತರರ ಪ್ರಶಂಸೆ ಯಲ್ಲಿಯೇ ತಮ್ಮ ಮನಸ್ಸನ್ನು ತೊಡಗಿಸುವರು. ಯಾವಾಗಲೂ ಎರಡನೆ ಯವರ ಕಾರ್ಯವನ್ನು ಮಾಡಿಯೇ ತಮ್ಮ ಕಾರ್ಯವನ್ನು ಸಂಪಾದಿಸಿ ಕೊಳ್ಳುವರು. ಇಷ್ಟೇ ಅಲ್ಲ, ಅವರು, ಯಾವಾಗಲೂ ಅವಾಚ್ಯ ಶಬ್ದ ಗಳನ್ನು ಉಚ್ಚರಿಸುವಂಥನೂ, ಕಠೋರ ಹೃದಯಿಯಾದವನನ್ನು ಕೂಡ ಕ್ಷಮಾ ದೃಷ್ಟಿಯಿಂದ ನೋಡುವರು.

ಸಜ್ಜನ ಪ್ರಶಂಸೆ ಮುಗಿಯಿತು.



# ಪರೋಪಕಾರ ಪದ್ಧತಿ

ಭವಂತಿ ನಮ್ರಾಸ್ತರವಃ ಫಲೋದ್ಗಮೈರ್ನವಾಂಬುಭಿರ್ಭೂರ್ವಿ |
ಬಲಂಬಿನೌ ಧನಾಃ |
ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ ಸ್ವಭಾವ ಏವೇಷ ಪರೋಪಕಾರಿ
ಣಾಮ್ ||೭೧||

ವೃಕ್ಷಗಳು ಫಲಗಳ ಭಾರದಿಂದಾಗಿ ವಿನಮ್ರವಾಗುವವು. ಅರ್ಥಾತ್ ಕೆಳಕ್ಕೆ ಬಾಗುವವು. ನವೀನ ಜಲದಿಂದ ಪರಿಪೂರ್ಣವಾಗಿರುವಂಥ ಮೇಘಗಳು ಪೃಥ್ವಿಯ ಕಡೆಗೆ ಬಾಗಿ ಬಿಡುವವು. ಇದೇ ರೀತಿಯಾಗಿ ಸತ್ಪುರುಷರು ಕೂಡ ಎಷ್ಟೇ ಐಶ್ವರ್ಯವನ್ನು ಪಡೆದುಕೊಂಡಿದ್ದರೂ ಉದ್ಧಟರಾಗದೆ ಯಾವಾಗಲೂ ನಮ್ರರಾಗಿಯೇ ಇರುವರು. ಏಕೆಂದರೆ ಪರೋಪಕಾರಿ ಜೀವಿಗಳ ಸ್ವಭಾವವೇ ಆ ಬಗೆಯದಾಗಿರುವದು.

ಶ್ರೋತ್ರಂಶ್ರುತೇನೈವನ ಕುಂಡಲೇನ ದಾನೇನ ಪಾಣಿರ್ನ ತು
ಕಂಕಣೇನ |
ವಿಭಾತಿ ಕಾಯಃ ಕರುಣಾಮಯಾನಾಂ ಪರೋಪಕಾರೈರ್ನ ತು
ಚಂದನೇನ ||೭೨||

ಶಾಸ್ತ್ರದ ವಚನಗಳನ್ನು ಕೇಳುವದರಿಂದ ಕಿವಿಗೆ ಶೋಭೆಯುಂಟಾಗುವವಲ್ಲದೆ ಕುಂಡಲಗಳನ್ನು ಧರಿಸುವದರಿಂದಲ್ಲ. ಬಡಬಗ್ಗರಿಗೆ, ದೀನ ದಲಿತರಿಗೆ ದಾನವನ್ನೀಯುವದರಿಂದ ಕೈಗಳಿಗೆ ಶೋಭೆಯುಂಟಾಗುವದಲ್ಲದೆ ಕಂಕಣಗಳನ್ನು ತೊಟ್ಟುಕೊಳ್ಳುವದರಿಂದಲ್ಲ. ಕರುಣಾಳುಗಳಾದ ಪುರುಷರ ದೇಹವು ಇತರರಿಗೆ ಪರೋಪಕಾರ ಮಾಡುವದರಿಂದ ಶೋಭಿಸುವವಲ್ಲದೆ ಮೈತುಂಬ ಚಂದನ-ಗಂಧವನ್ನು ಲೇಪಿಸಿಕೊಳ್ಳುವದರಿಂದಲ್ಲ.

ಪಾಪಾನ್ನಿವಾರಯತಿ ಯೋಜಯತೇ ಹಿತಾಯ
ಗುಹ್ಯಂ ನಿಗೂಹತಿ ಗುಣಾನ್ ಪ್ರಕಟೀಕರೋತಿ।
ಆಪದ್‌ಗತಂಚ ನ ಜಹಾತಿ ದದತಿ ಕಾಲೇ
ಸನ್ಮಿತ್ರ ಲಕ್ಷಣಮಿದಂ ಪ್ರವದಂತಿ ಸನ್ತ: ॥೭೩॥

ಸಾಧು-ಸಂತರು ಒಳ್ಳೆಯ ಮಿತ್ರರ ಲಕ್ಷಣಗಳನ್ನು ಈ ರೀತಿ ಹೇಳುತ್ತಾರೆ. ಅರ್ಥಾತ್ ಒಳ್ಳೆಯ ಮಿತ್ರರು ಯಾವ ರೀತಿಯವರಿರುವರೆಂಬುದನ್ನು ಹೀಗೆ ಹೇಳುವರು: ತನ್ನ ಮಿತ್ರನನ್ನು ಪಾಪಕರ್ಮಗಳಿಂದ ದೂರವಿರಿಸುತ್ತ ಅವನಿಗೆ ಹಿತೋಪದೇಶವನ್ನು ಮಾಡುವನು. ತನ್ನ ಗೆಳೆಯನ ಗುಟ್ಟಿನ ವಿಷಯಗಳನ್ನು ಯಾರೆದುರಿಗೂ ಆಡದೆ ಹೃದಯದೊಳಗೆ ಬಚ್ಚಿಟ್ಟುಕೊಳ್ಳುವನು. ಹಾಗು ಅವನಲ್ಲಿಯ ಒಳ್ಳೆಯ ಗುಣಗಳನ್ನು ಎಲ್ಲರೆದುರೂ ಹೊಗಳುವನು. ಗೆಳೆಯನಿಗೆ ವಿಪತ್ತು ಬಂದಾಗ ಅವನಿಂದ ದೂರಾಗದೆ ಬಂದಂಥ ವಿಪತ್ತನ್ನು ಪರಿಹರಿಸಲು ಯತ್ನ ಮಾಡುವನು. ಹಾಗು ಪ್ರಸಂಗ ಬಂದಾಗ ಹಣವನ್ನು ಕೊಟ್ಟು ಅವನಿಗೆ ಸಹಾಯ ಮಾಡುವನು. ಇಂಥವರೇ ನಿಜವಾದ ಮಿತ್ರರೆಂದು ತಿಳಿಯತಕ್ಕದ್ದು

ಪದ್ಮಾಕರಂ ದಿನಕರೋ ವಿಕಚಂ ಕರೋತಿ
ಚಂದ್ರೋ ವಿಕಾಸಯತಿ ಕೈರವ ಚಕ್ರವಾಲಂ।
ನಾಭ್ಯರ್ಥಿತೋ ಜಲಧರೋಪಿ ಜಲಂ ದದಾತಿ
ಸಂತ: ಸ್ವಯಂ ಪರಹಿತೇಷು ಕೃತಾಭಿಯೋಗಾ: ॥೭೪॥

ಸೂರ್ಯನು ತಾನಾಗಿಯೇ ಬೇರೆಯವರಾರೂ ವಿನಂತಿ ಮಾಡಿ-ಕೊಳ್ಳದಲೆ-ಕಮಲಗಳ ಸಮುದಾಯವನ್ನು ವಿಕಸಿತಗೊಳಿಸುವನು. ಚಂದ್ರಬಿಂಬವು ತನ್ನವಳೇ ಆದ ಕುಮುದಿನಿಯನ್ನು ಪ್ರಫುಲ್ಲಿತಗೊಳಿಸುವದು. ಮೇಘಗಳು ಯಾರೂ ಬೇಡದೆ ಇದ್ದರೂ, ಪ್ರಾರ್ಥಿಸಿಕೊಳ್ಳದಿದ್ದರೂ ಮಳೆಗರೆಯುವವು. ಇದೇ ರೀತಿಯಾಗಿ ಸಜ್ಜನರು ಕೂಡಾ ತಾವಾಗಿಯೇ ಎರಡನೆಯವರಿಗೆ ಒಳ್ಳೆಯದಾಗಲೆಂದು ಕಾರ್ಯೋನ್ಮುಖರಾಗುವರು. ಹಾಗು ಆ ದಿಶೆಯಲ್ಲಿ ಸದಾ ಮುನ್ನಡೆಯುವರು.

ಏತೇ ಸತ್ಪುರುಷಾಃ ಪರಾರ್ಥ ಘಟಕಾಃ ಸ್ವಾರ್ಥಾನ್ಪರಿತ್ಯಜ್ಯಯೇ
ಸಾಮಾನ್ಯಾಸ್ತು ಪರಾರ್ಥಮುದ್ಯಮಭೃತಃ ಸ್ವಾರ್ಥಾವಿರೋಧನಯೇ।
ತೇಽಮೀ ಮಾನುಷ್ಯರಾಕ್ಷಸಾಃ ಪರಹಿತಂ ಸ್ವಾರ್ಥಾಯ ನಿಘ್ನಂತಿಯೇ
ಏ ನಿಘ್ನಂತಿ ನಿರರ್ಥಕಂ ಪರಹಿತಂ ತೇ ಕೇನ ಜಾನೀಮಹೇ ॥೭೫॥

ಸ್ವಾರ್ಥವನ್ನು ತ್ಯಾಗಮಾಡಿ ಎರಡನೆಯವರಿಗೆ ಒಳ್ಳೆಯದನ್ನು ಮಾಡುತ್ತ ಹೋಗುವವನುಸತ್ಪುರುಷನೆನಿಸುವನು. ತನ್ನ ಹಿತವನ್ನು-ಸ್ವಾರ್ಥವನ್ನು ತ್ಯಾಗ ಮಾಡದಲೆ ಎರಡನೆಯವರ ಹಿತವನ್ನು ಬಯಸುವಂಥ ವನು ಹಾಗು ಆ ದಿಶೆಯಲ್ಲಿ ಕಾರ್ಯ ಪ್ರವೃತ್ತನಾಗುವವನು. ಸಾಮಾನ್ಯ ಮನುಷ್ಯನೆನ್ನಿಸುವನು. ತನ್ನ ಹಿತಕ್ಕಾಗಿ ಅಂದರೆ ತನಗೆ ಒಳ್ಳೆಯದಾಗ ಲೆಂದು ಎರಡನೆಯವರಿಗೆ ವಿಘ್ನಗಳನ್ನುಂಟು ಮಾಡುವವನು ರಾಕ್ಷಸನೆನ್ನಿಸ ಲಾರನು. ಆದರೆ ತನಗೆ ಸಂಬಂಧವಿಲ್ಲವಂಥ ವಿಷಯದೊಳಗೆ ಕೈಹಾಕಿ ಇತರರಿಗೆ ಹಾನಿಯನ್ನುಂಟು ಮಾಡುವವರಿಗೆ ಏನೆನ್ನಬೇಕೋ ನನಗೆ ತಿಳಿಯ ದಾಗಿದೆ.

ಕ್ಷೀರೇಣಾತ್ಮಗತೋದಕಾಯ ಹಿ ಗುಣಾದತ್ತಾಃ ಪುರಾ ತೇಽಖಿಲಾಃ
ಕ್ಷೀರೋತ್ತಾಪಮವೇಕ್ಷ್ಯತೇನಪಯಸಾಹ್ಯಾತ್ಮಾ ಕೃಶಾನೌ ಹುತಃ।
ಗನ್ತುಂ ಪಾವಕಮುನ್ಮನಸ್ತದಭವದು ದೃಷ್ಟ್ವಾತು ಮಿತ್ರಾಪದಂ
ಯುಕ್ತಂ ತೇನ ಜಲೇನ ಶಾಮ್ಯತಿ ಸತಾಂ ಮೈತ್ರಿ ಪುನಸ್ತ್ವೀ
ದೃಶಿ॥೭೬॥

ಮೊದಲು ಜಲವು ಹಾಲಿನೊಳಗೆ ಬೆರೆತುಕೊಳ್ಳುತ್ತದೆ ಹಾಲು ಜಲಕ್ಕೆ ತನ್ನಲ್ಲಿಯ ಒಳ್ಳೆಯ ಗುಣಗಳನ್ನು ಅದಕ್ಕೆ ಕಲಿಸಿ ಗೆಳೆಯನನ್ನಾಗಿ ಮಾಡಿ ಕೊಂಡಿತು. ಅರ್ಥಾತ್ ಅವೆರಡೂ ಏಕಜೀವಗಳಾದವು. ಹಾಲು ಅಗ್ನಿಯ ಹೊಡೆತಕ್ಕೆ ಸಿಲುಕಿ ಕತ ಕತನೆ ಕುದಿಯುತ್ತಿರುವದನ್ನು ನೋಡಲಾರದ ಜಲವು ತಂತಾನೆ ಭಸ್ಮವಾಗಿ ಹೋಯಿತು. ಅಂದರೆ ಹಾಲು ಕಾಯಿಸುತ್ತಿರು ವಾಗ ಅವರೊಳಗೆ ಬೆರೆತ-ನೀರು ಸುಟ್ಟು ಹೋಗಿ ಬರೀ ಹಾಲು ಉಳಿಯು

ವದು ಸ್ವಾಭಾವಿಕ. ಆಗ ಹಾಲು, ತನಗಾಗಿ, ತನ್ನನ್ನು ಉಳಿಸುವದಕ್ಕಾಗಿ ಸ್ವಾರ್ಥತ್ಯಾಗಮಾಡಿ ಭಸ್ಮವಾದ ಜಲಕ್ಕೋಸುಗ ತಾನೂ ಉಕ್ಕಿ ಬೆಂಕಿ ಯೊಳಗೆ ಬಿದ್ದುಹೋಗಲು ಪ್ರಯತ್ನಿಸುತ್ತಿರುವಾಗ, ಮತ್ತೆ ಜಲವನ್ನು ಬೆರೆಸಲು ಶಾಂತವಾಗುವದು. ಅಂದರೆ ಶಾಖವು ಹೆಚ್ಚಾಗಿ ಹಾಲು-ಉಕ್ಕು ತ್ತಿರುವಾಗ ತಣ್ಣೀರನ್ನು ಚಿಮುಕಿಸುತ್ತಾರೆ- ಆಗ ಹಾಲು ಮತ್ತೆ ಕೆಳಕ್ಕಿಳಿ ಯುವದು. ಸತ್ಪುರುಷರ ಗೆಳೆತನವು ಇದೇ ರೀತಿಯಾಗಿ ಅಂದರೆ, ಹಾಲು ಜಲದೋಪಾದಿಯಲ್ಲಿರುವದು.

ಇತಃ ಸ್ವಪಿತಿ ಕೇಶವಃ ಕುಲಮಿತಸ್ತದೀಯದ್ವಿಷಾ-
ಮಿತಶ್ಚ ಶರಣಾರ್ಥಿನಾಂ ಶಿಖರಿಣಾಂ ಗಣಾಃ ಶೇರತ।
ಇತೋऽಪಿ ವಡವಾನಲ: ಸಹ ಸಮಸ್ತ ಸಂವರ್ತಕೈ-
ರಹೋ ವಿತತ ಮೂರ್ಜಿತಂ ಭರಸಹಶ್ಚ ಸಿಂಧೋರ್ವಪು: ॥೭೭॥

ಸಮುದ್ರದೊಳಗೆ ಒಂದು ಕಡೆ ಭಗವಾನ್ ವಿಷ್ಣುವು ಪವಡಿಸುತ್ತಾನೆ. ಮತ್ತೊಂದು ಕಡೆಗೆ ರಾಕ್ಷಸರ ಕುಲವೇ ಬೀಡು ಬಿಟ್ಟಿರುತ್ತದೆ. ಹಾಗು ಇನ್ನೊಂದು ಕಡೆಗೆ ಶರಣಾಗತರಾದ ಪರ್ವತಗಳ ಸಮೂಹವೇ ಬಿದ್ದುಕೊಂಡಿ ರುತ್ತದೆ. ಇಷ್ಟೇ ಅಲ್ಲ ಅದೇ ಸಮುದ್ರದೊಳಗೆ ವಡವಾನಲದ ಪ್ರಳಯಾ ಗ್ನಿಯೂ ಬಿಡಾರ ಮಾಡಿಕೊಂಡಿರುವದು. ಇಷ್ಟೆಲ್ಲವನ್ನು ತನ್ನೊಳಗಿರಿಸಿ ಕೊಂಡಿದ್ದರೂ ಸಮುದ್ರವು ಎಷ್ಟೊಂದು ಶಾಂತವಾಗಿ, ಗಾಂಭೀರ್ಯದಿಂದ ವರ್ತಿಸುತ್ತಿರುವದಲ್ಲ! ನಿಜಕ್ಕೂ ಅದರ ಸಹನೆಯು, ಧೈರ್ಯವು ಉಪಮಾ ತೀತವಾದದ್ದು. ಇದರರ್ಥವಿಷ್ಟೆ. ಸಜ್ಜನರು ಕೂಡ ತಮಗೆ ಎಷ್ಟೇ ತೊಂದರೆ ಇರಲಿ, ತಮ್ಮ ಮೇಲೆ ಎಷ್ಟೇ ಭಾರವು ಬಿದ್ದರೂ ಕೂಡ ಗಾಂಭೀರ್ಯದಿಂದ ಧೈರ್ಯದಿಂದ, ಸಮುದ್ರದಂತೆ ವರ್ತಿಸುವದು. ಅಂತೆಯೇ ಹಿಂದಿನ ಹಿರಿ ಯರು ಸಜ್ಜನರನ್ನು ಹೊಗಳುವಾಗ "ಅಯ್ಯೋ ಅವರು ಸಮುದ್ರದಂಥ ಗುಣದವರಪ್ಪಾ!" ಎಂದು ಹೇಳುತ್ತಿರುವದುಂಟು.

ತೃಷ್ಣಾಂ ಛಿನ್ಧಿ ಭಜಕ್ಷಮಾಂ ಜಹಿಮದಂ ಪಾಪೇರತಿರ್ಮಾಂ ಕೃಥಾ:
ಸತ್ಯಂ ಬ್ರಹ್ಮನುಯಾಯಿ ಸಾಧುಪದವಿಂ ಸೇವಸ್ವ ವಿದ್ವಜ್ಜನಮ್।
ಮಾನ್ಯಾನ್ಮಾನಯ ವಿದ್ವಿಷೋsಪ್ಯನುನಯ ಪ್ರಚ್ಛಾದಯ ಸ್ವಾನ್ಗು
ಣಾನ್,
ಕೀರ್ತಿಪಾಲಯ ದು:ಖಿತೇ ಕುರು ದಯಾಮೇತತ್ಸತಾಂ
ಲಕ್ಷ್ಮಣಮ್ ॥೭೮॥

ತೃಷ್ಣೆಯನ್ನು ಮರ್ದನಗೊಳಿಸಿರಿ. ಕ್ಷಮಾಗುಣವನ್ನು ಅಳವಡಿಸಿ ಕೊಳ್ಳಿರಿ, ದುರಭಿಮಾನವನ್ನು ಬಿಟ್ಟುಬಿಡಿರಿ. ಪಾಪಕಾರ್ಯಗಳನ್ನು ಪ್ರೀತಿಸಬೇಡಿರಿ. ಯಾವಾಗಲೂ ಸಜ್ಜನರ ಆಚರಣೆಯನ್ನು ಅನುಸರಿಸ ತಕ್ಕದ್ದು. ವಿದ್ವಾಂಸರ ಸೇವೆಯನ್ನು ಮನಮುಟ್ಟಿಮಾಡಬೇಕು. ಮಾನ್ಯ ರಾದಂಥ ಹಿರಿಯರನ್ನು ಗೌರವಾದರಗಳಿಂದ ಕಾಣಬೇಕು. ಅರ್ಥಾತ್ ಅಂಥವರನ್ನು ಯಾವಾಗಲೂ ಗೌರವಿಸಬೇಕು. ಶತೃಗಳನ್ನು ಕೂಡ ಒಳ್ಳೆಯ ದೃಷ್ಟಿಯಿಂದ ನೋಡಬೇಕು. ತಮ್ಮಲ್ಲಿಯ ಒಳ್ಳೆಯ ಗುಣಗಳು ಗೌಪ್ಯವಾಗಿರುವಂತೆ ಪ್ರಯತ್ನಿಸಬೇಕು. ಅರ್ಥಾತ್ ತನ್ನಲ್ಲಿಯ ಒಳ್ಳೆಯ ಗುಣಗಳನ್ನು ತಾನೇ ಹೇಳಿಕೊಳ್ಳುತ್ತ ಹೋಗಬಾರದು. ಗಳಿಸಿದಂತಹ ಕೀರ್ತಿಯನ್ನು ಕಾಪಾಡಿಕೊಂಡು ಹೋಗಿರಿ. ಹಾಗು ದೀನ-ದಲಿತರ ಬಗ್ಗೆ ಕರುಣೆಯನ್ನು ತೋರಿರಿ. ಅರ್ಥಾತ್ ದು:ಖಿಗಳನ್ನು ದಯೆಯಿಂದ ಕಾಣಿರಿ. ಇವುಗಳೆಲ್ಲ ಸಜ್ಜನರ ಲಕ್ಷಣಗಳಾಗಿವೆ.

ಮನಸಿ ವಚಸಿ ಕಾಯೇ ಪುಣ್ಯಪೀಯೂಷ ಪೂರ್ಣಾ-
ಸ್ತ್ರಿಭುವನಮುಪಕಾರ ಶ್ರೇಣಿಭಿ: ಪ್ರೀಣಯಂತ: ।
ಪರಗುಣ ಪರಮಾಣುನ್ಪರ್ವತೀಕೃತ್ಯ ನಿತ್ಯಂ
ನಿಜ ಹೃದಿ ವಿಕಸನ್ತ: ಸನ್ತಿ ಸನ್ತ: ಕಿಯನ್ತ: ॥೭೯॥

ಮನಸ್ಸು, ವಾಣಿ ಹಾಗು ಶರೀರವು ಪುಣ್ಯಮಯ ಅಮೃತದಿಂದ ತುಂಬಿರುವಂಥ ಸಜ್ಜನರು ಈ ಸಂಸಾರದೊಳಗೆ ಸಿಕ್ಕುವದು ದುರ್ಲಭವೆಂದೇ

ಹೇಳಬೇಕು. ಅಂಥ ಸಜ್ಜನರು, ತಾವು ಮಾಡುವಂಥ ಕೃತ್ಯಗಳಿಂದ-ಉಪಕಾರಗಳಿಂದ-ಇಡಿಯ ಜಗತ್ತನ್ನೇ ತ್ರಿಭುವನವನ್ನೇ-ತೃಪ್ತಿಗೊಳಿಸುವರು. ಇಷ್ಟೇ ಅಲ್ಲ, ಅವರು ಇತರರಲ್ಲಿಯ ಸಾಸಿವೆ ಕಾಳಿನಷ್ಟು ಒಳ್ಳೆಯ ಗುಣವನ್ನು ಪರ್ವತಾಕಾರವಾಗಿ ಬೆಳೆಯಿಸಿ ಅವರನ್ನು ಬಾಯಿ ತುಂಬಾ ಹೊಗಳುವರು. ಅಂದಾಗ ಇಂಥ, ಮಹಾನುಭಾವರು—ಸಜ್ಜನರು—ಸಿಕ್ಕುವದು ನಿಜಕ್ಕೂ ದುರ್ಲಭವೇ ಸರಿ.

ಕಿಂ ತೇನ ಹೇಮಗಿರಿಣಾ ರಜತಾದ್ರಿಣಾ ವ
  ಯತ್ರಾಶ್ರಿತಾಶ್ಚ ತರವಸ್ತ ರವಸ್ತ ಏವ।
ಮನ್ಯಾ ಮಹೇ ಮಲಯ ಮೇವ ಯದಾಶ್ರಯೇಣ
  ಕಂಗೋಲ ನಿಂಬ ಕುಟಚಾ ಅಪಿ ಚಂದನಾಃ ಸ್ಯುಃ ||೮೦||

ಬಂಗಾರದ—ಸುಮೇರು—ಹಾಗು ಬೆಳ್ಳಿಯ—ಕೈಲಾಸ—ಪರ್ವತಗಳಿಂದ ಆಗುವ ಲಾಭವೇನು? ಅಂಥವುಗಳು ಇದ್ದರೂ ಅಷ್ಟೇ ಇರದಿದ್ದರೂ ಅಷ್ಟೇ: ಏಕೆಂಗರೆ ಆ ಪರ್ವತಗಳ ಆಶ್ರಯದಲ್ಲಿ ಬೆಳೆಯುವಂಥ, ಬೆಳೆದಂಥ ಬೇವು—ಜಾಲಿಗಳೇ ಮೊದಲಾದ ವೃಕ್ಷಗಳು ಕೇವಲ ವೃಕ್ಷಗಳಾಗಿಯೇ ಉಳಿದಿರುವವು. ಅರ್ಥಾತ್ ಅವುಗಳು ಬಂಗಾರ-ಬೆಳ್ಳಿಯವುಗಳಾಗಿ ಪರಿವರ್ತನೆ ಹೊಂದಲಿಲ್ಲ. ಅದಕ್ಕಾಗಿಯೇ ನಾವು ಮಲಯಾಚಲದ ಬಗ್ಗೆ ಅತಿ ಹೆಮ್ಮೆಯಿಂದ ಹೇಳಿಕೊಳ್ಳುವೆವು. ಏಕೆಂದರೆ ಮಲಯಾ ಚಲವು ತನ್ನಲ್ಲಿಯ ಆಶ್ರಿತ ಬೇವು ಮೊದಲಾದ ವೃಕ್ಷಗಳಿಗೆಲ್ಲ ಸಮಾನ ದೃಷ್ಟಿಯಿಂದ ನೋಡುತ್ತದೆ. ಅಂದರೆ ಅಲ್ಲಿಯ ಯಾವುದೇ ವೃಕ್ಷದಲ್ಲಿ ಗಂಧದ ಪರಿಮಳವು ಬರುವದು. ಅದಕ್ಕಾಗಿ ಯಾವಾಗಲೂ ಲೋಕೋಪಯೋಗದ ಕಾರ್ಯದಲ್ಲಿ ತತ್ಪರನಾಗಿರುವಂಥ ಮಹಾನುಭಾವರ ಪ್ರಶಂಶೆಯನ್ನು ಮಾಡತಕ್ಕದ್ದು.

ಪರೋಪಕಾರ ಪದ್ಧತಿಯು ಮುಗಿಯಿತು.



# ಧೈರ್ಯ ಪ್ರಶಂಸೆ

ರತ್ನೈರ್ಮಹಾರ್ಘೇ ಸ್ತುತುಷುರ್ನ ದೇವಾ ನ ಭೇಜಿರೇ ಭೀಮ
ವಿಷ್ಣೇಣ ಭೀತಿಮ್।
ಸುಧಾಂ ವಿನಾನ ಪ್ರಯಯುರ್ವಿರಾಮಂ ನ ನಿಶ್ಚಿತಾರ್ಥಾ
ದ್ವಿರಮಂತಿ ಧೀರಾಃ ॥೮೧॥

ಸಮುದ್ರದ ಗರ್ಭದೊಳಗಡಗಿದಂಥ ಬಹು ಮೂಲ್ಯದ ರತ್ನಗಳನ್ನು ಪಡೆದುಕೊಂಡರೂ ದೇವತೆಗಳು ಸಂತುಷ್ಟರಾಗಲಿಲ್ಲ. ಅದರೊಳಗಿಂದ ಸಮುದ್ರದೊಳಗಿಂದ—ಹೊರಟ ಹಾಲಾಹಲ—ವಿಷಕ್ಕೂ—ಭಯ ಭೀತರಾಗಲಿಲ್ಲ. ಅಂದರೆ ಆಗಲೂ ಭೀತರಾಗದೆ ಸಮುದ್ರ ಮಥನ ಕಾರ್ಯವನ್ನು ಮುಂದುವರಿಸಿಯೇ ಇದ್ದರು. ಅಮೂಲ್ಯವಾದ ಅಮೃತವನ್ನು ಪಡೆಯುವ ವರೆಗೆ ಅವರು ತಮ್ಮ ಕಾರ್ಯವನ್ನು ಅವ್ಯಾಹತವಾಗಿ ಸಾಗಿಸಿ ಅಮೃತವು ದೊರೆತ ನಂತರವೇ ವಿಶ್ರಾಂತಿಯನ್ನು ಪಡೆದರು. ಇದರ ತಾತ್ಪರ್ಯ ವಿಷ್ಟೆ! ಮನುಷ್ಯನು ತನ್ನ ಗುರಿಯನ್ನು ಸಾಧಿಸುವಾಗ ಆಶೆ— ಆಮಿಷಗಳಿಗಾಗಲಿ, ಎರಡು ತೊಡರುಗಳಿಗಾಗಲಿ ಬಾಗದೆ ಮುಂದುವರಿಯತಕ್ಕದ್ದು.

ಕ್ವಚಿದ್ ಭೂಮೌ ಶಯ್ಯಾ ಕ್ವಚಿದಪಿ ಚ ಪರ್ಯಂಕ ಶಯನಃ
ಕ್ವಚಿಚ್ಛಾಕಾಹಾರ: ಕ್ವಚಿದಪಿ ಚ ಶಾಲ್ಯೋದನ ರುಚಿಃ।
ಕ್ವಚಿತ್ಕಂಥಾಧಾರೀ ಕ್ವಚಿದಾಪಿ ಚ ದಿವ್ಯಾಂಬರ ಧರೋ ॥೮೨॥

ಯಾವನೊಬ್ಬ ಮನುಷ್ಯನು ಯಾವುದೊಂದು ಕಾರ್ಯದಲ್ಲಿ ಕಾಯಾ ಮನಸಾ ತತ್ಪರನಾಗಿರುವಾಗ, ಆ ಸಮಯದಲ್ಲಿ ಬರುವಂಥ ಸುಖ-ದುಃಖಗಳತ್ತ ಆವನು ಗಮನವೀಯುವದೇ ಇಲ್ಲ. ಇಷ್ಟೇ ಅಲ್ಲ. ಅಂಥ ಪರಿಸ್ಥಿತಿಯಲ್ಲಿ ಆವನು ಕೆಲವು ಸಲ ನೆಲದ ಮೇಲೆಯೂ ಮತ್ತೆ ಕೆಲವು ಸಲ ಸುಪ್ಪ

ತ್ರಿಗೆಯ ಮೇಲೆಯೂ ಮಲಗುವನು. ಆಹಾರಕ್ಕಾಗಿ ಕೆಲವು ಸಲ ಸೊಪ್ಪು ಗಳನ್ನು ಉಪಯೋಗಿಸಿದರೆ ಮತ್ತೆ ಕೆಲವು ಸಲ ಅನ್ನವನ್ನು ಊಟ ಮಾಡು ವನು. ಮೈಮೇಲೆ ಹೊದೆದುಕೊಳ್ಳಲು ಒಮ್ಮೊಮ್ಮೆ ಹರಕು ಬಟ್ಟೆಗಳನ್ನು ಉಪಯೋಗಿಸಿದರೆ ಮತ್ತೆ ಕೆಲವು ಸಲ ದಿವ್ಯ ವಸ್ತ್ರಗಳನ್ನು ಧಾರಣ ಮಾಡುವನು.

ಐಶ್ವರ್ಯಸ್ಯ ವಿಭೂಷಣಂ ಸುಜನತಾ ಶೌರ್ಯಸ್ಯ ವಾಕ್
ಸಂಯಮೋ,
ಜ್ಞಾನಸ್ಯೋಪಶಮ: ಶ್ರುತಸ್ಯ ವಿನಯೋ ವಿತ್ತಸ್ಯ ಪಾತ್ರೇ ವ್ಯಯಃ।
ಅಕ್ರೋಧಸ್ತಪಸ: ಕ್ಷಮಾ ಪ್ರಭವಿತುರ್ಧರ್ಮಸ್ಯ ನಿರ್ವ್ಯಾಜತಾ—
ಸರ್ವೇಷಾಮಪಿ ಸರ್ವಕಾರಣ ಮಿದಂ ಶೀಲ ಪರಂ
ಭೂಷಣಮ್ ॥೮೩॥

ಸಜ್ಜನಿಕೆಯು ಐಶ್ವರ್ಯಕ್ಕೊಂದು ಭೂಷಣವಾಗಿದೆ. ವಾಕ್ ಸಂಯ ಮವು—ತನ್ನ ಜಂಬವನ್ನು ತಾನೇ ಕೊಚ್ಚಿಕೊಳ್ಳದಿರುವದು ಶೂರತನದ, ಶಾಂತಿಯು ಜ್ಞಾನದ, ವಿನಯವು ಶಾಸ್ತ್ರದ, ಯೋಗ್ಯವನ್ನರಿತು ದಾನವನ್ನೀ ಯುವದು ತಪಸ್ಸಿನ, ಕ್ಷಮಾ ಗುಣವು ಪ್ರಭುತ್ವದ, ಹಾಗು ನಿಷ್ಕಪಟತನವು ಧರ್ಮದ ಭೂಷಣಗಳಾಗಿರುವವು. ಆದರೆ ಶೀಲವು ಮೇಲೆ ಹೇಳಲಾಗಿರು ವಂಥ ಎಲ್ಲ ಗುಣಗಳಿಗೂ ಒಳ್ಳೆಯ ಭೂಷಣವಾಗಿರುವದು.

ನಿನ್ದನ್ತು ನೀತಿ ನಿಪುಣಾ ಯದಿವಾಸ್ತುವನ್ತು
ಲಕ್ಷ್ಮೀಃ ಸಮಾವಿಶತು ಗಚ್ಛತ ವಾ ಯಥೇಷ್ಟಮ್ ।
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ
ನ್ಯಾಯ್ಯಾತ್ಪಥಃ ಪ್ರವಿಚಲನ್ತಿ ಪದಂ ನ ಧೀರಾ: ॥೮೪॥

ನೀತಿ ನಿಪುಣರಾದಂಥ ಮಹಾನುಭಾವರು, ತಮ್ಮನ್ನು ಇತರರು ಹೊಗಳಲಿ ಇಲ್ಲವೆ ತೆಗಳಲಿ ಅವರತ್ತ ಗಮನವೀಯುವದೇ ಇಲ್ಲ. ಲಕ್ಷ್ಮಿಯು

ಅವರನ್ನು ಒಲಿಯಲಿ ಇಲ್ಲವೆ ಅವರನ್ನು ತ್ಯಜಿಸಲಿ ಹಾಗು ಮರಣವು ಅವರನ್ನು ಇಂದೇ ಅಪ್ಪಲಿ, ಇಲ್ಲವೆ ಯುಗಾಂತರದ ನಂತರ ಅಪ್ಪಲಿ ಅವರ ವನ್ನು ಲೆಕ್ಕಿಸುವದೊಇಲ್ಲ. ಹಾಗು ಧೀರ ಪುರುಷರಾದ ಅವರು ನ್ಯಾಯ ಮಾರ್ಗವನ್ನು ಬಿಟ್ಟು ಎಂದಿಗೂ ನಡೆಯುವದಿಲ್ಲ.

ಭಗ್ನಾ ಶಸ್ಯ ಕರಂಡ ಪೀಡಿತ ತನೋಂಲ್ಞಾನೇಂದ್ರಿಯಸ್ಯ ಕ್ಷುಧಾ
ಕೃತ್ವಾSSಖುರ್ವಿವಂ ಸ್ವಯಂ ನಿಪತಿತೋನಕ್ತಂ ಮುಖೇ ಭೋಗಿನಃ।
ತೃಪ್ತಸ್ತೈಪ್ಪಿಶಿತೇನ ಸತ್ವರಮಸೌ ತೇನೈವ ಯಾತ: ಪಥಾ
ಲೋಕಾ: ಪಶ್ಯತ್ ದೈವ ಮೇವ ಹಿ ನೃಣಾಂ ವೃದ್ಧೌ ಕ್ಷಯೇ
ಕಾರಣಂ ||೮೫||

ಒಂದು ಹಾವನ್ನು ಪೆಟ್ಟಿಗೆಯೊಳಗೆ ಹಾಕಿ ಭದ್ರವಾಗಿ ಮುಚ್ಚಿಟ್ಟಿದ್ದ ರಿಂದ ಅದು ತಿನ್ನಲು ಆಹಾರವಿಲ್ಲದೆಯೆ ಸಾಯುವ ಪರಿಸ್ಥಿತಿಗೆ ಬಂದಿತ್ತು. ಹಸಿವೆಯಿಂದಾಗಿ ಅದರ ಇಂದ್ರಿಯಗಳಂತೂ ಕ್ಷೀಣವಾಗಿ ಬಿಟ್ಟಿದ್ದವು. ಅಷ್ಟ ರಲ್ಲಿ ರಾತ್ರಿಯ ವೇಳೆಯೊಳಗೆ ಒಂದು ಇಲಿಯು ತನ್ನ ಆಹಾರವನ್ನು ಹುಡುಕಲೋಸುಗ ಪೆಟ್ಟಿಗೆಗೆ ಒಂದು ಛಿದ್ರವನ್ನು ಮಾಡಿ ಒಳಕ್ಕೆ ಪ್ರವೇ ಶಿಸಿತು. ಅಲ್ಲಿ ಆಹಾರವಂತೂ ಸಿಕ್ಕಲಿಲ್ಲ. ಆದರೆ ಹಸಿದು ಕುಳಿತಿದ್ದ ಹಾವಿಗೆ ತಾನೇ ಆಹಾರವಾಗಬೇಕಾಯಿತು. ಆಗ ಹಾವು ಇಲಿಯನ್ನು ತಿಂದು ಅದು ಒಳಗೆ ಬಂದ ಮಾರ್ಗದಿಂದಲೇ ಹೊರಗೆ ಹೋಯಿತು. ಪುರುಷರ ಬುದ್ಧಿ ಹಾಗು ನಾಶವು ದೈವದ ಮುಖಾಂತರವೇ ನಡೆಯುವದೆಂದು ನಾನು ಹೇಳಬಲ್ಲೆ.

ಪತಿ ತೋಪಿ ಕರಾಘಾತೈ ರೂತ್ಪತ ತ್ಯೇವ ಕಂದುಕ:
ಪ್ರಾಯೇಣ ಸಾಧು ವೃತ್ತಾನಾಮಸ್ಥಾಯಿನ್ಯೋ ವಿಪತ್ತಯ: ||೮೬|

ಕೈಯಿಂದ ಬಲವಾಗಿ ಪೃಥ್ವಿಗೆ ಎಸೆಯಲ್ಪಟ್ಟ ಚಂಡು, ಮತ್ತೆ ಮೇಲಕ್ಕೆ ಪುಟಿದು ಬರುವದು. ಹೀಗಾಗುವದು ಸ್ವಾಭಾವಿಕವೇ ಆಗಿದೆ. ಇದೇ ರೀತಿ ಯಾಗಿ ಒಳ್ಳೆಯ ಆಚರಣೆಯುಳ್ಳ ಮನುಷ್ಯನಿಗೆ ಬಂದಆಪತ್ತುಗಳು ಕೂಡ ಸ್ಥಿರವಾಗಿ ನಿಲ್ಲುವದಿಲ್ಲ.

ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾನ್ರಿಪು: |
ನಾಸ್ತ್ಯುದ್ಯಮಸಮೋ ಬಂಧುರ್ಯಂ ಕುತ್ವಾ ನಾವಶೀದತಿ ||೮೭||

ಆಲಸ್ಯವು ಮಾನವನ ಶರೀರದೊಳಗೆ ಮನೆಮಾಡಿಕೊಂಡಿರುವಂಥ ಒಂದು ಭಯಂಕರ ಶತ್ರುವಾಗಿರುವದು. ಮಾನವನಿಗೆ 'ಕೆಲಸ' ದಂತಹ ಬಂಧುವು ಬೇರೊಂದಿಲ್ಲ ವೆನ್ನಬಹುದು. ಇಷ್ಟೆ ಅಲ್ಲ. ಯಾವಾಗಲೂ ಕೆಲಸದಲ್ಲಿ ಮಗ್ನನಾಗಿರುವಂಥವನಿಗೆ ದು:ಖವೆಂಬುದು ಗೊತ್ತಿರುವದೇ ಇಲ್ಲ.

ಛಿನ್ನೋಽಪಿ ರೋಹತಿ ತರು: ಕ್ಷೀಣೋ ಪ್ಯುಪಚೀಯತೇ ಪುನಶ್ಚಂದ್ರ:|
ಇತಿ ವಿಮೃಶಂತ: ಸ್ತನ: ಸಂತಪ್ಯನ್ತೇ ನ ವಿಪ್ಲುತಾ ಲೋಕೇ ||೮೮||

ಕಡಿದು ಮಾಡಿದಂಥ ವೃಕ್ಷವು ಮತ್ತೆ ಚಿಗಿಯುತ್ತದೆ. ಚಂದ್ರ ಬಿಂಬವು ಕೂಡ ಕ್ಷೀಣಿಸಿದ್ದು ಮತ್ತೆ ಪೂರ್ಣವಾಗುವದು. ಇದನ್ನು ಅರಿತುಕೊಂಡ ಸಾಧು-ಸಂತರು ಈ ಸಂಸಾರದ ಜಂಜಡಗಳಿಂದ ಎಂದಿಗೂ ಸಂತ್ರಪ್ತರಾಗುವದಿಲ್ಲ. ಬಂದುದನ್ನು ಧೈರ್ಯದಿಂದ ಎದುರಿಸುತ್ತಾರೆ.

ಧೈರ್ಯ ಪ್ರಶಂಸೆ ಮುಗಿಯಿತು



# ದೈವ ಪ್ರಶಂಸೆ

ನೇತಾಯಸ್ಯ ಬೃಹಸ್ಪತಿ: ಪ್ರಹರಣಂ ವಜ್ರಂ ಸುರಾ: ಸೈನಿಕಾ:
ಸ್ವರ್ಗೋ ದುರ್ಗಮನುಗ್ರಹ: ಕಿಲ ಹರೇರೈರಾವತೋ ವಾರಣ:।
ಇತ್ಯೈಶ್ವರ್ಯ ಬಲಾನ್ವಿತೋಽಪಿ ಬಲಭಿದ್ಭಗ್ನ: ಪರೈ ಸಂಗರೇ
ತದ್ ವ್ಯಕ್ತ ವರ ಮೇವ ದೈವ ಶರಣಂ ಧಿಗ್ಧಿಗ್ವೃಥಾ ಪೌರುಷ ॥೮೯॥

ಇಂದ್ರನಿಗೆ ಯಾವುದರ ಕೊರತೆಯಿದೆ? ಅವನಿಗೆ ಬೃಹಸ್ಪತಿಯಂಥ ಮೇಧಾವಿಯು ದೊರೆತಿದ್ದಾನೆ. ಬೆಂಬಲವಾಗಿ ದೇವತೆಗಳಿದ್ದಾರೆ. ಐರಾವತ ವಿದೆ, ಶಸ್ತ್ರ, ವಜ್ರ—ವೈಡೂರ್ಯಗಳು ಇವೆಲ್ಲಕ್ಕೂ ಮಿಗಿಲಾಗಿ ಈಶ್ವರನ ಕೃಪೆಯಿದೆ. ಇಷ್ಟೆಲ್ಲ ಇದ್ದಾಗಲೂ ಬಲಿಷ್ಠನಾದ ಇಂದ್ರನು ಯುದ್ಧದೊಳಗೆ ಸೋಲುತ್ತಾನೆಂದ ಮೇಲೆ ಪುರುಷಾರ್ಥವು ವ್ಯರ್ಥವಾದುದೆಂದೇ ಹೇಳ ಬೇಕು. ಹಾಗು ದೈವಕ್ಕೆ ಮೊರೆ ಹೋಗುವದು ಯೋಗ್ಯವಾದ ಮಾರ್ಗವಾ ಗುವದು

ಕರ್ಮಾಯತ್ತಂ ಫಲಂ ಪುಂಸಾಂ ಬುದ್ಧಿ: ಕರ್ಮಾನು ಸಾರಿಣಿ।
ತಥಾಪಿ ಸುಧಿಯಾ ಭಾವ್ಯಂ ಸುವಿಚಾರ್ಯೈವ ಕುರ್ವತಾ ॥೯೦॥

ಒಂದು ವೇಳೆ ಪುರುಷನಿಗೆ ತಾನು ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವು ಸಿಕುತ್ತಿದ್ದರೆ, ಹಾಗು ಬುದ್ಧಿಯು ತನ್ನ ಕರ್ಮಾನುಸಾರ ವಾಗಿಯೇ ಮುಂದುವರಿಯುತ್ತಿದ್ದರೆ, ಆ ಬಗ್ಗೆ ಸರಿಯಾಗಿ ವಿಚಾರ ಮಾಡು ವದು ಬುದ್ಧಿವಂತರಾದವರಿಗೆ ಯೋಗ್ಯವಾದುದಾಗಿದೆ. ಹಾಗು ಯೋಗ್ಯ ವಿಚಾರ ಮಾಡಿ ಕಾರ್ಯವನ್ನು ಮಾಡಬಹುದಾಗಿದೆ.

ಖಲ್ವಾಟೋ ದಿವಸೇಶ್ವರಸ್ಯ ಕಿರಣೈ: ಸಂತಾಪಿತೇ ಮಸ್ತಕೇ
ಗಚ್ಛನ್ದೇಶ ಮನಾತಪಂ ವಿವಿಧವಶಾತ್ತಾಲಸ್ಯ ಮೂಲಂಗತ: ।

ತತ್ರಾಪ್ಯಸ್ಯ ಮಹಾಫಲೇನ ಪತತಾ ಭಗ್ನಂ ಸಶಬ್ದಂ ಶಿರ:
ಪ್ರಾಯೋಗಚ್ಛತಿ ಯತ್ರ ಭಾಗ್ಯ ರಹಿತ ಸ್ತತ್ರೈವ ಯಾಂತ್ಯಾ
ಪದಃ ||೯೧||

ಓರ್ವ ನಿರ್ಭಾಗ್ಯ ಪುರುಷನು ಬಿಸಿಲಿಗೆ ಮಸ್ತಕವು ಬಿಸಿಯಾಗುತ್ತ ದೆಂದು ಕಾಯುತ್ತದೆಂದು, ನೆರಳಿದ್ದ ಸ್ಥಾನವನ್ನು ಹುಡುಕುತ್ತ ದೈವಯೋಗ ದಿಂದ ಒಂದು ತಾಡವೃಕ್ಷದ ಕೆಳಗೆಬಂದು ನಿಂತುಕೊಂಡನು. ಅಲ್ಲಿಯೂ ಒಂದು ದೊಡ್ಡ ಫಲವು ಅವನ ತಲೆಯ ಮೇಲೆ ಬಿದ್ದು ತಲೆ ಒಡೆದು ಹೋಯಿತು. ಇದರ ತಾತ್ಪರ್ಯವಿಷ್ಟೆ: . ನಿರ್ಭಾಗ್ಯರಾದವರು ಎಲ್ಲಿಗೆ ಹೋದರೂ ಅವರಿಗೆ ಆಪತ್ತು ತಪ್ಪಿದ್ದಲ್ಲ.

ಶಶಿ ದಿವಾಕರ ಯೋರ್ಗ್ರ್ರ ಪೀಡನಂ ಗಜಭುಜಂಗ ಮಯೋರಪಿ
ಬಂಧನಂ|
ಮತಿ ಮತಾಶ್ಚ ವಿಯೋಕ್ಶ್ಯ ದರಿದ್ರತಾಂ ವಿಧಿರಹೋ ಬಲವಾನಿತಿ ಮೇ
ಮತಿ ||೯೨||

ರಾಹುವಿನಿಂದ ಸಂಕಟಕ್ಕೊಳಗಾಗುವ ಚಂದ್ರ– ಸೂರ್ಯ ಗ್ರಹ ಗಳನ್ನು; ಬಂಧನದಲ್ಲಿ ಸಿಲುಕಿ ನರಳುತ್ತಿರುವ ಆನೆ, ಹಾಗೂ ಹಾವುಗಳನ್ನು ಮತ್ತು ದಾರಿದ್ರ್ಯದಿಂದ ಬಳಲುತ್ತಿರುವ ಬುದ್ಧಿವಂತರನ್ನು ಕಂಡು, ಜಗತ್ತಿ ನೊಳಗೆ ದೈವವೇ ಬಲವತ್ತರವಾದುದು ಅದಕ್ಕಿಂತ ಬಲಶಾಲಿಯಾದುದು ಯಾವದೂ ಇಲ್ಲವೆಂಬುದು ನನಗೆ ಖಚಿತವಾಯಿತು.

ಸೃಜತಿ ತಾವದಶೇಷ ಗುಣಾಣಂಕ ಪುರುಷರತ್ನ ಮಲಂಕರಣಂ ಭುವಃ|
ತದಪಿ ತತ್ ಕ್ಷಣಭಂಗಿ ಕರೋತಿ ಚೇದಹಹ ಕಷ್ಟಮ ಪಂಡಿತತಾ–
ವಿಧೇ: ||೯೩||

ವಿಧಾತನು ಎಲ್ಲಕ್ಕೂ ಮೊದಲು ಪುರುಷ ಶ್ರೇಷ್ಠನಿಗೆ ಸರ್ವಗುಣಗಳ ಖಣಿಯನ್ನಾಗಿಯೂ, ಜಗತ್ತಿಗೆ ಅಲಂಕಾರ ಪ್ರಾಯನನ್ನಾಗಿಯೂ ನಿರ್ಮಿ

ಸುತ್ತಾನೆ. ಆದರೆ ಅವನ ಜೀವನವನ್ನು ಕ್ಷಣಭಂಗುವನ್ನಾಗಿ ಮಾಡುವನು. ಓಹ್! ವಿಧಿಯೆ! ಈವಿಷಯದಲ್ಲಿ ಎಷ್ಟೊಂದು ದೊಡ್ಡ ತಪ್ಪು ಮಾಡುತ್ತಿರುವನಲ್ಲ! ಉಳಿದೆಲ್ಲವನ್ನು ಧಾರಾಳವಾಗಿ ಮುಕ್ತಹಸ್ತದಿಂದ ಕೊಟ್ಟಂತೆ, ಜೀವನವನ್ನೂ ಒಂದು ವೇಳೆ ಕೊಟ್ಟುಬಿಟ್ಟಿದ್ದರೆ ?

ಪತ್ರಂ ನೈವಯದಾ ಕರೀರವಿಟಪೇ ದೋಷೋ ವಸಂತಸ್ಯ ಕಿಂ
ನೋಲೂಽಪ್ಯವ ಲೋಕತೆ ಯದಿ ದಿವಾ ಸೂರ್ಯಸ್ಯ ಕಿಂ ದೂಷಣಮ್।
ಧಾರಾನೈವ ಪತಾಂತಿ ಚಾತಕ ಮುಖೇ ಮೇಘಸ್ಯ ಕಿಂ ದೂಷಣಂ,
ಯತ್ಪೂರ್ವ ವಿಧಿನಾ ಲಲಾಟೆ ಲಿಖಿತಂ ತನ್ಮಾರ್ಜಿತುಂಕಃ ಕ್ಷಮಃ॥೯॥

ಕರೀರ ವೃಕ್ಷಕ್ಕೆ ಎಲೆಗಳೆ ಇರುವದಿಲ್ಲವೆಂದಾಗ ಅದರಲ್ಲಿ ವಸಂತ ಮಾಸದ ದೋಷವೇನಿದೆ? ಹಗಲು ಹೊತ್ತಿನಲ್ಲಿ ಗೂಬೆಗೆ ಕಣ್ಣು ಕಾಣಿಸದಿದ್ದರೆ ಅದು ಸೂರ್ಯನ ತಪ್ಪೆ ? ಅದಕ್ಕಾಗಿ ಸೂರ್ಯನನ್ನು ದೂಷಿಸಬೇಕೆ? ಚಾತಕ ಪಕ್ಷಿಯ ಮುಖದೊಳಗೆ ಜಲ ಬಿಂದುಗಳು ಬೀಳದೆ ಹೋದರೆ ಅದರಲ್ಲಿ ಮೇಘಗಳ ದೋಷವೇನು? ಇವೆಲ್ಲವುಗಳಿಂದ ಒಂದು ಮಾತು ಸಿದ್ಧವಾಗುವದು. ಅದೇನಂದರೆ: ಮೊಟ್ಟ ಮೊದಲು ವಿಧಾತನು ಲಲಾಟದೊಳಗೆ ಏನನ್ನು ಬರೆದಿರುವನೋ ಅದನ್ನು ಅಳುಕಿಸುವದು ಇಲ್ಲವೆ ತೊಡೆದು ಹಾಕುವದು ಯಾರಿಂದಲೂ ಸಾಧ್ಯವಿಲ್ಲ.

ದೈವ ಪ್ರಶಂಸೆ ಮುಗಿಯಿತು.



# ಕರ್ಮ ಪ್ರಶಂಸೆ

ನಮಸ್ಯಾಮೋ ದೇವಾನ್ನನು ಹತವಿಧೇಸ್ತೇಽಪಿ ವಶಗಾ
ವಿಧಿರ್ವಂದ್ಯ ಸೋಽಪಿ ಪ್ರತಿ ನಿಯತಕ ರ್ಮೈಕ ಫಲದಃ ।
ಫಲಂ ಕರ್ಮಾಯತ್ತಂ ಕಿಂ ಮರಗಣೈಃ ಕಿಂಚ ವಿಂಧಿನಾ
ನಮಸ್ತತ್ಕರ್ಮಭ್ಯೋ ವಿಧಿರಪಿ ನಯೇಭ್ಯಃ ಪ್ರಭವತಿ ||೯೫||

ನಾವು ದೇವತೆಗಳಿಗೆ ನಮಸ್ಕಾರ ಮಾಡುತ್ತೇವೆ. ಆದರೆ ಅವರು ಕೂಡ ವಿಧಾತನ-ಭಗವಂತನ-ಅಧೀನದಲ್ಲಿರುತ್ತಾರೆ. ನಾವು ವಿಧಿಗೆ ನಮಸ್ಕಾರ ಮಾಡುತ್ತೇವೆ, ಆದರೆ ವಿಧಾತನು ನಮ್ಮ ಕರ್ಮಾನುಸಾರವಾಗಿಯೇ ಫಲಗಳನ್ನು ಕೊಡುತ್ತಾನೆ. ಅಂದರೆ ಅದರಲ್ಲಿಯೂ ಹೇಳಿಕೊಳ್ಳುವಂತಹ ವಿಶೇಷವೇನೂ ಇಲ್ಲ. ನಮ್ಮ ಕರ್ಮಾನುಸಾರವಾಗಿಯೇ ನಮಗೆ ಫಲಗಳು ದೊರೆಯುತ್ತವೆಂದಾಗ ದೇವತೆಗಳು ಹಾಗೂ ವಿಧಿಯೊಂದಿಗೆ ನಮ್ಮ ಸಂಬಂಧ ವೇನು ? ಆದಕ್ಕಾಗಿ ನಾವು ಕರ್ಮಕ್ಕೆ ವಂದಿಸುತ್ತೇವೆ. ಅರ್ಥಾತ್ ವಿಧಾತನ ಅಧಿಕಾರದ ಕಕ್ಷೆಯಿಂದ ಹೊರಗಿರುವಂಥ ಕರ್ಮವನ್ನೇ ನಾವು ಪ್ರಧಾನವಾದುದೆಂದು ತಿಳಿಯುತ್ತೇವೆ.

ಬ್ರಹ್ಮಾಯೇನಕುಲಾಲವನ್ನಿಯಮಿತೋ ಬ್ರಹ್ಮಾಂಡ ಭಾಂಡೋದರೇ
ವಿಷ್ಣುರ್ಯೇನ ದಶಾವತಾರಗಹನೇ ಕ್ಷಿಪ್ತೋ ಮಹಾಸಂಕಟೇ ।
ರುದ್ರೋ ಏನ ಕಪಾಲಪಾಣಿ ಪುಟಕೇ ಭಿಕ್ಷಾಟನಂ ಕಾರಿತಃ
ಸೂರ್ಯೋಭ್ರಾಮ್ಯತಿ ನಿತ್ಯಮೇವ ಗಗನೇ ತಸ್ಮೈನಮಃ
ಕರ್ಮಣೆ ||೯೬||

ಬ್ರಹ್ಮನಿಗೆ ಬ್ರಹ್ಮಾಂಡ ರೂಪದ ಭಾಂಡೆಯನ್ನು-ಪಾತ್ರೆಯನ್ನು-ತಯಾರಿಸಲೋಸುಗ ಅರ್ಥಾತ್ ಸೃಷ್ಟಿಯನ್ನು ರಚಿಸಲೋಸುಗ ಕುಂಬಾರ

ಸಂತೆ ಸಿಯುಮಿಸಿರುವ, ವಿಷ್ಣುವಿಗೆ ಹತ್ತು ಅವತಾರದ ರೂಪದ ಹೆಚ್ಚಿನ ಸಂಕಟದಲ್ಲಿ ಸಿಲುಕಿಸಿದಂಥ, ಶಿವನಿಗೆ ಕೈಲಿ ಕಪಾಲವನ್ನು ಕೊಟ್ಟು ಭಿಕ್ಷೆ ಬೇಡಲು ಹಚ್ಚಿದ ಹಾಗು ಸೂರ್ಯನಿಗೆ ಗಗನ ಮಂಡಲದಲ್ಲಿ ಭ್ರಮಣ ಮಾಡಲು ಪ್ರೇರೇಪಿಸಿದ ಆ ಕರ್ಮಕ್ಕೆ ನಾವು ನಮಸ್ಕಾರ ಮಾಡುತ್ತೇವೆ.

ನೈವಾಕೃತಿ ಫಲತಿ ನೈವ ಕುಲಂ ನ ಶೀಲಂ
ವಿದ್ಯಾಽಪಿ ನೈವ ನ ಚ ಯತ್ನ ಕೃತಾಪಿ ಸೇವಾ ।
ಭಾಗ್ಯಾನಿ ಪೂರ್ವತಪಸಾ ಖಲು ಸಂಚಿತಾನಿ
ಕಾಲೇ ಫಲಂತಿ ಪುರುಷಸ್ಯ ಯಥೈವ ವೃಕ್ಷಾಃ ॥೯೭॥

ಮನುಷ್ಯನಿಗೆ ಕೇವಲ ಸುಂದರಾಕೃತಿಯು ಫಲವನ್ನು ಕೊಡಲಾರದು. ಇಷ್ಟೇ ಅಲ್ಲ, ಉತ್ತಮ ಕುಲ, ಶೀಲ, ವಿದ್ಯೆ, ಹಾಗು ಮಹಾಪ್ರಯಾಸದಿಂದ ಪೂರ್ಣಗೈದ ಸೇವೆಯೂ ಫಲವನ್ನು ಕೊಡಲಾರದು. ಆದರೆ ಪೂರ್ವ ಜನ್ಮದಲ್ಲಿ ಮಾಡಿದ ತಪಸ್ಸಿನಿಂದ ಸಂಗ್ರಹಿತವಾದ ಭಾಗ್ಯವೇ ಮಾನವನಿಗೆ ವೃಕ್ಷಮೋಪಾದಿಯಲ್ಲಿ ಆಗಾಗ ಫಲಗಳನ್ನು ಕೊಡುತ್ತಿರುತ್ತದೆ.

ವನೆ ರಣೆಶತ್ರ ಜಲಾಗ್ನಿಮಧ್ಯೆ ಮಹಾರ್ಣವೇ ಪರ್ವತ ಮಸ್ತಕೇ ವಾ।
ಸುಪ್ತಂ ಪ್ರಮತ್ತಂ ವಿಷಮಸ್ಥಿತಂ ವಾರಕ್ಷಂತಿ ಪುಣ್ಯಾನಿ ಪುರಾ
ಕೃತಾನಿ ॥೯೮॥

ಪುರುಷನು ಪೂರ್ವಜನ್ಮದಲ್ಲಿ ಮಾಡಿದಂಥ ಪುಣ್ಯವು ಅವನನ್ನು ಅರಣ್ಯದೊಳಗೆ, ಯುದ್ಧರಂಗದಲ್ಲಿ ಶತೃಗಳ ಮಧ್ಯದಲ್ಲಿ, ಅಪಾರ ಜಲರಾಶಿ ಯೊಳಗೆ ಹಾಗು ಅಗ್ನಿಯ ಹೊಡೆತಕ್ಕ ಸಿಲುಕಿದಾಗ, ಅಜಾಗರೂಕತೆಯಿಂದಿ ರುವಾಗ ಹಾಗು ವಿಷಮ ಪರಿಸ್ಥಿತಿಯಲ್ಲಿರುವಾಗ ರಕ್ಷಿಸುವದು.

ಯಾ ಸಾಧೂಶ್ಚ ಖಲಾಂಕರೋತಿ ವಿದುಷೋ ಮೂರ್ಖಾನ್ಹಿತಾ
ದ್ವೇಷಿಣಃ
ಪ್ರತ್ಯಕ್ಷಂ ಕುರುತೇ ಪರೋಕ್ಷ ಮಮೃತಂ ಹಾಲಾಹಲಂ ತಕ್ಷಣಾತ್

ತಾಮಾರಾಧಯ ಸತ್ಕ್ರಿಯಾಂ ಭಗವತಿಂ ಭೋಕ್ತುಂ ಫಲಂ
ವಾಂಛಿತಂ
ಹೇ ಸಾಧೋ ವ್ಯಸನೈರ್ಗುಣೇಷು ವಿಪುಲೇಷ್ವಾಸ್ಥಾಂ ವೃಥಾಮಾ
ಕೃಥಾ : ||೯೯||

ಓ ಸಾಧುವರ್ಯರೇ! ನಿಮಗೆ ಬೇಕಾಗಿರುವಂಥ—ನಿಮ್ಮ ಮನವು ಬಯಸಿದಂಥ—ಫಲವನ್ನು ಪಡೆಯಲೋಸುಗ ಸತ್ಕ್ರಿಯಾ ರೂಪದ ಭಗವತಿಯ ಆರಾಧನೆಯನ್ನು ಮಾಡಿರಿ. ನೀವು ಹಾಗೆ ಮಾಡಿದ್ದಾದರೆ ಒಂದೇ ಒಂದು ಕ್ಷಣದಲ್ಲಿ ದುಷ್ಟನಿದ್ದವನು ಸಜ್ಜನನಾಗುವನು. ಮೂರ್ಖನು ಪಂಡಿತನಾಗುವನು. ಶತೃಗಳು ಮಿತ್ರರಾಗುವರು. ಪರೋಕ್ಷವು ಪ್ರತ್ಯಕ್ಷವಾಗುವದು. ಅರ್ಥಾತ್ ಗುಪ್ತವಾಗಿದ್ದಂಥದು ಪ್ರಕಟವಾಗುವದು. ಹಾಲಾಹಲದಂಥ ವಿಷವು ಕೂಡ ಅಮೃತವಾಗುವದು. ಅದಕ್ಕಾಗಿ ಬಹಳಷ್ಟು ಗುಣಗಳ ಸಾಧನೆಯಲ್ಲಿ ವ್ಯರ್ಥವಾಗಿ ಹಟ ಮಾಡಬೇಡಿರಿ.

ಗುಣವದ ಗುಣವದ್ವಾ ಕುರ್ವತಾ ಕಾರ್ಯಮಾದೌ—
ಪರಿಣತಿ ರವ ಧಾರ್ಯಾ ಯತ್ನ ತಃ ಪಂಡಿತೇನ।
ಅತಿ ರಭಸ ಕೃತಾನಾಂ ಕರ್ಮಣಾಮಾ ವಿಪತ್ತೇ—
ರ್ಭವತಿ ಹೃದಯುಶಹಿ ದಲ್ಯ ತುಲ್ಯೋ ವಿಪಾಕ : ೧೦೦ ||

ಯಾವುದೊಂದು ಕಾರ್ಯವನ್ನು ಪ್ರಾರಂಭಿಸುವ ಮೊದಲು—ಅದು ಒಳ್ಳೆಯದೇ ಇರಲಿ, ಕೆಟ್ಟದೇ ಇರಲಿ—ಮೊದಲು ಅದರ ಪರಿಣಾಮವನ್ನು ಸಂಪೂರ್ಣವಾಗಿ ವಿಚಾರ ಮಾಡುವದು ಪಂಡಿತರ ಕರ್ತವ್ಯವಾಗಿದೆ. ಏಕೆಂದರೆ ಅವಸರದಿಂದ ಕಾರ್ಯವನ್ನು ಪ್ರಾರಂಭಿಸಿದರೆ ಅದರಿಂದಾಗುವ ಕರ್ಮಫಲವು ಅವನ ಹೃದಯವನ್ನು ಸಾಯುವವರೆಗೂ ಕೊರೆಯುತ್ತಿರುತ್ತಿದೆ ದುಃಖಕ್ಕೀಡು ಮಾಡುತ್ತದೆ. ಅದಕ್ಕಾಗಿ ಕಾರ್ಯವನ್ನು ಪ್ರಾರಂಭಿಸುವ ಮೊದಲು ಪೂರ್ಣ ವಿಚಾರಮಾಡಿ ಕೊನೆಯ ವರೆಗೂ ದುಃಖಪಡುವದನ್ನು ತಪ್ಪಿಸಿಕೊಳ್ಳುವದೊಳ್ಳೆಯದು.

ಸ್ಥಾಲ್ಯಾಂ ವೈದೂರ್ಯ ಮಯ್ಯಾಂ ಪಚತಿ ಚಲಶುನಂ ಚಾಂದನೈ
ರಿಂಧನಾದ್ಯೈಃ
ಸೌವರ್ಣೈರ್ಲಾಂಗಲಾ ಗ್ರೈರ್ವಿಲಿಖತಿ ಮಸುಧಾಮರ್ಕ ಮೂಲಸ್ಯ
ಹೇತೋ:|
ಛಿತ್ವಾ ಕರ್ಪೂರ ಖಂಡಾನ್ ವೃತಿ ಮಿಹ ಕುರುತೇ ಕೋದ್ರವಾಣಾ
ಸಮನ್ತಾತ್
ಪ್ರಾಪ್ಯೈವಾಂ ಕರ್ಮಭೂಮಿಂ ಚರತಿ ನ ಮನುಜೋ ಯಸ್ತಪೋ
ಮಂದಭಾಗ್ಯಃ ||೧೦೧||

ಈ ಕರ್ಮ ಭೂಮಿಯನ್ನು ಪಡೆದಂಥ ಮಂದ ಭಾಗ್ಯನು ಅರ್ಥಾತ್ ಈ ಜಗತ್ತಿನೊಳಗೆ ಹುಟ್ಟಿ ಬಂದ ನಂತರ ತಪವನ್ನಾಚರಿಸದಂಥವನು, ಬಹು ಮುಖ್ಯವಾದ ಮಣಿಗಳಿಂದ ರಚಿತವಾದ ಪಾತ್ರೆಯೊಳಗೆ ಬೆಳ್ಳುಳ್ಳಿಯನ್ನು ಹಾಕಿ ಗಂಧದ ಕಟ್ಟಿಗೆಯಿಂದ ಅವುಗಳನ್ನು ಬೇಯಿಸಿದಂತೆ, ಹಾಗು ಅರ್ಕ ವೃಕ್ಷದ ಬೇರನ್ನು ಪಡೆಯಲೋಸುಗ ಬಂಗಾರದ ನೇಗಿಲದಿಂದ ಭೂಮಿಯನ್ನು ಹರಗುವಂತಾಗುವದು. ಅಂದರೆ ಅವನು ತನ್ನ ಅಮೂಲ್ಯವಾದ ವೇಳೆಯನ್ನು, ಜೀವನವನ್ನು ಕೆಲಸಕ್ಕೆ ಬಾರದ ವಸ್ತುಗಳಿಗಾಗಿ ಹಾಳು ಮಾಡಿದಂತಾಗುವದು. ಅದಕ್ಕಾಗಿ ಮಾನವ ಜನ್ಮದಲ್ಲಿ ಹುಟ್ಟಿ ಬಂದ ಮೇಲೆ ಸಾರಾಸಾರ ವಿಚಾರ ಮಾಡಿ ಯಾವಾಗಲೂ ಒಳ್ಳೆಯ ಕಾರ್ಯಗಳಲ್ಲಿಯೇ ಮನಸ್ಸು ಹಾಕಬೇಕು.

ಮಜ್ಜತ್ವಂಭ್ಯಾಸಿ ಯಾತು ಮೇರು ಶಿಖರಂ ಶತ್ರುಂ ಜಯ ತ್ವಾಹವೇ
ವಾಣಿಜ್ಯಂ ಕೃಷಿ ಸೇವನಾದಿ ಸಕಲಾ ವಿದ್ಯಾಃ ಕಲಾ: ಶಿಕ್ಷತು|
ಆಕಾಶಂ ವಿಪುಲಂ ಪ್ರಯಾತು ಖಗವತ್ಕೃತ್ವಾ ಪ್ರಯತ್ನಂ ಪರಂ
ನಾಭಾವ್ಯಂ ಭವತೀಹ ಕರ್ಮವಶಾತೋ ಭಾವ್ಯಸ್ಯ ನಾಶ:
ಕೃತ: ||೧೦೨||

ಮನುಷ್ಯನು ನೀರೊಳಗೆ ಮುಳುಗು ಹಾಕಲಿ ಇಲ್ಲವೆ ಮೇರು ಪರ್ವತದ ಶಿಖರದ ಮೇಲೆ ಹೋಗಲಿ, ರಣ ರಂಗದಲ್ಲಿ ವೈರಿಯನ್ನು ಗೆಲ್ಲಲಿ,

ವ್ಯಾಪಾರ, ಕೃಷಿ ಹಾಗು ಸೇವಾ ಧರ್ಮಗಳನ್ನು ಕಲಿತುಕೊಳ್ಳಲಿ ಇಲ್ಲವೆ ಬಹಳಷ್ಟು ಪ್ರಯತ್ನ ಮಾಡಿ ಪಕ್ಷಿಯಂತೆ ಆಕಾಶದೊಳಗೆ ಹಾರಾಡುವದನ್ನು ಕಲಿತುಕೊಳ್ಳಲಿ ಆದರೆ ಅವನಿಗೆ ಆಗಲಾರದಂಥದನ್ನು ಮಾಡಿ ತೋರಿಸುವದು ಮಾತ್ರ ಎಂದಿಗೂ ಸಾಧ್ಯವಾಗುವದಿಲ್ಲ. ಅರ್ಥಾತ್ ಕರ್ಮ ಫಲವನ್ನು ತಪ್ಪಿಸುವದು ಆಗುವದಿಲ್ಲ. ಆಗಬೇಕಾದುದು ಆಗಿಯೇ ಬಿಡುವದು.

ಭೀಮಂ ವನಂ ಭವತಿ ತಸ್ಯ ಪುರಂ ಪ್ರಧಾನಂ
ಸರ್ವೋ ಜನಃ ಸುಜನತಾ ಮುಪಯಾತಿ ತಸ್ಯ।
ಕುತ್ಸ್ನಾ ಚ ಭೂರ್ಭವತಿ ಸನ್ನಿಧಿ ರತ್ನ ಪೂರ್ಣಾ
ಯಸ್ಯಾಸ್ತಿ ಪೂರ್ವ ಸುಕೃತಂ ವಿಪುಲಂ ನರಸ್ಯ ||೧೦೩||

ಪೂರ್ವ ಜನ್ಮದಲ್ಲಿ ಗಳಿಸಿದಂಥ ಪುಣ್ಯವು ಯಾವನಲ್ಲಿ ಬಹಳಷ್ಟು ಸಂಗ್ರಹವಾಗಿರುವದೋ ಅವನಿಗೆ ಕಾಡಾರಣ್ಯವು ಕೂಡ ದಟ್ಟ ಜನವಸತಿಯುಳ್ಳ ರಾಜಧಾನಿಯಂತಾಗುವದು. ಎಂಥವರೂ ಅವನಿಗೆ ಮಿತ್ರರಾಗುವರು. ಇಷ್ಟೇ ಅಲ್ಲ. ಇಡಿಯ ಜಗತ್ತೇ ಅವನ ಪಾಲಿಗೆ ಬಹು ಮೂಲ್ಯ ರತ್ನಗಳಿಂದ, ನಿಧಿಯಿಂದ ತುಂಬಿದಂತಾಗುವದು.

ಕರ್ಮ ಪ್ರಶಂಸೆ ಮುಗಿಯಿತು.



# ಪ್ರತ್ಯಂತರ ಶ್ಲೋಕಗಳು

ಕೋ ಲಾಭೋ ಗುಣ ಸಂಗಮ: ಕಿಂ ಸುಖಂ ಪ್ರಾಜ್ಞೇ ತರೈ:
ಸಂಗತಿ:
ಕಾ ಹಾನಿ: ಸಮಯ ಚ್ಯುತಿರ್ನಿ ಪುಣತಾ ಕಾ ಧರ್ಮತತ್ವೇ ರತಿ: |
ಕ: ಶೂರೋ ವಿಜಿತೇಂದ್ರಿಯ: ಪ್ರಿಯ ತಮಾ ಕಾsನು ವ್ರತಾ ಕಿಂ
ಧನಂ
ವಿದ್ಯಾ ಕಿಂ ಸುಖಂ ಪ್ರವಾಸ ಗಮನಂ ರಾಜ್ಯಂ ಕಿ ಮಾಜ್ಞಾ
ಫಲಮ್ ||೧೦೪||

ಲಾಭವೆಂದರೇನು? ಸದ್ಗುಣಿಗಳ ಸಹವಾಸ. ದು:ಖವೆಂದರೇನು? ಮೂರ್ಖರ ಸಹವಾಸ, ಹಾನಿ ಏನಿದೆ? ಸಮಯವನ್ನು ಹಾಳು ಮಾಡುವದು, ನಿಪುಣತೆ ಎಂದರೇನು? ಧರ್ಮದೊಳಗೆ ಆಸಕ್ತಿ ವಹಿಸುವದು, ವೀರನು ಯಾವನಿದ್ದಾನೆ? ಇಂದ್ರಿಯಗಳನ್ನು ತನ್ನ ವಶದಲ್ಲಿರಿಸಿಕೊಂಡವನಿಗೆ, ಪ್ರಿಯತಮೆಯು ಯಾರು? ಪತಿವ್ರತೆಯಾಗಿದ್ದವಳಿಗೆ ಹಣವೆಂದರೇನು? ವಿದ್ಯೆ ಇದ್ದವನಿಗೆ ಸುಖದ ಚಿಂತೆ ಏತಕ್ಕೆ? ಪರದೇಶಕ್ಕೆ ಹೋಗದಿರುವಾಗ ರಾಜ್ಯವೇನು? ತನ್ನ ಆಜ್ಞೆಯನ್ನು ನಡೆಯಿಸುವದು.

ಮಾಲತಿ ಕುಸುಮಸ್ಯೇವ ದ್ವೇ ಗತಿ ಮನಸ್ವಿನ: |
ಮೂರ್ಧ್ನಿ ವಾ ಸರ್ವಲೋಕಸ್ಯ ಶೀರ್ಯತೇ ವನ ಏವ ವಾ ||೧೦೫||

ವೀರ ಪುರುಷರು ಮಾಲತೀ ಪುಷ್ಪಗಳಂತೆ ಎರಡೇ ಗತಿಯುವರಾಗಿರುವರು. ಅಂದರೆ ಅವು ಎಲ್ಲ ಜನರ ಮಸ್ತಕ ಮೇಲಿರುವದು ಎಲ್ಲರ ಆದರಾಭಿಮಾನಗಳಿಗೆ ಪಾತ್ರರಾಗುವದು—ಅಥವ ಅರಣ್ಯದೊಳಗೆ ಅರಳಿ ಅಲ್ಲಿಯೇ ಬಾಡಿ, ಒಣಗಿ ಉದುರಿ ಹೋ:ಗುವದು. ಅಂದರೆ ಅರಣ್ಯದಲ್ಲಿಯೇ ಇದ್ದು ಅಲ್ಲಿಯೇ ಶರೀರ ತ್ಯಾಗ ಮಾಡುವದು.

ಅಪ್ರಿಯ ವಚನ ದರಿದ್ರೈ: ಪ್ರಿಯ ವಚನಾಢ್ಯೈಃ ಸ್ವದಾರ ಪರಿತುಷ್ಟೈ: ।
ಪರ ಪರಿವಾದ ನಿವೃತ್ತೈ: ಕ್ವಚಿತ್ಕ್ವಚಿನ್ಮಂಡಿತಾ ವಸುಧಾ ॥೧೦೬॥

ಮಧುರವಾಣಿಯ ಭಾಂಡಾರವಿರುವದು, ಅಪ್ರಿಯ ಮಾತುಗಳ ದಾರಿದ್ರ್ಯವಿದ್ದವರು ಅರ್ಥಾತ್ ಅಪ್ರಿಯ ವಚನಗಳನ್ನು ಎಂದೂ ಆಡದಂಥವರು ತನ್ನ ಹೆಂಡತಿಯೊಂದಿಗೆ ಪ್ರೀತಿಯಿಂದ ಇರುವಂಥವರು ಹಾಗು ಎರಡನೇಯವರ ನಿಂದೆಯನ್ನು ಕನಸಿನಲ್ಲಿಯೂ ಮಾಡದಂಥ ಪುರುಷರು ಈ ಪೃಥ್ವಿಯೊಳಗೆ ಎಲ್ಲಿಯೋ ಒಬ್ಬೊಬ್ಬರು ಶೋಭಿಸುತ್ತಾರೆಯೇ ವಿನಾ ಎಲ್ಲಕಡೆಗೂ ಅಂಥವರು ಸಿಕ್ಕುವದಿಲ್ಲ.

ಕದರ್ಥಿ ತಸ್ಯಾಪಿ ಹಿ ಧೈರ್ಯವೃತ್ತೇರ್ನಶಕ್ಯತೇ ಧೈರ್ಯಗುಣ:
ಪ್ರಮಾಷ್ಟುಂ।
ಅಧೋಮುಖಸ್ಯಾಪಿ ಕೃತಸ್ಯ ವಹ್ನೇರ್ನಾಧಃ ಶಿಖಾ ಯಾತಿ
ಕದಾಚಿದೇವ ॥೧೦೭॥

ಧೈರ್ಯಶಾಲಿಗಳಾದ ಪುರುಷರು ಎಂತಹ ಸಂಕಟ ಪರಿಸ್ಥಿತಿಯೊಳಗೆ ಸಿಲುಕಿಕೊಂಡಿದ್ದರೂ ಅವರಲ್ಲಿಯ ಧೀರತೆಯು-ಧೈರ್ಯವು-ಎಂದೆಂದಿಗೂ ನಷ್ಟವಾಗಲಾರದು. ಏಕೆಂದರೆ ಪ್ರಜ್ವಲಿಸುತ್ತಿರುವ ಅಗ್ನಿಯನ್ನು ಎಷ್ಟು ಸಲ ತಿರುವಿ ಹಾಕಿದರು ಜ್ವಾಲೆಯು ಮತ್ತೆ ಮೇಲಕ್ಕೇಳುವದೇ ವಿನಾ ಕೆಳಕ್ಕಿಳಿಯುವದಿಲ್ಲ.

ಕಾಂತಾಕಟಾಕ್ಷ ವಿಶಿಖಾ ನ ದಹಂತಿ ಯಸ್ಯ
ಚಿತ್ತಂ ನ ನಿರ್ದಹತಿ ಕೋಪಕೃಶಾನುತಾಪಃ।
ಕರ್ಷಂತಿ ಭೂರಿ ವಿಷಯಾಶ್ಚ ನ ಲೋಭಪಾಶೌ
ಲೋಕತ್ರಯಂ ಜಯತಿ ಕೃಷ್ಣಮಿದಂ ಸ ಧೀರಃ ॥೧೦೮॥

ಸ್ತ್ರೀಯರ, ಬಾಣರೂಪದ ಕಟಾಕ್ಷವು ಯಾವನ ಹೃದಯವನ್ನು ಛೇದಿಸುವದಿಲ್ಲವೋ ಅಂಥ ಧೈರ್ಯಶಾಲಿಯಾದ ಪುರುಷನು ಮೂರು ಲೋಕಗಳನ್ನೇ ಜಯಿಸಬಲ್ಲನು. ಇಷ್ಟೇ ಅಲ್ಲ. ಇವನಿಗೆ ಚಿತ್ತವು ಸಿಟ್ಟೆಂಬ ಬೆಂಕಿಯಲ್ಲಿ ಸುಟ್ಟು ಹೋಗುವದಿಲ್ಲ. ಹಾಗು ಅವನ ಮನವು ವಿಷಯ ಲಾಲಸೆಯ ಜಂಜಡದತ್ತ ಹೊರಳುವದೇ ಇಲ್ಲ. ಇವು ಕೂಡ ತ್ರೈಲೋಕ್ಯ ವೀರನ ಲಕ್ಷಣಗಳಾಗಿವೆ.

ಏಕೇನಾಪಿ ಹಿ ಶೂರೇಣ ಪಾದಾಕ್ರಾಂತಂ ಮಹೀತಲಂ ।
ಕ್ರಿಯತೇ ಭಾಸ್ಕರಣೇವ ಪರಿಸ್ಫುರಿತ ತೇಜಸಾ ॥೧೦೯॥

ಸೂರ್ಯನು ತನ್ನ ದೇದಿಪ್ಯಮಾನವಾದ ತೇಜದಿಂದ ಇಡಿಯ ಪೃಥ್ವಿಯನ್ನು ಯಾವ ರೀತಿಯಿಂದ ಬೆಳಗುವನೋ ಅದೇ ರೀತಿಯಿಂದ ಓರ್ವ

ಶೂರನು ತನ್ನ ಪರಾಕ್ರಮದಿಂದಇಡಿಯ ಪೃಥ್ವಿಯನ್ನು ತನ್ನ ಕಾಲಕೆಳಗೆ ಇರಿಸಿಕೊಳ್ಳುವನು.

ವಹ್ನಿ ತಸ್ಯ ಜಲಾಯತೇ ಜಲನಿಧಿಃ ಕುಲ್ಯಾಯತೇ ತತ್‌ಕ್ಷಣಾ-
ನ್ಮೇರು: ಸ್ವಲ್ಪ ಶಿಲಾಯತೇ ಮೃಗಪತಿ: ಸದ್ಯ: ಕುರಂಗಾಯತೇ ।
ವ್ಯಾಲೋ ಮಾಲ್ಯಗುಣಾಯತೇ ವಿಷರಸ: ಪೀಯೂಷ ವರ್ಷಾಯತೇ
ಯಸ್ಯಾಂಗೇಽಖಿಲಲೋಕ ವಲ್ಲಭತಮಂ ಶೀಲಂ
ಸಮುನ್ಮಿಲತಿ ॥೧೧೦॥

ಇಡಿಯ ಜಗತ್ತನ್ನೇ ಮೋಹಿಸುವಂಥ ಶೀಲವು ಯಾವ ಪುರುಷನ ಅಂಗದಲ್ಲಿ ಸಂಪೂರ್ಣವಾಗಿ ವ್ಯಾಪಿಸಿರುವದೋ ಅಂಥವನಿಗೆ ಅಗ್ನಿಯು ಶೀತಲವಾಗಿರುವದು. ಅಪಾರ ಜಲರಾಶಿಯುಳ್ಳ ಮಹಾಸಾಗರವು ತೀರ ಚಿಕ್ಕ ನದಿಯಂತೆ ಗೋಚರವಾಗುವದು. ಅತಿ ದೊಡ್ಡದಾದ ಮೇರು ಪರ್ವತವು ಚಿಕ್ಕ ಚಿಕ್ಕ ಕಲ್ಲುಗಳಿಂದ ಕೂಡಿದಂಥ ದಿಬ್ಬದಂತೆ ಕಂಡು ಬರುವದು ಕ್ರೂರಪಶುವಾದ ಸಿಂಹವು ಚಿಗರೆಯಂತೆ ಸಾಧು ಸ್ವಭಾವದ ಪ್ರಾಣಿಯಂತೆ ಕಾಣಬರುವದು. ವಿಷಜಂತುವಾದ ಹಾವು ಹೂವಿನ ಹಾರವಾಗುವದು. ಹಾಗು ವಿಷವು ಅಮೃತದ ಧಾರೆಯಂತೆ ಆಗುವದು. ಹೀಗಿರುವಾಗ ಅಂಥ ಶೀಲವನ್ನು ಪಡೆಯುವದು ಪ್ರತಿಯೊಬ್ಬರ ಆದ್ಯ ಕರ್ತವ್ಯವೆಂದು ಹೇಳಲು ಏನಡ್ಡಿಯದೆ ?

ಲಜ್ಜಾ ಗುಣೌ ಘಜನನಿಂ ಜನನೀಮಿವ ಸ್ವಾ-
ಮತ್ಯಂತ ಶುದ್ಧ ಹೃದಯಾ ಮನುವರ್ತ ಮಾನಾಮ್ ।
ತೇಜಸ್ವಿನ: ಸುಖಮಸೂನಪಿ ಸಂತ್ಯಜಂತಿ
ಸತ್ಯವೃತ ವ್ಯಸನಿಗೋ ನ ಪುನ: ಪ್ರತಿಜ್ಞಾಮ್ ॥೧೧೧ ॥

ಸತ್ಯ ವೃತವನ್ನು ಧಾರಣ ಮಾಡಿರುವಂಥ ಮನುಷ್ಯನು ಅರ್ಥಾತ್ ಸತ್ಯವೇ ತನ್ನ ಜೀವನದುಸಿರೆಂದು ಭಾವಿಸಿಕೊಂಡಿರು ವಂಥವನು ತನ್ನ ಪ್ರಾಣವನ್ನು ಕೂಡ ಸುಖದಿಂದ ತ್ಯಾಗ ಮಾಡುವನು ಆದರೆ ಲಜ್ಜೆ, ನಾಚಿಕೆಗಳೇ ಮೊದಲಾದ ಗುಣಗಳ ಸಮುದಾಯವನ್ನು ಉತ್ಪನ್ನ ಮಾಡುವಂಥ ಹಾಗು ತನ್ನ ತಾಯಿಯ ಸಮಾನ ಶುದ್ಧ ಹೃದಯ ಮತ್ತು ಸ್ವಾಧೀನವಿರುವಂಥ ಪ್ರತಿಜ್ಞೆಯನ್ನು ಎಂದಿಗೂ ಮುರಿಯುವದಿಲ್ಲ.

ಶ್ರೀಮದ್ ಭರ್ತೃಹರಿ ವಿರಚಿತ ನೀತಿ ಶತಕ ಸಂಪೂರ್ಣ.



ಭರ್ತೃಹರಿಯ — — — —

# ವೈರಾಗ್ಯ ಶತಕ

## ಮಂಗಲಾಚರಣ

ಚೂಡೋತ್ತಂಸಿತ ಚಾರಚಂದ್ರಕಲಿಕಾ ಚಂಚಚ್ಛಿಖಾ ಭಾಸ್ವರೋ,
ಲೀಲಾದಗ್ಧ ವಿಲೋಲ ಕಾಮಶಲಭಃ ಶ್ರೇಯೋದಶಾಗ್ರೇ ಸ್ಫುರನ್
ಅಂತಃ ಸ್ಫೂರ್ಜದಪಾರ ಮೋಹತಿಮಿರ ಪ್ರಾಗ್ಭಾರ ಮುಚ್ಚಾಟಯಂ
ಶ್ಚೇತಃ ಸದ್ಮನಿ ಯೋಗಿನಾಂ ವಿಜಯತೇ ಜ್ಞಾನ ಪ್ರದೀಪೋಹರಃ||೧||

ಶೋಭಾಯಮಾನವಾದ ಕಿರಣಗಳನ್ನು ಪಸರಿಸಿರುವ ಸುಂದರ ಚಂದ್ರನು ಯಾವನ ಜಟಾಮುಕುಟಕ್ಕೆ ಅಲಂಕಾರ ಪ್ರಿಯನಾಗಿರುವನೋ ಕಾಮದೇವನೆಂಬ ಪತಂಗನನ್ನು ಯಾವನು ಲೀಲಾಜಾಲವಾಗಿ ಸುಟ್ಟು ಬೂದಿಮಾಡಿದನೋ, ಮಂಗಲಮಯ ಸ್ಫೂರ್ತಿಯನ್ನೀಯುತ್ತ ಅಂತಃಕರಣ ದಲ್ಲಿರುವ ಮೋಹವೆಂಬ ಆಧಿಕಾರವನ್ನು ಹೊಡೆದೋಡಿಸುತ್ತ, ಯೋಗಿಗಳ ಮನವೆಂಬ ಮನೆಯೊಳಗೆ ಜ್ಞಾನವೆಂಬ ದೀಪದ ಜ್ಯೋತಿಯನ್ನು ಬೆಳಗಿಸು ವಂಥ ಆ ಮಹಾದೇವನಿಗೆ ಜಯವಾಗಲಿ.

# ತೃಷ್ಣಾ ದೂಷಣೆ

ಬೋದ್ಧಾರೋ ಮತ್ಸರಗ್ರಸ್ತಾಃ ಪ್ರಭವಃ ಸ್ಮಯ ದೂಷಿತಾ:|
ಅಬೋಧೋಪ ಹತಾಶ್ಚಾನ್ಯೇ ಜೀರ್ಣಮಂಗೇ ಸುಭಾಷಿತಂ ||೨||

ಪಂಡಿತರಲ್ಲಿ—ಸತ್ಯ ಹಾಗು ಅಸತ್ಯಗಳ ಜ್ಞಾನವಿದ್ದಂಥ—ಈರ್ಷೆಯ್ಯು ತುಂಬಿಕೊಂಡಿದೆ. ಶ್ರೀಮಂತರು ಗರ್ವದಿಂದ ದೂಷಿತರಾಗಿದ್ದಾರೆ. ಅರ್ಥಾತ್ ಅವರು ತಮ್ಮಲ್ಲಿಯ ಗರ್ವದಿಂದಾಗಿ ಸದ್ಗುಣಿಗಳನ್ನು ಆದರಿಸದಂಥವರಾಗಿದ್ದಾರೆ, ಹಾಗು ಅನ್ಯ-ಜನಸಾಮಾನ್ಯರು-ಜನರು ಅಜ್ಞಾನಿಗಳಾಗಿದ್ದಾರೆ. ಜ್ಞಾನರಹಿತರಾಗಿದ್ದಾರೆ.--ಇದೇ ಕಾರಣದಿಂದಾಗಿ-ಸುಭಾಷಿತವು-ಉತ್ತಮ-ಕಾವ್ಯವು-ಅಂಗದಲ್ಲಿಯೇ ಜೀರ್ಣವಾಗತೊಡಗಿದೆ. ಅರ್ಥಾತ್ ಅದು ಮನದಲ್ಲಿಯೇ ಉಳಿದುಕೊಂಡು ಅಲ್ಲಿಯೇ ನಷ್ಟವಾಗುತ್ತವೆಯೇ ವಿನಾ ಮಾತುಗಳ ಮುಖಾಂತರ ಹೊರಬರುವದಿಲ್ಲ- ತಾತ್ಪರ್ಯವಿಷ್ಟೆಃ ಕವಿಗಳಿಗೆ ಉತ್ಸಾಹವನ್ನೀಯುವಂಥವನು ಒಬ್ಬನೂ ಇಲ್ಲ. ಅವರ ಕವಿತೆಗಳು ಕೇವಲ ಮನದೊಳಗೇ ಉಳಿದುಕೊಂಡು ಬಿಡುತ್ತವೆ.

ನ ಸಂಸಾರೋತ್ಪನ್ನಂ ಚರಿತಮನು ಪಶ್ಯಾಮಿ ಕುಶಲಂ
ವಿಪಾಕಃ ಪುಣ್ಯಾನಾಂ ಜನಯತಿ ಭಯಂ ಮೇ ವಿಮೃಶತಃ |
ಮಹದ್ಭಿಃ ಪಣ್ಯೈ ಧೈಶ್ಚಿರ ಪರಿಗ್ರಹೀ ತಾಶ್ಚ ವಿಷಯಾ
ಮಹಾಂತೋ ಜಾಯಂತೇ ವ್ಯಸನವಿವ ದಾತು ವಿಷಯೀಣಾಮ್ ||೩||

ಈ ಜಗತ್ತಿನೊಳಗೆ ಉತ್ಪನ್ನ ಚರಿತ್ರೆಗಳನ್ನು ಕಲ್ಯಾಣಕಾರಕ ದೃಷ್ಟಿಯಿಂದ ನೋಡಲಾಗುವದಿಲ್ಲ. ಮತ್ತು ವಿಚಾರಾಂತ್ಯದಲ್ಲಿ ಪುನೀತ ಕರ್ಮಗಳ ಫಲವು ಅರ್ಥಾತ್ ಸ್ವರ್ಗಾದಿಗಳೂ ಭಯಪ್ರದವಾಗಿ ಕಂಡುಬರುವವು ಏಕೆಂದರೆ ಪುಣ್ಯವೆಲ್ಲ ವೆಚ್ಚವಾದ ನಂತರ ಸ್ವರ್ಗದಲ್ಲಿಯೂ ಪತನವಾಗುವದು—ದೊಡ್ಡ-ದೊಡ್ಡ ಪುಣ್ಯಗಳ ಸಮೂಹದಿಂದ ಚಿರಕಾಲದಿಂದ ಸಂಗ್ರಹಿಸಲಾಗಿ

ರುವಂಥ ವಿಷಯವು ಕೂಡ ಕೊನೆಗೆ ವಿಷಯ ಲಾಲಸೆಯುಳ್ಳ ಪುರುಷನಿಗೆ ದುಃಖವನ್ನೀಯುತ್ತವೆ.

ಉತ್ಖಾತಂ ನಿಧಿ ಶಂಕಯಾ ಕ್ಷಿತಿ ತಲಂ ಧ್ಮಾತಾ ಗಿರೇರ್ಧಾತಯೋ
ನಿಸ್ತೀರ್ಣಃ ಸರಿತಾಂ ಪತಿ ನೃಪತಯೋ ಯತ್ನೇನ ಸಂತೋಷಿತಾಃ।
ಮಂತ್ರಾರಾಧನ ತತ್ಪರೇಣ ಮನಸಾ ನೀತಾಃ ಸ್ಮಶಾನೇನಿಶಾ :
ಪ್ರಾಪ್ತ: ಕಾಣಾವ ರಾಟಕೋಽಪಿ ನಮಯಾ ತೃಷ್ಣೇಽ
ಧುನಾಮಂಚಮಾಂ ||೪||

ಐಶ್ವರ್ಯದ ಆಶೆಯಿಂದ ನಾನು—ರಸಾಯನವು ಸಿದ್ಧವಾಗುವ ಆಶೆಯಿಂದ—ಇಡಿಯ ಭೂ ತಲವನ್ನೇ ಶೋಧಿಸಿದೆ. ಹಾಗು ಪರ್ವತಗಳಲ್ಲಿಯ ಧಾತುಗಳನ್ನು ಊದಿ ನೋಡಿದೆ. ಅಪಾರವಾದ ಸರಿತೆಯನ್ನೆ ದಾಟಿದೆ. ಬಹಳಷ್ಟು ಪ್ರಯತ್ನಪಟ್ಟು ಅರಸನನ್ನು ಪ್ರಸನ್ನಗೊಳಿಸಿದೆ. ಮಂತ್ರಸಿದ್ಧಿ ಮಾಡಿಕೊಳ್ಳಲೋಸುಗ ಅನೇಕ ರಾತ್ರಿಗಳನ್ನು ಸ್ಮಶಾನದಲ್ಲಿ ಕಳೆದೆ. ಇಷ್ಟೆಲ್ಲ ಪ್ರಯತ್ನ ಮಾಡಿದಾಗಲೂ ಒಂದು ಒಡಕು ಕವಡೆಯು ಕೂಡ ಪ್ರಾಪ್ತವಾಗಲಿಲ್ಲ. ಅದಕ್ಕಾಗಿ ಓ ತೃಷ್ಣೆಯೇ! ದಯಪಿಟ್ಟು ಇನ್ನಾದರೂ ನನ್ನ ಬೆನ್ನು ಬಿಡು.

ಭ್ರಾಂತಂ ದೇಶ ಮನೇಕ ದುರ್ಗವಿಷಮಂ ಪ್ರಾಪ್ತಂ ನಕಿಂಚಿತ್ಫಲಂ,
ತ್ಯಕ್ತ್ವಾ ಜಾತಿ ಕುಲಾಭಿಮಾನ ಮುಚಿತಂ ಸೇವಾಕೃತಾ ನಿಷ್ಫಲಾ ।
ಭುಕ್ತಂ ಮಾನವಿವರ್ಜಿತಂ ಪರಗೃಹೇ ಸಾಶಂಕಯಾ ಕಾಕವ-
ತೃಷ್ಣೇ ದುರ್ಮತಿ ಪಾಪಕರ್ಮ ನಿರತೆ ನಾಽದ್ಯಾಪಿ ಸಂತುಷ್ಯಸಿ ||೫||

ನಾನು ಅನೇಕ ದುರ್ಗಮ ದೇಶಗಳಲ್ಲಿ ತಿರುಗಿದೆನು. ಆದರೆ ಅದರಿಂದ ಯಾವ ಫಲವೂ ದೊರೆಯಲಿಲ್ಲ. ನನ್ನ ಕುಲ—ಮರ್ಯಾದೆಗಳ ಅಭಿಮಾನವನ್ನು ತೊರೆದು ಸೇವೆಯನ್ನು ಮಾಡಿದೆ. ಅದೂ ನಿಷ್ಫಲವಾಯಿತು. ಆತ್ಮಾಭಿಮಾನವನ್ನೂ ತೊರೆದು ಕಾಗೆಯಂತೆ ಅಂಜುತ್ತಂಬುತ್ತ ಎರಡನೆಯವರ ಮನೆಯೊಳಗೆ ಭೋಜನಮಾಡಿದೆ. ಆದರೆ ಓ ತೃಷ್ಣೆ! ದುರ್ಮತಿ ಹಾಗು ಪಾಪಕರ್ಮಗಳಲ್ಲಿಪ್ರಸಕ್ತಳಾದ ನೀನು ಈ ವರೆಗೂ ಸಂತುಷ್ಟಳಾಗಲಿಲ್ಲ.

ಖಲಾಲಾಪ್ಞಃ ಸೋಢಾಃ ಕಥಮಪಿ ತದಾರಾಧನ ಪರೈ—
ರ್ನಿಗೃಹ್ಯಾಂ ತರ್ಬಾಷ್ಪ ಹಸಿತ ಮಪಿ ಶೂನ್ಯೇನ ಮನಸಾ ।
ಕೃತಶ್ಚಿತ್ತಸ್ತಂಭಃ ಪ್ರಹಸಿತ ಧಿಯಾಮಂಜಲಿರಪಿ
ತ್ವಮಾಶೇ ಮೋಘಾಶೇ ಕಿಮು ಪರಮತೋ ನರ್ತಯಸಿಮಾಂ ॥೬॥

ಆ ದುಷ್ಟರ ಆರಾಧನೆಯೊಳಗೆ ತತ್ಪರನಾಗಿದ್ದ ನಾನು ಹೇಗೋ ಅವರ ಅವಾಚ್ಯ ಶಬ್ದಗಳನ್ನೂ ಸಹಿಸಿವೆ. ಕಣ್ಣೀರುಗಳನ್ನು ತಡೆಹಿಡಿದು ಅವರೆದುರು ಉದಾಸ ಮನದಿಂದ ನಗುತ್ತಿದ್ದೆ. ಮತ್ತು ಗಟ್ಟಿಮನಸ್ಸು ಮಾಡಿ ಕೈ ಜೋಡಿಸಿ ಕೊಂಡೂ ನಿಂತೆ. ಅದರೂ ವ್ಯರ್ಥವಾಯಿತು. ಅದಕ್ಕಾಗಿ, ಇಲ್ಲದ್ದನ್ನು ಬಯಸುವ ಓ ತೃಷ್ಣೆಯೇ! ಈಗಲೂ ನನಗೇತಕ್ಕೆ ಕುಣಿಸುವೆ ?

ಆದಿತ್ಯಸ್ಯ ಗತಾಗತೈ ರಹರಹ: ಸಂಕ್ಷೀಯತೇ ಜೀವಿತಂ
ವ್ಯಾಪಾರೈರ್ಬಹು ಕಾರ್ಯ ಭಾರಗುರುಭಿಃ ಕಾಲೋ ನ ವಿಜ್ಞಾಯತೇ
ದೃಷ್ಟ್ವಾ ಜನ್ಮ ಜರಾ ವಿಪತ್ತಿ ಭರಣಂ ತ್ರಾವಶ್ಚ ನೋತ್ಪದ್ಯತೇ
ಪೀತ್ವಾ ಮೋಹಮಯಿಂ ಪ್ರಮಾದ ಮದಿರಾ ಮುನ್ಮತ್ತ ಭೂತಂ
ಜಗತ್ ॥೭॥

ಪ್ರತಿದಿನವೂ ಆಗುವ ಸೂರ್ಯನ ಉದಯಾಸ್ತಗಳಿಂದ ಆಯುಷ್ಯವು ಕ್ಷೀಣವಾಗುವದು. ಅನೇಕ ದೊಡ್ಡ ದೊಡ್ಡ ಕಾರ್ಯ– ವ್ಯಾಪಾರ-ಗಳನ್ನು ಮಾಡುವದರಿಂದ ಸಮಯವು ಸರಿದು ಹೋದುದು ಗೊತ್ತಾಗುವದೇ ಇಲ್ಲ. ಇವೆಲ್ಲವುಗಳಿಂದ, ಈ ಸಂಸಾರವು, ಮೋಹಮಯವಾದ ಪ್ರಮಾದ ರೂಪದ ಮದಿರೆಯನ್ನು ಸೇವಿಸಿ ಉನ್ಮತ್ತವಾಗಿ ಬಿದ್ದುಕೊಂಡಿರುವದೆಂಬುದು ವ್ಯಕ್ತ ವಾಗುವದು. ಅರ್ಥಾತ್ ಇವಾವುದರ ಅರಿವೂ ಈ ಸಂಸಾರಕ್ಕಿಲ್ಲ.

ದೀನಾ ದೀನ ಮುಖ್ಯೈಃ ಸದೈವ ಶಿಶುಕೈರಾಕೃಷ್ಟ ಜೀರ್ಣಾಂಬರಂ
ಕ್ರೋಶಾದ್ಭಿ: ಕ್ಷುಧಿತೈರ್ರೈರ್ನರ್ನ ವಿಧುರಾ ದೃಶ್ಯೇತ ಚೇದ್ ಗೇಹಿನಿ।
ಯಾಂಚಾ ಭಂಗ ಭಯೇನ ಗದ್‌ಗದಲಸ ತ್ರುಟ್ಯಾದ್ವಿಲೀ ನಾಕ್ಷರಂ
ಕೋ ದೇಹೀತಿ ವದೇತ್ಸ್ವ ದಗ್ಧ ಜಠರ ಸಾರ್ಥೇ ಮನಸ್ವೀಜಂ ।೮॥

ಪುರುಷನು ಒಂದು ವೇಳೆ, ತನ್ನ ಪತ್ನಿಯನ್ನು, ದುಃಖಿತ, ದೀನ ಹಸಿವೆಯಿಂದ ಬಳಲುವ ದೀನ ಮುಖದ ಮಕ್ಕಳು ಅವಳ ಹರಕಲು ಬಟ್ಟೆಯನ್ನು ಎಳೆದಾಡುವದನ್ನು ಕಣ್ಣಿಂದ ನೋಡುವದಾಗದೆ, ಹಸಿದ ಹೊಟ್ಟೆಯ ಶಾಂತಿಗಾಗಿ ಹಿಟ್ಟನ್ನು ಪಡೆಯಲು ದೀನವದನನಾಗಿ ಹೋಗಿ ಗದ್ಗದ ಕಂಠದಿಂದ—ಅವರು ಈಗ ಇಲ್ಲವೆಂದು ಅನ್ನಬಹುದೆಂಬ ಭಯದಿಂದ ನನಗಿಷ್ಟು ಕೊಡಿರಿ ಎಂದು ಬೇಡಿಕೊಳ್ಳುವನು. ಇದರ ತಾತ್ಪರ್ಯವಿಷ್ಟೆ; ಸ್ತ್ರೀಯು ಎಲ್ಲ ಅನರ್ಥಗಳ ಬೀಡಾಗಿರುವಳು. ಏಕೆಂದರೆ ಪುರುಷನು ಅವಳಿಗಾಗಿ ಅವಳ ಸಂತೋಷಾರ್ಥವಾಗಿ, ಎಲ್ಲಿಂದಾದರೂ ಏನಾದರೂ ಮಾಡಿ ಹಣವನ್ನು ಸಂಪಾದಿಸಿಕೊಂಡು ಬರಬೇಕಾಗುವದು.

ನಿವೃತ್ತಾ ಭೋಗೇಚ್ಛಾ ಪುರುಷಬಹುಮಾನೋ ವಿಗಲಿತ:
ಸಮಾನಾಃ ಸ್ವರ್ಯಾತಾ: ಸಪದಿ ಸುಹೃದೋ ಜೀವಿತಸಮಾ:
ಶನೈರ್ಯಷ್ಟ್ಯೋತ್ಥಾನಂ ಘನ ತಿಮಿರರುದ್ಧ ಚ ನಯನೇ
ಅಹೋ ಧೃಷ: ಕಾಯಸ್ತದಪಿ ಮರಣಾಪಾಯ ಚಕಿತಃ ||೯||

ಭೋಗದ ಇಚ್ಛೆಯು ಕ್ಷೀಣವಾಗಿ ಬಿಟ್ಟಿತು. ಪುರುಷರಲ್ಲಿ ಸತ್ಕಾರದ ಭಾವನೆಯು ನಷ್ಟವಾಗಿ ಹೋಯಿತು. ಸಮಯಸ್ಕರಾದ ಪ್ರಾಣದಂತಿದ್ದ ಗೆಳೆಯರೆಲ್ಲ ಸ್ವರ್ಗಕ್ಕೆ ಹೋಗಿ ಬಿಟ್ಟರು. ಈಗ ತಾವೂ-ಇಲ್ಲಿ ಭರ್ತೃಹರಿಯು ತನ್ನನ್ನೆ ತನ್ನ ಶರೀರವನ್ನೇ ಉದ್ದೇಶಿಸಿ ಹೇಳಿರುವೆನು—ಕೋಲನ್ನೂರಿ ಎದ್ದು ನಿಲ್ಲಲು ಪ್ರಾರಂಭಿಸಿರುವಿರಿ. ಕಣ್ಣುಗಳಲ್ಲಿ ಘೋರ ಅಂಧಕಾರವು ಪ್ರವೇಶಿಸತೊಡಗಿರುವದು. ಆದರೂ—ಈ ನಿರ್ಲಜ್ಜ ಶರೀರವು—ಇಷ್ಟೆಲ್ಲ ಕ್ಷೀಣತೆಗಳು ಕಂಡು ಬಂದರೂ— ತನ್ನ ಮರಣದ ಅಂದರೆ ತನಗೂ ಒಂದು ದಿನ ಮರಣವು ಬರುವದೆಂಬ ಸಂಗತಿಯನ್ನು ಕೇಳಿ ಅಚ್ಚರಿಗೊಳ್ಳುವದು-ಗಾಬರಿಗೊಳ್ಳುವದು.

ಹಿಂಸಾ ಶೂನ್ಯಮ ಯತ್ನಲಿಭ್ಯ ಮಶನಂ ಧಾತ್ರಾ ಮರುತ್ಕಲ್ಪಿತಂ
ವ್ಯಾಲಾನಾಂ ಪಶ ವಸ್ತ್ರ ಣಾಂಕುರ ಭುಜ: ಸೃಷ್ಟಾ:ಸ್ಥಲೀ ಶಾಯಿನಃ|
ಸಂಸಾರಾರ್ಣವ ಲಂಘನ ಕ್ಷಮಧಿಯಾಂ ವೃತ್ತಿ: ಕೃತಾ ಸಾ ನೃಣಾಂ

ಯಾಮ ಸ್ವೇಷ ಯತಾಂ ಪ್ರಯಾಂತಿ ಸತತಂ ಸರ್ವೆ ಸಮಾಪ್ತಿಂ
—ಗುಣಾಃ ||೧೦||

ವಿಧಾತನು ಹಿಂಸಾರಹಿತ ಹಾಗು ಯಾವುದೇ ಬಗೆಯ ಪ್ರಯತ್ನವನ್ನು ಮಾಡದೆ ದೊರೆಯುವಂಥ ವಾಯುವನ್ನು ಹಾವಿನ ಆಹಾರವನ್ನಾಗಿ ಮಾಡಿರುವನು. ನೆಲದ ಮೇಲೆ ಮಲಗಿಕೊಳ್ಳುವಂತಹ ಪ್ರಾಣಿಗಳಿಗೆ-ದನಕರುಗಳಾದಿಗಳಿಗೆ-ತಿನ್ನಲೋಸುಗ ಹುಲ್ಲನ್ನು ಸೃಷ್ಟಿಸಿರುವನು. ಹಾಗು ಭವ ಸಾಗರವನ್ನು ಪಾರು ಮಾಡುವ ಯೋಗ್ಯತೆಯುಳ್ಳ ಪುರುಷನಿಗೆ ಆಶ್ಚರ್ಯಕರವಾದ ವೃತ್ತಿಯನ್ನು ದಯಪಾಲಿಸಿರುವನು. ಪುರುಷನು ಆ ವೃತ್ತಿಯನ್ನು ಶೋಧಿಸುತ್ತಿರುವಾಗಲೆ ಅವರಲ್ಲಿಯ ಗುಣಗಳೆಲ್ಲ ಮುಗಿದು ಹೋಗುವವು. ಅಂದರೆ ಮಾನವನ ವೃತ್ತಿಯು ಅತ್ಯಂತ ಕಠಿಣವಾದದ್ದಾಗಿದೆ. ಅದನ್ನು ಎಲ್ಲರೂ ಬಲ್ಲವರಾಗಿರುವರು. ಅವರೂ ಏನೂ ಅರಿಯದವರಂತೆ ವರ್ತಿಸಿ ತಮ್ಮಲ್ಲಿಯ ಗುಣಗಳೆಲ್ಲ ನಶಿಸಿ ಹೋಗುವಂಥ ಕಾರ್ಯಗಳನ್ನು ಮಾಡುವರು.

ನ ಧ್ಯಾತಂ ಪದಮೀಶ್ವರಸ್ಯ ವಿಧಿವತ್ ಸಂಸಾರ ವಿಚ್ಛಿತ್ತಯೇ
ಸ್ವರ್ಗದ್ವಾರ ಕಪಾಟ ಪಾಟನಪಟುರ್ಧರ್ಮೋಪಿ ನೋಪಾರ್ಜಿತಃ'
ನಾರೀಪೀನ ಪಯೋಧರೋಯುಗಲ ಸ್ವಪ್ನೇ ಪಿ ನಾಽಽ ಲಿಂಗತಂ
ಮಾತು: ಕೇವಲಮೇವ ಯೌವನಚ್ಛೇದೇ ಕುಠಾರಾವಯಂ ||೧೧||

ನಾವು ಈ ಸಂಸಾರವನ್ನು ಛೇದಿಸುವದಕ್ಕೋಸುಗ ಅರ್ಥಾತ್ ಮುಕ್ತಿಯ ಬಯಕೆಯಿಂದ ಈಶ್ವರನ ಚರಣಗಳನ್ನು ವಿಧಿವತ್ತಾಗಿ ಪೂಜಿಸಲಿಲ್ಲ. ಅಂದರೆ ಆ ಕಡೆಗೆ ಗಮನವೀಯಲೇ ಇಲ್ಲ. ಹಾಗು ಸ್ವರ್ಗದ ದ್ವಾರವನ್ನು ತೆಗೆಯಿಸುವಲ್ಲಿ ಸಹಾಯಕವಾಗುವಂಥ ಧರ್ಮ ಮಾರ್ಗದತ್ತಲೂ ಗಮನವೀಯಲಿಲ್ಲ. ಇಷ್ಟೇ ಅಲ್ಲ ನಾರಿಯರ-ತರುಣಿಯರ-ಸ್ಥೂಲ ಸ್ತನಗಳು ಹಾಗು ಚಿತ್ತಾಕರ್ಷಕ ತೊಡೆಗಳತ್ತ ಸ್ವಪ್ನದಲ್ಲಿಯೂ ಜ್ಞಾಪಿಸಿಕೊಳ್ಳಲಿಲ್ಲ. ನಾವು ಕೇವಲ ಮಾತೆಯ ಯೌವನ ರೂಪದ ವನವನ್ನು ಕತ್ತರಿಸಿ ಹಾಕುವ ಕೊಡಲಿಯ ಕಾರ್ಯವನ್ನು ಮಾಡಿದೆವು.

ಭೋಗಾ ನ ಭುಕ್ತಾ ವಯಮೇವ ಭುಕ್ತಾಸ್ತಪೋ ನ ತಪ್ತಂ
ವಯಭೇವ
ಕಾಲೋ ನ ಯಾತೋ ವಯಮೇವ ಯಾತಾ ತೃಷ್ಣಾ ನ ಜೀರ್ಣಾ
ವಯಮೇವ ಜೀರ್ಣಾಃ ||೧೨||

ನಾವು ವಿಷಯ ಸುಖಗಳನ್ನು ಅನುಭೋಗಿಸಲಿಲ್ಲ ಆದರೂ ವಿಷಯವು ನಮ್ಮನ್ನು ಭೋಗಿಸಿತು. ಅರ್ಥಾತ್ ನಮ್ಮನ್ನು ಅಸಮರ್ಥವನ್ನಾಗಿಸಿತು. ನಾವು ಎಂದೂ ತಪವನ್ನು ಮಾಡಲಿಲ್ಲ. ಆದರೆ ತಪವೇ ನಮಗೆ ತಾಪವನ್ನಿತ್ತಿತು. ಕಾಲವು ಮುನ್ನಡಿಯಲೇ ಇಲ್ಲ. ಆದರ ಬದಲು ನಾವೇ ಮುನ್ನಡೆದೆವು. ಅರ್ಥಾತ್ ಮರಣವನ್ನು ಸಮೀಪಿಸಿದೆವು. ನಮ್ಮ ಹೃದಯದೊಳಗೆ ಹುದುಗಿದ ತೃಷ್ಣೆಯು ಜೀರ್ಣರಾಗಲಿಲ್ಲ. ಆದರ ಬದಲು ದಿನ ದಿನಕ್ಕೆ ನಾವೇ ಜೀರ್ಣವಾಗುತ್ತ ಹೊರಟೆವು.

ಕ್ಷಾಂತಂ ನ ಕ್ಷಮಯಾ ಗೃಹೋಚಿತ ಸುಖಂ ತ್ಯಕ್ತಂ ನ
ಸಂತೋಷತಃ
ಸೋಢಾ ದುಸ್ಸಹಶೀತ ವಾತಪನ ಕ್ಲೇಶಾ ನ ತಪ್ತಂ ತಪ್ತ:!
ಧ್ಯಾತಂ ವಿತ್ತ ಮಹರ್ನಿಶಂ ನಿಯಮಿತ ಪುಣ್ಯೈರ್ನ ಶಂಭೋಃ ಪದಂ
ತತ್ತತ್ಕರ್ಮ ಕೃತಂ ಯದೇವ ಮುನಿಭಿಸ್ತ್ರಾಸ್ತೈ:
ಫಲೈರ್ವಂಚಿತಂ ||೧೩||

ನಾವು ಸಹನೆಯನ್ನು ತಂದುಕೊಂಡೆವು: ಆದರೆ ಧೀರತನದಿಂದಲ್ಲ. ನಮ್ಮಲ್ಲಿಯ ಅಶಕ್ತತೆಯಿಂದ, ನರ್ಬಲತೆಯಿಂದ; ಗೃಹಸ್ಥಾಶ್ರಮದ ಸುಖವನ್ನು ತ್ಯಜಿಸಿದೆವು. ಆದರೆ ಅದನ್ನು ಸಂತೋಷದಿಂದ ತ್ಯಜಿಸಲಿಲ್ಲ. ಶೀತವಾತ, ಹಾಗು ತಪದ ದುಸ್ಸಹವಾದ ಕ್ಲೇಶಗಳನ್ನು ಸಹಿಸಿದೆವು. ಆದರೆ ತಪಸ್ಸನ್ನು ಮಾತ್ರ ಮಾಡಲಿಲ್ಲ. ಧ್ಯಾನವನ್ನೇನೋ ಮಾಡಿದವು ಆದರೆ ಕೇವಲ ಧನದ ಧ್ಯಾನವನ್ನೇ ಮಾಡಿದೆವೇ ವಿನಾ ಶಿವನ ಚರಣ ಕಮಲಗಳದ್ದಲ್ಲ. ನಾವು ಮುನಿಗಳು ಮಾಡುವಂತಹ ಎಲ್ಲ ಕಾರ್ಯಗಳನ್ನೂ ಮಾಡಿದೆವು. ಆದರೆ ಪ್ರೀತಿ ಫಲದ ವಿಷಯದಲ್ಲಿ ಮಾತ್ರ ಮೋಸಗೊಳಿಸಲ್ಪಟ್ಟೆವು.

ತಾತ್ಪರ್ಯವಿಷ್ಟೇ: ಮನದೊಳಗಿನ ದುಷ್ಟ ಉದ್ದೇಶವು ಎಲ್ಲಿಯ ವರೆಗೆ ಹೊರಗೆ ಹೋಗುವದಿಲ್ಲವೋ ಅಲ್ಲಿಯ ವರೆಗೆ ಏಕಾಗ್ರತೆಯು ಸಾಧ್ಯವಿಲ್ಲ.

ವಲಿಭಿರ್ಮುಖ ಮಾಕ್ರಾಂತಂ ಪಲಿತೈರಂಕಿತಂ ಶಿರಃ|
ಗಾತ್ರಾಣಿ ಶಿಥಿಲಾ ಯಂತೇ ತೃಷ್ಣೈಕಾ ತರುಣಾಯತೇ ||೧೪||

ಮುಖದ ತುಂಬೆಲ್ಲ ನಿರಿಗೆಗಳು ಕಾಣಿಸಿಕೊಂಡವು. ತಲೆಯೊಳಗಿನ ಕೂದಲುಗಳು ಬೆಳ್ಳಗಾದವು. ಹಾಗು ಇಂದ್ರಿಯಗಳೆಲ್ಲ ಶಿಥಿಲವಾಗಿ ಬಿಟ್ಟವು. ಇಷ್ಟೆಲ್ಲ ಆದರೂ ಕೂಡ ಕೇವಲ ತೃಷ್ಣೆಯೊಂದು ಮಾತ್ರ ಇನ್ನೂ ತರುಣ ವಾಗಿಯೇ ಇರುವದು. ಅಂದರೆ ಮಾನವನ ಆಯುಷ್ಯವು ಮುಗಿಯಬಹುದು. ಆದರೆ ಅವನ ಬಯಕೆಗಳು ಮಾತ್ರ ಎಂದಿಗೂ ಮುಗಿಯಲಾರವು.

ಏನೈವಾಂಬರ ಖಂಡೇನ ಸಂವೀತೋ ನಿಶಿ ಚಂದ್ರಮಾ:|
ತೇನೈವ ಚ ದಿವಾ ಭಾನುರಹೋ ದೌರ್ಗತ್ಯ ಮೇತಯೋ ||೧೫||

ರಾತ್ರಿಯ ಸಮಯದಲ್ಲಿ ಚಂದ್ರ ಬಿಂಬವು ಮರೆಯಾಗುವಂಥ ಆಕಾಶ ದಲ್ಲಿಯೇ ಹಗಲು ಹೊತ್ತಿನಲ್ಲಿ ಸೂರ್ಯನು ಮರೆಯಾಗುತ್ತಾನೆ. ಅಂದರೆ ಈ ಜಗತ್ತಿನಲ್ಲಿ ಎಂಥ ಸಮರ್ಥನಾದವನಿಗೂ ದೀನತೆಯನ್ನು ಪ್ರಕಟಗೊಳಿ ಬೇಕಾಗುತ್ತದೆ. ಅಂದಾಗ ಮಾನವರ ಪಾಡೇನು?

ಅವಶ್ಯಂ ಯಾತಾರಶ್ಚಿರತರ ಮುಷಿತ್ವಾಪಿ ವಿಷಯಂ
ವಿಯೋಗೇ ಕೋ ಭೇದಸ್ತ್ಯ ಜತಿ ನ ಮನೋ ಯತ್ಸ್ವ ಯಮಮುನ್
ಪ್ರಜಂತಃ ಸ್ವಾತಂತ್ರ್ಯಾದತುಲ ಪರಿತಾಪಾಯ ಮನಸಃ
ಸ್ವಯಂ ತ್ಯಕ್ತಾ ಹ್ಯೇತೇಶಮ ಸುಖ ಮನಂತಂ ವಿಧಧತಿ ||೧೬||

ಬಹುಕಾಲದ ವರೆಗೆ ಭೋಗಿಸಲಾದಂಥ ವಿಷಯ ಸುಖವನ್ನು ಕೊನೆ ಗೊಮ್ಮೆ ಬಿಡಲೇ ಬೇಕಾಗುವದು. ಆಗ ಆ ವಿಷಯ ಸುಖದ ವಿಯೋಗದಲ್ಲಿ ಏನಾದರೂ ವೈಶಿಷ್ಟ್ಯವಿದೆಯೇ? ಏನೂ ಇಲ್ಲ. ಅದಕ್ಕಾಗಿ ಮಾನವನು ಅವು

ಗಳನ್ನು ತಾನಾಗಿಯೇ ಬಿಟ್ಟು ಬಿಡಬೇಕು. ಏಕೆಂದರೆ ಅವು ತಾವಾಗಿಯೇ ಬಿಟ್ಟು ಹೋದಾಗ ಮನುಷ್ಯನಿಗೆ ಬಹಳ ತಾಪವಾಗುವದು. ಅದರ ಬದಲು ಮನುಷ್ಯನು ತಾನಾಗಿಯೇ ಅವುಗಳನ್ನು ಬಿಟ್ಟಾಗ ಅನಂತ ಸುಖವನ್ನು ಅನುಭವಿಸುವನು.

ತೃಷ್ಣಾ ದೂಷಣೆ ಮುಗಿಯಿತು.



## ತೃಷ್ಣಾಧಿಕಾರ

ವಿವೇಕ ವ್ಯಾಕೋಶೇ ವಿದಧತಿ ಶಮೇ ಶಾಮ್ಯತಿ ತೃಷಾ
ಪರಿಷ್ವಂಗೇ ತುಂಗೇ ಪ್ರಸತ ತಿತರಾಂ ಸಾ ಪರಿಣತಿಃ।
ಜರಾ ಜೀರ್ಣೈಃ ಶ್ವರ್ಯ ಗ್ರಸನ ಗಹನಾ ಕ್ಷೇಪ ಕೃಪಣ
ಸ್ತೃಷಾ ಪಾತ್ರಂ ಯಸ್ಯಾಂ ಭವತಿ ಮರುತಃಮಪ್ಯಧಿಪತಿಃ ।೧೭।

ವಿವೇಕದ ಪ್ರಕಾಶದಿಂದ ಶಾಂತಿಯು ಹುಟ್ಟುವಾಗ ತೃಷ್ಣೆಯು ಶರೀರವೊಳಗೆ ಪ್ರವೇಶಿಸುವದೊಂದೇ ತಡ, ಅದು ಇಡಿಯ ಶರೀರವನ್ನೇ ವ್ಯಾಪಿಸಿಕೊಂಡು ಬಿಡುವದು. ತೃಷ್ಣೆಯ ಹಿಡಿತದೊಳಗಿಂದ ಪಾರಾಗುವದು. ಸಾಕ್ಷಾತ್ ಇಂದ್ರನಿಂದಲೂ ಸಾಧ್ಯವಿಲ್ಲ. ಏಕೆಂದರೆ ಅದರ-ತೃಷ್ಣೆಯ-ಹಿಡಿತವು ನಿಜಕ್ಕೂ ಅಷ್ಟೊಂದು ಭದ್ರವಾಗಿರುತ್ತದೆ.

ತೃಷ್ಣಾಧಿಕಾರ ಮುಗಿಯಿತು.



# ವಿಷಯಾಧಿಕಾರ

ಭಿಕ್ಷಾಶನಂ ತದಪಿ ನೀರಸಮೇಕ ವಾರಂ
ಶಯ್ಯಾ ಚ ಭೂಃ ಪರಿಜನೋ ನಿಜದೇಹ ಮಾತ್ರಂ।
ವಸ್ತ್ರಂ ಚ ಜೀರ್ಣ ಶತ ಖಂಡಮಯಿ ಚ ಕಂಥಾ
ಹಾ ಹಾ ತಥಾಪಿ ವಿಷಯಾನ್ನ ಪರಿತ್ಯ ಜಂತಿ ||೧೮||

ಆಹ್! ವಿಷಯ ವಾಸನೆಯು ಅತಿ ಭಯಂಕರವಾದುದು. ಏಕೆಂದರೆ, ನಾವು ಭಿಕ್ಷೆ ಬೇಡಿ ಪಡೆದಂಥ ನೀರಸ—ರಸವಿಲ್ಲದ, ಸತ್ವಹೀನ—.ಅನ್ನ ವನ್ನು ಊಟ ಮಾಡಬೇಕಾಗುತ್ತದೆ. ಮೆತ್ತನ್ನ ಹಾಸುಗೆಯು ನಮಗೆ ಸಿಕ್ಕದೆ ಭೂಮಿಯನ್ನೇ ಹಾಸುಗೆಯನ್ನಾಗಿ ಮಾಡಿಕೊಳ್ಳುತ್ತೇವೆ. ನಮ್ಮ ಶರೀರವೇ ನಮಗೊಂದು ಪರಿವಾರವಾಗಿರುತ್ತದೆ. ಹಾಗು ಉಟ್ಟುಕೊಳ್ಳಲು ಮತ್ತು ಹೊದ್ದುಕೊಳ್ಳಲು ಜೀರ್ಣವಾದ ಅಂದರೆ ತುಂಬಾ ಹರಿದು ಹೋಗಿರುವಂಥ ಬಟ್ಟೆಯನ್ನು ಉಪಯೋಗಿಸುತ್ತೇವೆ. ಹೀಗಿದ್ದರೂ ವಿಷಯ ವಾಸನೆಯು ನಮ್ಮನ್ನು ಬಿಟ್ಟು ಹೋಗುವದಿಲ್ಲ. ಅರ್ಥಾತ್ ನಾವು ವಿಷಯವಾಸನೆ ಯನ್ನು ಮರೆಯುವದಿಲ್ಲ.

ಸ್ತನೌ ಮಾಂಸ ಗ್ರಂಥಿ ಕನಕ ಕಲಶಾ ವಿತ್ಯುಪಮಿತೌ
ಮುಖಂ ಶ್ಲೇಷ್ಮಾಗಾರಂ ತದಪಿ ಚ ಶಶಾಂಕೇನ ತುಲಿತಂ।
ಸ್ರವನ್ಮೂತ್ರ ಕ್ಲಿತ್ನಂ ಕರಿವರಕರ ಸ್ಪರ್ಧಿ ಜಘನ,
ಮುಹೋ ನಿಂದ್ಯಂ ರೂಪಂ ಕವಿಜನ ವಿಶೇಷೈರ್ಗುರು ಕೃತಂ।೧೯।

ಮಾಂಸದ ಮುದ್ದೆಗಳಾಗಿರುವಂಥ ಸ್ತ್ರೀಯರ ಸ್ತನಗಳನ್ನು ಸುವರ್ಣ ಕಲಶ-ಬಂಗಾರದ ಕೊಡಗಳೆಂದೂ, ಉಗುಳಿನಂತಹ ಕನಿಷ್ಟ ವಸ್ತುವಿನ ಸಂಗ್ರಹಸ್ಥಾನವಾದ ಮುಖವನ್ನು-ತರುಣಿಯರ ಮುಖವನ್ನು-ಚಂದ್ರನಿಗೂ

ಹಾಗು ಹನಿ ಹನಿಯಾಗಿ ಬಿದ್ದ ಮೂತ್ರದಿಂದ ತೊಯ್ದು ಹೋಗಿರುವಂಥ, ತೊಯ್ಯುತ್ತಿರುವಂಥ ಆವಳ ತೊಡೆಗಳನ್ನು ಗಜೇಂದ್ರನ ಸೊಂಡಿಲಕ್ಕೂ ಹೋಲಿಸಲಾಗುತ್ತಿದೆ— ಇವುಗಳನ್ನೆಲ್ಲ ಪರಿಶೀಲಿಸಿದಾಗ- ನಿಂದ್ಯಳಾದ ಹೆಣ್ಣನ್ನು ನಮ್ಮ ಕವಿಗಳು ವರ್ಣಿಸಿ ಎಷ್ಟೊಂದು ಮೇಲಕ್ಕೇರಿಸಿ ಬಿಟ್ಟಿರುವ ರಲ್ಲ! ಎಂದೆನ್ನಿಸುವದು.

ವಿಷಯಾಧಿಕಾರ ಮುಗಿಯಿತು



# ರೂಪ ತಿರಸ್ಕಾರ

ಅಜಾನನ್ಮಾಹಾತ್ಮ್ಯಂ ಪತತು ಶಲಭೋ ದೀಪದಹನೇ
ಸ ಮೀನೋಽಪ್ಯಜ್ಞಾನಾದ್ ಬಡಿಶಯುತಮಶ್ನಾತು ಪಿಶಿತಂ ।
ವಿಜಾನಂತೋಽಪ್ಯೇತೇ ವಯಮಿಹ ವಿಪಜ್ಜಾಲ ಜಟಿಲಾ-
ನ್ನ ಮುಂಚಾಮಃ ಕಾಮಾನಹಹ ! ಗಹನೋ ಮೋಹ
ಮಹಿಮಾ ॥೨೦॥

ಮೋಹದ ಮಹಿಮೆಯು ವರ್ಣನಾತೀತವಾದುದಾಗಿರುವದು. ಏಕೆಂದರೆ, ಪತಂಗವು-ದೀಪದ ಹುಳವು-ಅಗ್ನಿಯ ಮಹಿಮೆಯನ್ನು ತಿಳಿಯದೆಯೆ ದೀಪಕ್ಕೆ ಹಾರಿ ಅರ್ಥಾತ್ ಜ್ಯೋತಿಯನ್ನು ಅಪ್ಪಿಕೊಂಡು ತನ್ನನ್ನು ತಾನೇ ನಾಶಮಾಡಿಕೊಳ್ಳುವದು. ಅದೇ ರೀತಿಯಾಗಿ ಮುಳ್ಳಿನ ತುದಿಗೆ ಅಂಟಿಸಿದ ಮಾಂಸವನ್ನು ಕಚ್ಚಿದರೆ ತನಗೆ ವಿನಾಶವು ಒದಗುವದೆಂಬದು ಗೊತ್ತಿಲ್ಲದೆ ಮೀನವು ಆ ಮಾಂಸವನ್ನು ತಿಂದು ತನ್ನ ಮರಣಕ್ಕೆ ಹಾದಿಯನ್ನು ಮಾಡಿಕೊಳ್ಳುವದು. ಇವೆರಡೂ ತಮಗೆ ತಿಳಿಯದಲೇ ತಮ್ಮ ಸಾವಿಗೆ ಪರ್ಯಾಯವಾಗಿ ಕಾರಣವಾಗುವವು. ಆದರೆ ಎಲ್ಲವೂ ಗೊತ್ತಿದ್ದ ನಾವು-ಮನುಷ್ಯರು-ಹೆಜ್ಜೆ, ಹೆಜ್ಜೆಗೂ ಸಂಕಟಗಳಿಂದ, ತೊಂದರೆಗಳಿಂದ ತುಂಬಿದಂಥ ಕಾಮವನ್ನು ವಿಷಯ ಸುಖವನ್ನು ಬಿಡಲು ಇಚ್ಛಿಸುವದಿಲ್ಲ. ಇದರ ಮೇಲಿಂದ ಸ್ತ್ರೀ ವ್ಯಾಮೋಹದ ಮಹಿಮೆಯು ಎಂಥದೆಂಬುದು ವ್ಯಕ್ತವಾಗುವದಿಲ್ಲವೆ ?

ಫಲಮಲ ಮಶನಾಯ ಸ್ವಾದು ಪಾನಾಯ ತೋಯಂ
ಶಯನಮವ ನಿಪೃಷ್ಠಂ ವಲ್ಕಲೇ ವಾಸಸೀ ಚ।
ನವ ಧನ ಮಧುಪಾನ ಭ್ರಾಂತ ಸರ್ವೇಂದ್ರಿಯಾಣಾ—

ಮವಿನಯು ಮನುಮುಂತುಂ ನೋತ್ಸಹೇ
ದುರ್ಜನಾನಾಂ ||೨೧||

ಹಸಿವನ್ನು ಹಿಂಗಿಸಿಕೊಳ್ಳಲೋಸುಗ ಫಲಗಳು, ತೃಷೆಯನ್ನು ಇಲ್ಲವಾಗಿಸಿಕೊಳ್ಳಲು, ಬಾಯಾರಿಕೆಯನ್ನು ಪರಿಹರಿಸಿಕೊಳ್ಳಲು ಸ್ವಾದಿಷ್ಟ ನೀರು, ಮಲಗಿಕೊಳ್ಳಲು ವಿಶಾಲವಾದ ಭೂಮಿ, ಹಾಗು ತೊಟ್ಟುಕೊಳ್ಳಲೋಸುಗ ಗಿಡಗಳ ತೊಗಟೆಗಳು ಹೇರಳವಾಗಿಸಿಕ್ಕುತ್ತವೆ.ಅಂದರೆ ಮನುಷ್ಯನಿಗೆ ಬೇಕಾಗುವಂತಹ ವಸ್ತುಗಳನ್ನೆಲ್ಲ ನಿಸರ್ಗವು ಧಾರಾಳವಾಗಿ ಕೊಡುತ್ತದೆ. ಅವುಗಳನ್ನು ಸಂಪಾದಿಸಲೋಸುಗ ನಾವು ಯಾವುದೇ ಬಗೆಯ ಕಷ್ಟಪಡಬೇಕಾಗಿಲ್ಲ. ಹೀಗಿರುವಾಗ, ಹಣವೇ ಸರ್ವಸ್ವವೆಂದು ಭಾವಿಸಿಕೊಂಡು ಧನದ ಮದದಲ್ಲಿಯೇ ಇರುವಂಥ, ಅರ್ಥಾತ್ ಧನವೆಂಬ ಸುರೆಯನ್ನು ಸೇವಿಸಿ ಮದೋನ್ಮತ್ತರಾಗಿರುವಂಥ ದುರ್ಜನರ ಅನಾದರವನ್ನು ಏತಕ್ಕೆ ಸಹಿಸಬೇಕು ? ಸಹಿಸಬೇಕಾದ ಅವಶ್ಯಕತೆಯೇ ಇಲ್ಲ. ಏಕೆಂದರೆ ನಮಗೆ ಅಂಥ ಧನ ಮದಾಂಧರ ಬಳಿ ಹೋಗಿ ಕೈಯೊಡ್ಡಿ ನಿಂತುಕೊಳ್ಳುವ ಪ್ರಸಂಗವೇ ಬರುವದಿಲ್ಲ.

ವಿಪುಲಹೃದಯೈರ್ಧನ್ಯೈಃ ಕೈಶ್ಚಿಜ್ಜಗಜ್ಜನಿತಂ ಪುರಾ
ವಿಧೃತಮಪರೈರ್ದತ್ತಂ ಚಾನ್ಯೈರ್ವಿಜಿತ್ಯ ತೃಣಂ ಯಥಾ ।
ಇಹ ಹಿ ಭುವನಾನ್ಯನ್ಯೇ ಧೀರಾಶ್ಚತುರ್ದಶ ಭುಂಜತೇ
ಕತಿಪಯ ಪುಂಸ್ವಾಭ್ಯೇ ಪುಂಸಾಂ ಕ ಏಷ ಮದಜ್ವರಃ ॥೨॥

ಪ್ರಾಚೀನ ಕಾಲದಲ್ಲಿ ಬಿಚ್ಚು ಹೃದಯದ ಮಹಾತ್ಮರು ಈ ಸಂಸಾರವನ್ನು–ಜಗತ್ತನ್ನು–ಉತ್ಪನ್ನ ಮಾಡಿದರು. ಅನಂತರ ಬಹಳಷ್ಟು ಜನರು ಈ ಜಗತ್ತನ್ನು ಗೆದ್ದು ಎರಡನೆಯವರಿಗೆ ಕೊಟ್ಟು ಬಿಟ್ಟರು. ಈಗಲೂ ಕೂಡ ಎಷ್ಟೋ ಜನ ಅರಸರು ಈ ಹದಿನಾಲ್ಕು ಲೋಕಗಳನ್ನು ಪರಿಪಾಲಿಸುತ್ತಿದ್ದಾರೆ ಆಳುತ್ತಿದ್ದಾರೆ. ಹೀಗೆ ಹೇಳಬೇಕಾದುದರ ತಾತ್ಪರ್ಯವಿಷ್ಟೆ: ಅಷ್ಟೊಂದು ಅತುಲೈಶ್ವರ್ಯವಿದ್ದರೂ, ಇಡಿಯ ಜಗತ್ತೇ ತಮ್ಮ ಅಧೀನದೊಳಗಿದ್ದರೂ ಅವರಲ್ಲಿ ಕೊಂಚವೂ ಹೆಮ್ಮೆಯಿಲ್ಲ. ಗರ್ವವಿಲ್ಲ ಅವರುಗಳಿಲ್ಲ

ನಿಗರ್ವಿಗಳಾಗಿಯೇ ಇರುವರು. ಆದರೆ ಕೈಬೆರಳುಗಳ ಮೇಲೆ ಎಣಿಕೆ. ಮಾಡಲು ಸಾಧ್ಯವಿರುವಷ್ಟು ಗ್ರಾಮಗಳ ಅಧಿಪತ್ಯವನ್ನು ಪಡೆದಂಥ ಕೆಲ ಅರಸರು, ಅಷ್ಟೇ ಪ್ರಭುತ್ವದಿಂದ ತಲೆ ತಿರುಗಿ, ಮದ ಜ್ವರವು ಏರಿದವರಂತೆ ವರ್ತಿಸುತ್ತಿರುವರು. ಅರ್ಥಾತ್ ಅಧಿಕಾರ ಮದದಿಂದ ಉನ್ಮತ್ತರಂತೆ ವರ್ತಿಸುತ್ತಿರುವರು. ಇವರು ಹೀಗೆ ಮಾಡುವದು, ಮಾಡುತ್ತಿರುವದು ಆಶ್ಚರ್ಯದ ಸಂಗತಿಯಾಗಿದೆ.

ಇಲ್ಲಿ ಒಂದು ಮಾತನ್ನು ಹೇಳಬಹುದಾಗಿದೆ. ಕನ್ನಡದಲ್ಲಿ "ತುಂಬಿದ ಕೊಡವು ತುಳುಕುವದಿಲ್ಲ"ವೆಂಬುದೊಂದು ಗಾದೆಯಿದೆ. ಆ ಮಾತು ಈ ಶ್ಲೋಕದ ಅರ್ಥವನ್ನು ಚನ್ನಾಗಿ ಪುಷ್ಟೀಕರಿಸುವದು. ಜೊತೆಗೆ ಅಲ್ಪ ವಿದ್ಯಾಮಹಾಗರ್ವಿ' ಎಂಬುದನ್ನೂ ತೋರಿಸುವದು. ಇಂದು ಇಂಥ ನಿದರ್ಶನಗಳು ಹೆಜ್ಜೆ ಹೆಜ್ಜೆಗೂ ಸಿಕ್ಕುತ್ತವೆ. ಆದರೆ ಇದು ಭರ್ತೃಹರಿಯ ಕಾಲಕ್ಕೂ ಇದ್ದಿತು ಎಂಬುದು ಅವನ ಶ್ಲೋಕದಿಂದ ವ್ಯಕ್ತವಾಗುವದು.

ರೂಪ ತಿರಸ್ಕಾರ ಮುಗಿಯಿತು



# ನಿಸ್ಪೃಹಾಣಾಮಧಿಕಾರ

ತ್ವಂ ರಾಜಾ ವಯಮಪ್ಯುಪಾಸಿತಗುರು ಪ್ರಜ್ಞಾಭಿಮಾನೋನ್ನತಾಃ
ಖ್ಯಾತಸ್ತ್ವಂವಿಭವೈರ್ಯಶಾಂಸಿ ಕವಯೋ ದಿಕ್ಷು ಪ್ರತನ್ವಂತಿ ನಃ।
ಇತ್ಥಂಮಾನದನಾತಿ ದೂರಮುಭಯೋರಪ್ಯಾವಯೋರಂತರಂ
ಯದ್ಯಸ್ಮಾಸು ಪರಾಂಗ್ಮುಖೋಸಿ ವಯಮಪ್ಯೇಕಾಂತತೋ
ನಿಸ್ಪೃಹಾ ॥೨೩॥

ನೀನು ಅರಸನಿರಬಹುದು. ಆದರೆ ನಾವೂ ನಿನಗಿಂತ ಕಡಿಮೆಯಿಲ್ಲ. ಏಕೆಂದರೆ ನಾವು ಕೂಡ ಒಳ್ಳೆಯ ಗುರುವಿನ ಸೇವೆಯನ್ನು ಮಾಡಿ, ಪಡೆದು ಕೊಂಡಿರುವಂಥ ಪ್ರಜ್ಞೆಯ ಅಭಿಮಾನದಿಂದ ಉನ್ನತಮಟ್ಟದಲ್ಲಿದ್ದೇವೆ. ಅರ್ಥಾತ್, ಓ ಅರಸನೆ! ನಿನಗೆ ನಿನ್ನ ರಾಜ್ಯದ ಬಗೆಗೆ ಅಭಿಮಾನವಿದ್ದರೆ ನಮಗೂ ನಮ್ಮಲ್ಲಿಯ ಬುದ್ಧಿಯ ಬಗ್ಗೆ ಅಭಿಮಾನವಿದೆ.ಒಂದು ವೇಳೆ ನೀನು ನಿನ್ನಲ್ಲಿಯ ಐಶ್ವರ್ಯದಿಂದ ಖ್ಯಾತಿಯನ್ನು ಗಳಿಸಿದ್ದರೆ, ನಮ್ಮ ಖ್ಯಾತಿಯನ್ನು ಯಶಸ್ಸನ್ನು ಕವಿಗಳು ಜಗತ್ತಿನ ನಾನಾ ದಿಶೆಗೂ ಪಸರಿಸಿ ಬಿಟ್ಟಿರುವರು. ಆದಕ್ಕಾಗಿ ಓ ಅರಸನೆ! ನಮಗೂ ನಿನಗೂ ಯಾವ ವಿಷಯದಲ್ಲಿಯೂ ಅಂತರವಿಲ್ಲ. ಭೇದವಿಲ್ಲ. ಹೀಗಿದ್ದೂ ನೀನು ಮುಖ ತಿರುಗಿಸುವಂತಿದ್ದರೆ ತಿರುಗಿಸಿಕೋ ಅದಕ್ಕೆ ನಮಗೇನೂ ಭಯವಿಲ್ಲ. ಏಕೆಂದರೆ ನಿನ್ನ ಹಾಗೆ ನಾವೂ ಮುಖವನ್ನು ತಿರುಗಿಸಿಕೊಳ್ಳಬಲ್ಲೆವು. ಹಾಗೆ ಮಾಡಲು ನಮಗೆ ಬರುವದಿಲ್ಲ ವೆಂದು ಭಾವಿಸಕೊಳ್ಳಬೇಡ

ಅಭುಕ್ತಾಯಾಂ ಯಸ್ಯಾಂ ಕ್ಷಣಮಪಿ ನಯಾತಂ ನೃಪಶತೈ-
ರ್ಭುವಸ್ತಸ್ಯಾ ಲೋಭೇ ಕ ಇವ ಬಹುಮಾನಃ ಕ್ಷಿತಿ ಭುಜಾಂ।

ತದಂಶ ಶ್ಯಾಪ್ಯಂಶೇ ತದವಯ ಬಲೇಶೇಪಿ ಪತಯೋ
ವಿಷಾದೇ ಕರ್ತವ್ಯೇ ವಿವಧತಿ ಜಡಾಃ ಪ್ರತ್ಯುತ ಮುದಂ ॥೨೪॥

ಈ ಪೃಥ್ವಿಯ ಮೇಲಿನ ಜನನನ್ನು ಕಂಡು ನನಗ ಕರುಣೆ ಬರುತ್ತದೆ. ಏಕೆಂದರೆ, ಈ ಜಗತ್ತಿನೊಳಗೆ ನೂರಾರು ಜನ ಅರಸರು ಹುಟ್ಟಿಬಂದು ಅರೆಗಳಿಗೆ ರಾಜ್ಯಭಾರ ಮಾಡಿ ಹೋಗಿಬಿಟ್ಟರು, ಈ ರೀತಿಯಾಗಿ ಪ್ರಭುತ್ವವನ್ನು ಪಡೆದಂಥ ಅರಸರಿಗೇನು ಹೆಚ್ಚಿನ ಮರ್ಯಾದೆಯು ದೊರೆಯುತ್ತದೆಯೆ? ಇಲ್ಲ. ಹೀಗಿದ್ದರೂ ಕೂಡ ಎಷ್ಟೋ ಜನ ಮೂರ್ಖ ಅರಸರು ಜಗತ್ತಿನೊಳಗೆ ಯಾವುದೋ ಒಂದು ಮೂಲೆಯ ಪ್ರಭುತ್ವವನ್ನು ಪಡೆದುಕೊಂಡು ತಮ್ಮಷ್ಟಕ್ಕೆ ತಾವು ಭೂಪತಿಗಳೆಂದು ಕರೆದು ಕೊಳ್ಳುತ್ತಾರೆ. ಇದಂತೂ ನಿಜಕ್ಕೂ ಆಶ್ಚರ್ಯದ ಸಂಗತಿಯಾಗಿದೆ. ಏಕೆಂದರೆ, ಭೂಮಿ, ಕಾಣಿಕೆ ಹಾಗು ಅರಸೊತ್ತಿಗೆಗಳು ಇಲ್ಲದ ಆತಂಕಗಳನ್ನು ತಂದೊಡ್ಡುವವು. ಹೀಗಿದ್ದೂ ಅವರು ಅಂಥದರಲ್ಲಿಯೇ ಸಂತುಷ್ಟರಾಗುತ್ತಿರುವರು. ಅಂದಾಗ ಅವರಲ್ಲಿಯ ಅಜ್ಞಾನದ ಬಗೆಗೆ ಯಾವ ಬುದ್ಧಿವಂತನಿಗೆ ಕರುಣೆ ಬರಲಿಕ್ಕಿಲ್ಲ ?

ಈ ಜಗತ್ತಿನ ಜನರ ನಡತೆಯು ಅತಿ ವಿಚಿತ್ರವಾಗಿರುವದು. ಯಾವ ವಸ್ತುವು ತುಚ್ಛವಾದುದೋ, ಯಾವುದರಿಂದ ಇಲ್ಲದ ಕಷ್ಟ ಕೀಟಲೆಗಳು ಬೆನ್ನು ಹತ್ತುವವೋ, ಅಂಥವುಗಳಲ್ಲ ಅವರು ಆನಂದವನ್ನು ಪಡೆಯುವರು ಇಷ್ಟೆ ಅಲ್ಲ. ಅಂಥವುಗಳ ಪ್ರಾಪ್ತಿಗಾಗಿ ಹಗಲಿರುಳು ಕಷ್ಟಪಟ್ಟು ಅವುಗಳನ್ನು ಸಂಗ್ರಹಿಸುವರು. ಇಂಥ ಜನರ ಅಜ್ಞಾನಕ್ಕೆ ಏನನ್ನಬೇಕು ? ನಿಜ ಹೇಳಬೇಕೆಂದರೆ ಅಂಥ ಅಜ್ಞರು ಕರುಣೆಗೆ ಪಾತ್ರರಾಗಿರುತ್ತಾರೆಯೇ ವಿನಾ ಸೊಕ್ಕಿನವರೆಂದು ಸರ್ವಥಾ ಭಾವಿಸಕೂಡದು ಎಂಬುದನ್ನು ಭರ್ತೃಹರಿಯು ಈ ಶ್ಲೋಕದಲ್ಲಿ ಹೇಳಿರುವನು.

ಮೃತ್ಪಿಂಡೋ ಜಲರೇಖಯಾ ವಲಯಿತಂ ಸರ್ವೋಽಪ್ಯಯಂ ನನ್ವಣುಃ
ಭೋಗೀಕೃತ್ಯ ಸ ಏವ ಸಂಯುಗಶತೈ ರಾಜ್ಞಾಂ ಗಣೈರ್ಭುಜ್ಯತೇ ।
ನೋದದ್ಯುರ್ದದತೇಥವಾ ಕಿಮಪಿ ತೇ ಕ್ಷುದ್ರಾ ದರಿದ್ರಾ ಭೃಶಂ

ಧಿಗ್ಧಿಕ್ತಾನ್ಪುರುಷಾ ಧನಾಂಧನಕಣಾ ನ್ವಾಂಭಂತಿ ತೇ ಭ್ಯೋ
ಪಿಯೋ ॥೨೫॥

ಈ ಪೃಥ್ವಿಯು ಜಲದ ರೇಖೆಯಿಂದ ಸುತ್ತುವರಿಯಲ್ಪಟ್ಟಂಥ ಒಂದು ಚಿಕ್ಕ ಮಣ್ಣಿನ ಮುದ್ದೆಯಾಗಿರುವದು. ಅನೇಕ ಅರಸರು ತಮ್ಮ ತಮ್ಮೊಳಗೆ ಯುದ್ಧಮಾಡಿ ಆ ಮಣ್ಣಿನ ಮುದ್ದೆಯೊಳಗಿನ ಚಿಕ್ಕ ಚಿಕ್ಕ ಭಾಗಗಳನ್ನು ಸ್ವಾಧೀನ ಪಡಿಸಿಕೊಂಡು, ಅವುಗಳ ಮೇಲೆ ತಮ್ಮ ಆಧಿಪತ್ಯವನ್ನು ನಡೆ ಸುತ್ತಾರೆ. ಅರ್ಥಾತ್ ಅಲ್ಲಿ ತಾವು ರಾಜ್ಯವನ್ನಾಳುತ್ತಾರೆ. ಹೀಗಿರುವಾಗ ಅಂಥ ಕ್ಷುದ್ರ ಅರಸರನ್ನು ಅವರಲ್ಲಿ ದಾನವನ್ನೀಯುವಂಥ ಯೋಗ್ಯತೆಯು ಇವೆಯೋ ಅಥವ ಇಲ್ಲವೋ ಎಂಬುದನ್ನು ಕೂಡ ಕಂಡುಕೊಳ್ಳದೆ ಅವರನ್ನು ಮಹಾದಾನಿ ಯೆಂದು ಕರೆಯುವಂಥ, ಹೊಗಳುತ್ತ ಹೊರಟಂಥ ಭಂಡ ಪುರುಷರಿಗೆ ಧಿಕ್ಕಾರವಿರಲಿ. ಏಕೆಂದರೆ ಆ ಅರಸರು ತಾವೇ ಅಲ್ಪ ಭೂಮಿಗಾಗಿ ಹೊಡೆದಾಡುತ್ತಿರುವಾಗ ನೆತ್ತರ ಕಾವಲವನ್ನು ಹರಿಸುತ್ತಿರುವಾಗ ಎರಡನೆಯ ವರಿಗೇನು ಕೊಡಬಲ್ಲರು ?

ಹೊಗಳುವದಕ್ಕೂ ಪ್ರಶಂಸಿಸುವದಕ್ಕೂ ಒಂದು ಮಿತಿ ಇರುತ್ತದೆ. ಹೊಗಳಿಕೆಯು ಆ ಮಿತಿಯ ಗೆರೆಯನ್ನು ದಾಟಕೂಡದು. ಅಂದರೆ ಅದರಿಂದ ಹೊಗಳುವವನಿಗೂ, ಹೊಗಳಿಸಿಕೊಳ್ಳುವವನಿಗೂ ಮರ್ಯಾದೆ ಬರುವದು. ಆದರೆ ಇವನ್ನೆಲ್ಲ ಕೂಲಂಕಷವಾಗಿ ವಿಚಾರಮಾಡುವವನು. ಇಂದು ಜಗತ್ತಿ ನೊಳಗೆ ಎಷ್ಟು ಜನರಿದ್ದಾರೆ ? ಅಂಥವರು ಭರ್ತೃಹರಿಯ ಕಾಲದಲ್ಲಿಯೂ ಬಹಳಷ್ಟು ಜನರಿರಲಿಲ್ಲವೆಂಬುದು ಪ್ರಸ್ತುತ ಶ್ಲೋಕದಿಂದ ವ್ಯಕ್ತವಾಗುವದು. ಅಂದ ಮೇಲೆ ಇಂದಿನವರ ಪಾಡೇನು?

ನಿಸ್ಪೃಹಾಣಾಮಧಿಕಾರ ಮುಗಿಯಿತು.



# ದುರ್ಭಗ ಸೇವಕ ವಾಕ್ಯ

ನ ನಟಾ ನ ವಿಟಾನಮು ನ ಗಾಯಕಾಃ ನ ಪರ ದ್ರೋಹ ಬುದ್ಧ।
ನೃಪಸದ್ಮನಿ ನಾಮು ಕೇವಯಂ ಕುಚ ಭಾರೋನ್ನಮಿತಾ
ನಯೋಕ್ಷಿತ: ॥೨೬॥

ನಾವು ನಟರೂ ಅಲ್ಲ. ವಿಟರೂ—ಪರಸ್ತ್ರೀಲೋಲಪರೂ—ಅಲ್ಲ; ಸಂಗೀತಗಾರರೂ ಅಲ್ಲ. ಎರಡನೆಯವರಿಗೆ ದ್ರೋಹ ಬಗೆಯಬೇಕೆಂದು ದುರ್ಬುದ್ಧಿಯುಳ್ಳವರಂತೂ ಅಲ್ಲವೇ ಅಲ್ಲ. ಮತ್ತು ಸ್ತನಗಳ ಭಾರದಿಂದ ಭಾಗಿರುವಂಥ ಸ್ತ್ರೀಯರೂ ಅಲ್ಲ. ಅಂದಾಗ ನಾವು ಅರಸನ ಒಡ್ಡೋಲಗದೊಳಗೆ ಹೋಗುವದರಿಂದ ಆಗುವ ಲಾಭವಾದರೂ ಏನು? ಏಕೆಂದರೆ ಅರಸನ ಒಡ್ಡೋಲಗದಲ್ಲಿ ಮೇಲೆ ಕಾಣಿಸಲಾಗಿರುವಂತಹ ಗುಣಗಳುಳ್ಳವರಿಗೆ ಮನ್ನಣೆ ದೊರೆಯುತ್ತದೆಯೆ ವಿನಾ ವಿದ್ವತ್ತಿಗಲ್ಲ.

ಇಂದು ನಾವು, ವಿದ್ವತಿಗೆ ಸರಿಯಾದ ಮನ್ನಣೆಯು ದೊರೆಯುವದಿಲ್ಲ. ಎಂಥವರೋ ಬಹುಮಾನಗಳನ್ನು ಪಡೆಯುತ್ತಾರೆ ಎಂದು ಹೇಳುವದನ್ನು ಕೇಳುತ್ತೇವೆ. ಆದರೆ ಈ ಪರಿಪಾಠವು ಕೇವಲ ಇಂದಿನದೇ ಅಲ್ಲ. ಭರ್ತೃಹರಿಯ ಕಾಲದಿಂದಲೂ ಇದ್ದಿತು, ಎಂಬದು ಈ ಶ್ಲೋಕದಿಂದ ವ್ಯಕ್ತವಾಗುವದು ಅಂದಾಗ ಇಂದು ಎಲ್ಲೆಡೆಗೂ ನಡೆಯುತ್ತಿರುವ ಅನ್ಯಾಯವನ್ನು ಕಂಡು ಮರಗುಬೇಕಾಗಿಲ್ಲ. ವ್ಯಥೆ ಪಡಬೇಕಾಗಿಲ್ಲ. ಏಕೆಂದರೆ ಈ ಬಗೆಯ ಪ್ರಣಾಲಿಯು ಜಗತ್ತು ಹುಟ್ಟಿದಂದಿನಿಂದ ನಡೆದು ಬಂದಿರುವದಾಗ, ಆ ಬಗ್ಗೆ ವಿಚಾರ ಮಾಡುವದಾಗಲಿ, ವ್ಯಥೆ ಪಡುವದಾಗಲಿ, ವ್ಯರ್ಥವೆಂದು ಧಾರಾಳವಾಗಿ ಹೇಳಬಹುದು. ಅರ್ಥಾತ್, ನಟನೆ ಮಾಡುವವರಿಗೆ, ಪರಸ್ತ್ರೀಯರಲ್ಲಿ ಅನುರಕ್ತರಾಗಿರುವವರಿಗೆ ಯಾವಾಗಲೂ ಎರಡನೆಯವರಿಗೆ ದ್ರೋಹ ಬಗೆದು ಸ್ವಾರ್ಥವನ್ನು ಸಾಧಿಸಿಕೊಳ್ಳುವಂಥ ನೀಚರಿಗೆ ಹಾಗು

ಸುಂದರ ಸ್ತ್ರೀಯರಿಗೆ ದೊರೆಯುವಷ್ಟು ಮರ್ಯಾದೆಯು ವಿದ್ವತ್ತಿಗೆ ದೊರೆಯುವದಿಲ್ಲ.

ಪುರಾವಿದ್ವತ್ತಾ ಸೀದು ಪಶಮವತಾಂ ಕ್ಲೇಶಹತಯೇ
ಗತಾಕಾಲೇನಾಸೌ ವಿಷಯಸುಖ ಸಿದ್ಧ್ಯೈವಿಷಯಿಣಾಂ|
ಇದಾನಿಂ ಸಂಪ್ರೇಕ್ಷ್ಯ ಕ್ಷಿತಿತಲಭುಜಃ ಶಾಸ್ತ್ರ ವಿಮುಖಾ-
ನಹೋಕಷ್ಟಂ ಸಾಽಪಿ ಪ್ರತಿದಿನಭಧೋಽಧಃ ಪ್ರವಿಶತಿ ||೨೭||

ವಿದ್ಯೆಯು ಮೊದಲು ಪಂಡಿತೋತ್ತಮರ ಚಿತ್ತದಕ್ಲೇಶಗದರೂ ಳನ್ನು ಮಾಡುತ್ತಿದ್ದಿತು. ಅರ್ಥಾತ್ ಪಂಡಿತರ ಮನದ ಕ್ಲೇಶಗಳನ್ನು ಇಲ್ಲವಾಗಿ ಸುವದಕ್ಕೋಸುಗ ವಿದ್ಯೆಯು ಇದ್ದಿತು. ಆದರೆ ಬರ ಬರುತ್ತ-ದಿನಗಳೆ ದಂತೆ ಆ ವಿದ್ಯೆಯು ಕಾಮುಕ ಪುರುಷರ ವಿಷಯ ಸುಖಗಳನ್ನು ಒದಗಿಸು ವಂಥ ಸಾಧನವಾಗಿ ಬಿಟ್ಟಿತು. ಈಗಲಂತೂ ವಿದ್ಯೆಯು ಇನ್ನೂ ದಾರುಣ ಪರಿಸ್ಥಿತಿಯಲ್ಲಿರುವದು. ಅಂದರೆ ಈಗಿನ ಅರಸರು ಶಾಸ್ತ್ರವಿಮುಖರಾಗಿರುವ ದನ್ನು ಗಮನಿಸಿ ಆ ವಿದ್ಯೆಗೆ ಅಧೋಗತಿಯು ಪ್ರಾಪ್ತವಾಗತೊಡಗಿರುವದು.

ವಿದ್ಯೆಯು ಯಾವಾಗಲೂ ಉನ್ನತಮಟ್ಟದಲ್ಲಿಯೇ ಇರಬೇಕು. ಅದು ಕಾಮುಕ ಪುರುಷರಿಗೆ ಸಕಲ ಭೋಗ-ಭಾಗ್ಯಗಳನ್ನು ನೀಡುವಂಥ ಸಾಧನವಾಗಬಾರದು. ಒಂದು ವೇಳೆ ಹಾಗಾದುದೇ ಆದರೆ ವಿದ್ಯೆಯು ಅಧೋಗತಿಗಿಳಿಯಿತೆಂದು ಭಾವಿಸಿದರೆ ತಪ್ಪಾಗಲಾರದು.

ದುರ್ಭಗ ಸೇವಕ ವಾಕ್ಯ ಮುಗಿಯಿತು



# ಅಹಂಕಾರ ಪುರುಷರ ಕಥನ

ಸ ಜಾತಃ ಕೋಽಪ್ಯಾಸೀನ್ಮದ ನರಿಪುಣಾ ಮೂರ್ಧ್ನಿ ಧವಲಂ
ಕಪಾಲಂ ಯಸ್ಯೋಚ್ಚೈರ್ವಿನಿಹಿತಮಲಂಕಾರ ವಿಧಯೇ ।
ನೃಭಿಃ ಪ್ರಾಣತ್ರಾಣ ಪ್ರವಣಮತಿಭಿಃ ಕೈಶ್ಚಿದಧುನಾ
ನಮದ್ಭಿಃ ಕಃ ಪುಂಸಾಮಯುತುಲದರ್ಪಜ್ವರಭರಃ ॥೨೮॥

ಜಗತ್ತು ಹಾಗು ಜಗತ್ತಿನ ಜನರು ವಿಚಿತ್ರಮಯರಾಗಿದ್ದಾರೆ. ಏಕೆಂದರೆ ಕಾಮಾರಿಯಾದ ಪರಮೇಶ್ವರನ ಶೋಭೆಗಾಗಿ ಅವನ ಮಸ್ತಕವನ್ನೇರಿ ಕುಳಿತಂಥ ಕಪಾಲಗಳುಳ್ಳ ಪುಣ್ಯವಂತರೂ ಈ ಭೂಮಿಯಲ್ಲಿ ಆಗಿ ಹೋದರು. ಆದರೆ ಹೇಗೋ ಉಪಜೀವನವನ್ನು ಸಾಗಿಸಿರುವಂಥ ಕೆಲವರಿಂದ ಹೊಗಳಿಸಿಕೊಂಡ, ಹೊಗಳಿಸಿಕೊಳ್ಳುತ್ತಿರುವ ಮನುಷ್ಯನಿಗೆ ದುರಭಿಮಾನವೆಂಬ ಜ್ವರವು ವ್ಯಾಪಿಸಿಕೊಂಡು ಅವನು ಗರ್ವದಿಂದ ಮೆರೆಯುತ್ತಿರುವದನ್ನು ಕಂಡು ನನಗೆ ಅತೀವ ಅಚ್ಚರಿಯುಂಟಾಗುತ್ತದೆ.

ಈ ಭೂಮಿಯು ನಾನಾ ಬಗೆಯ ಜನರನ್ನು ಕಂಡಿದೆ, ಕಾಣುತ್ತಿದೆ, ಮುಂದೆಯೂ ಕಾಣುವದು. ಇಲ್ಲಿ ಅತ್ಯಂತ ಮೇಧಾವಿಗಳೂ, ಪರಮೇಶ್ವರನನ್ನು ಒಲಿಸಿಕೊಂಡಂಥವರೂ, ಆ ಶಿವನ ಮುಕುಟಕ್ಕೆ ಅಲಂಕಾರಪ್ರಿಯರಾದವರೂ ಆಗಿ ಹೋದರು. ಅವರಿಗೆ ಗರ್ವ ಹಾಗು ದುರಭಿಮಾನಗಳೆಂಬುವುಗಳು ಗೊತ್ತೇ ಇರಲಿಲ್ಲ. ಅಂಥ ಮಹಾ ಮಹಿಮರನ್ನು ಕಂಡಂಥ ಈ ಜಗತ್ತು, ಹೊಟ್ಟೆ ಪಾಡಿಗಾಗಿ, ಕಂಡ ಕಂಡವರನ್ನು ಬಾಯಿ ತುಂಬ ಹೊಗಳುವಂಥ ಹೊಗಳು ಭಟರನ್ನು ಹಾಗು ಅಂಥವರ-ಅಂಥ ಹೊಗಳು ಭಟರ— ಹೊಗಳುವಿಕೆಯಿಂದ ಉಬ್ಬಿ ತಾವೇ ತಾವಾಗಿ ಗರ್ವದಿಂದ ಮೆರೆಯುವಂಥವರನ್ನೂ ಕಂಡಿದೆ, ಕಾಣುತ್ತಿದೆ. ಮುಂದೆಯೂ ಕಾಣುವದು.

ಅರ್ಥಾನಾಮೀಶಿಷೇತ್ವಂ ವಯಮಪಿ ಚ ಗಿರಾಮೀಸ್ಮಹೇ
ಯಾವದರ್ಥಂ

ಶೂರಸ್ತ್ವಂ ವಾದಿ ದರ್ಪಜ್ವರ ಶಮನ ವಿಧಾವಕ್ಷಯಂ ಪಾಟವಂ ನಃ|
ಸೇವಂತೇ ತ್ವಾಂ ಧನಾಢ್ಯ ಮತಿ ಮಲಹತಯೇ ಮಾಮಪಿಶ್ರೋತು
ಕಾಮಾ
ಮಯ್ಯಾಪ್ಯಾಸ್ಥಾ ನ ಚೇತ್ತತ್ತ್ವಯಿ ಮಯ ಸುತರಾಮೇಷ ರಾಜಂಗ
ತೋಽಸ್ಮಿ ||೨೯||

ಓ, ಅರಸನೆ! ನೀನು ಐಶ್ವರ್ಯದ ಒಡೆಯನಾಗಿದ್ದರೆ ನಾವೂ ಕಡಿಮೆ ಯವರಲ್ಲವೆಂದು ತಿಳಿ. ಏಕೆಂದರೆ ಶಬ್ದಗಳಲ್ಲಿ ಅರ್ಥವು ಎಲ್ಲಿಯ ವರೆಗೆ ಇರುವದೋ ಅಲ್ಲಿಯ ವರೆಗೆ ನಾವು ವಾಕ್ಪತಿಗಳಾಗಿರುವೆವು. ಅರ್ಥಾತ್ ವಾಣಿಗೆ ಈಶ್ವರರಾಗಿರುವೆವು. ನೀನು ವೀರನೂ, ಪರಾಕ್ರಮಿಯೂ ಆಗಿದ್ದರೆ ನಾವು, ಪ್ರತಿಯೊಂದು ಮಾತಿಗೂ ವಾದವನ್ನು ಹೂಡುವಂಥವರ ಅಹಂಕಾರ ರೂಪದ ಜ್ವರವನ್ನು ಇಳಿಸುವದರಲ್ಲಿ ಸಮರ್ಥರಾಗಿರುವೆವು. ಓ, ಭೂಪಾಲನೆ! ಐಶ್ವರ್ಯವಂತರು ನಿನ್ನ ದಾಸಾನುದಾಸರಾಗಿರಬಹುದು, ನೀನು ಹೇಳಿದಂತೆ ಕೇಳುತ್ತಿರಬಹುದು. ಅರ್ಥಾತ್ ಅವರು ನಿನ್ನ ಸೇವಕರಂದೆ ವರ್ತಿಸುತ್ತಿರ ಬಹುದು. ಆ ದಿಶೆಯಲ್ಲಿ ನಾವೂ ಕಡಿಮೆಯವರಲ್ಲ! ಏಕೆಂದರೆ ಬುದ್ಧಿಯ ಮಾಲಿನ್ಯವನ್ನು ಕಳೆದುಕೊಳ್ಳಲೋಸುಗ ಶಾಸ್ತ್ರಶ್ರವಣಕ್ಕಾಗಿ ಬಂದು ನಮ್ಮ ಸೇವೆ ಮಾಡುವವರೂ ಇದ್ದಾರೆ. ಈ ರೀತಿಯಾಗಿ ನಾವೀರ್ವರೂ ಸರಿ ಸಮಾನರಾಗಿಯೇ ಇರುವೆವು. ಅಂತೆಯೇ ನೀನು ನಮ್ಮನ್ನು ಶ್ರದ್ಧೆ ಯಿಂದ ಕಾಣದಿದ್ದರೆ ನಾವೂ ನಿನ್ನತ್ತ ಗಮನ ವೀಯದೇ ಹೊರಟು ಬಿಡುತ್ತೇವೆ.

ಅಹಂಕಾರ ಪುರುಷರ ಕಥನ ಮುಗಿಯಿತು.



# ನಿರ್ಮಮತಾ ಸ್ವರೂಪ

ಅತಿಕ್ರಾಂತ: ಕಾಲೋ ಲಟಭಲಲನಾ ಭೋಗ ಸುಭಗೋ
ಭ್ರಮಂತ: ಶ್ರಾಂತಾ: ಸ್ಮ: ಸುಚಿರಮಿಹ ಸಂಸಾರಸರಣೌ ।
ಇದಾನೀ ಸ್ವ: ಸಿಂಧೋಸ್ತಟಭುವಿ ಸಮಾಕ್ರಂದನಗಿರ:
ಸುತಾರೈ: ಫೂತ್ಕಾರೈ: ಶಿವ ಶಿವ ಶಿವೇತಿ ಪ್ರತನುಮ: ॥೩೦॥

ಸುಂದರ ಸ್ತ್ರೀಯರೊಂದಿಗೆ ಅತ್ಯಾನಂದದಿಂದ ಉಪಭೋಗಿಸುವಂಥ ಆನಂದದ ಸಮಯವು ಮೀರಿ ಹೋಯಿತು. ಅರ್ಥಾತ್ ಯೌವನವು ಇಲ್ಲವಾಯಿತು. ಹಾಗು ನಾವು ಬಹು ಸಮಯದ ವರೆಗೆ ಈ ಸಂಸಾರ ಮಾರ್ಗದಲ್ಲಿ ತಿರು ತಿರುಗಿ ಬೇಸತ್ತೆವು. ಅಂತೆಯೇ ಈಗ ನಾವು ಗಂಗಾ ನದಿಯ ತೀರದಲ್ಲಿ ಕುಳಿತುಕೊಂಡು, ಹೇಯವಾದ ಈ ಸಂಸಾರವನ್ನು ನಿಂದಿಸುತ್ತ ಶಿವ ಶಿವಾ ಎಂದು ಯಾವಾಗಲೂ ಶಿವಚಿಂತನೆಯಲ್ಲಿಯೇ ಕಾಲವನ್ನು ಕಳೆಯುತ್ತಿರುವೆವು.

ಮಾನೇಮ್ಲಾಯಿನಿ ಖಂಡಿತೇ ಚ ವಸುನಿ ವ್ಯರ್ಥಂ ಪ್ರಯಾತ್ರೇನಿರ್ಥಿ
ಕ್ಷೀಣೋ ಬಂಧು ಜನೇ ಗತೇ ಪರಿಜನೇತಾ ನಷ್ಟೇ ಶನೈರ್ಯೌವನೇ !
ಯುಕ್ತಂ ಕೇವಲ ಮೇತದೇವ ಸುಧಿಯಾಂ ಯಜ್ಜುಹ್ನು ಕನ್ಯಾಪಯ:
ಪೂತಗ್ರಾವಗಿರೀಂದ್ರ ಕಂದನದರಂಕುಂಜೇ ನಿವಾಸ: ಕ್ವಚಿತ್ ॥೩೧॥

ಯಾವನೊಬ್ಬನ ಪ್ರತಿಷ್ಠೆಗೆ ಭಂಗ ಬಂದಿತೆಂದರೆ ಇಲ್ಲವೆ ಪ್ರತಿಷ್ಠೆಯು ಭಂಗವಾಯಿತೆಂದರೆ, ಅವನಲ್ಲಿಯ ಹಣವು ಹಾಳಾಗಿ ಹೋಯಿತೆಂದರೇ ಭಿಕ್ಷುಕರು ಅವನ ಮನೆಯ ಬಾಗಿಲಿನಿಂದ ಭಿಕ್ಷೆ ಸಿಗದೆ–ಪಡೆಯದೆ–ಮರಳಿದರೆ, ಬಂಧು ವರ್ಗವು ನಾಶವಾದರೆ, ಪರಿಚಾರಕ ವರ್ಗದೊಳಗಿದ್ದಂಥವರು

ತ್ಯಜಿಸಿ ಹೋದರೆ; ಹಾಗುದಿನ್ನಗಳೆದಂತೆ ತಾರುಣ್ಯವು ನಷ್ಟವಾಗುತ್ತ ನಡೆದಿದ್ದರೆ, ಅಂಥವರು ತತ್ ಕ್ಷಣವೆ ತಾವಿದ್ದ ನಗರವನ್ನು ಬಿಟ್ಟುಬಿಡಬೇಕು. ಹಾಗು ಗಂಗೆಯು ಜಲದಿಂದ ಪವಿತ್ರವಾಗಿರುವಂಥ ಹಿಮಾಲಯ ಪರ್ವತದೊಳಗಿನ ಯಾವುದಾದರೊಂದು ಗುಹೆಯೊಳಗೆ ವಾಸವಾಡತಕ್ಕದ್ದು.

ಪರೇಷಾಂ ಚೇತಾಂಸಿ ಪ್ರತಿದಿವಸಮಾರಾಧ್ಯ ಬಹುಧಾ
ಪ್ರಸಾದಂ ಕಿಂ ನೇತುಂ ವಿಶತಿ ಹೃದಯಂ ಕ್ಲೇಶಕಲಿಲಂ
ಪ್ರಸನ್ನೇ ತ್ವಯ್ಯಂತ: ಸ್ವಯಮುದಿತ ಚಿಂತಾಮಣಿ ಗುಣೋ
ವಿಮುಕ್ತ: ಸಂಕಲ್ಪ: ಕಿಂ ಭಿಲಷಿತಂ ಪುಷ್ಯತಿ ನ ತೇ ॥೩೨॥

ಓ ಹೃದಯವೇ! ನೀನೆಂತಹ ತಿಳಿಗೇಡಿ? ಅನುಗ್ರಹಿಸಲೋಸುಗ ನೀನು ಪ್ರತಿದಿನವೂ ನಾನಾ ಬಗೆಯಿಂದ ಎರಡನೆಯವರ ಮನವನ್ನು ಆರಾಧಿಸುತ್ತ ಕ್ಲೇಶದ ಕೆಸರಿನೊಳಗೆ ಏತಕ್ಕೆ ಸಿಲುಕುತ್ತಿರುವೆ? ನೀನು ಅಂತ:ಕರಣವಲ್ಲಿ ಪ್ರಸನ್ನನಾಗಿ ನಿನ್ನಷ್ಟಕ್ಕೆ ನೀನೇ ಚಿಂತಾಮಣಿಯ ಗುಣಗಳನ್ನು ಪ್ರಕಟಗೊಳಿಸಿದಾಗ ಅರ್ಥಾತ್ ಶಾಂತಿ ಮತ್ತು ಸಂತೋಷಗಳನ್ನು ಹಸ್ತಗತ ಮಾಡಿಕೊಂಡಾಗ, ನಿನ್ನ ಅಭಿಲಾಷೆಯು, ಮನದಿಚ್ಛೆಯು ಪೂರ್ಣವಾಗದೆಯೇ ಇರುತ್ತದೆಯೇ? ಅವಶ್ಯವಾಗಿ ಪೂರ್ಣವಾಗುವದು

ಸುಖ-ಶಾಂತಿಗಳಿಗಾಗಿ ಹಗಲು-ರಾತ್ರಿ ಎರಡನೆಯವರನ್ನು ಹೊಗಳುವದರಲ್ಲಿ ಏನೂ ಅರ್ಥವಿಲ್ಲ. ಹಾಗೆ ಮಾಡುವದರಿಂದ ತನ್ನಲ್ಲಿಯ ಏನತೆಯನ್ನು ಪ್ರದರ್ಶಿಸಿದಂತಾಗುವದು. ಆದಕ್ಕಾಗಿ ಇತರರನ್ನು ವಿನಾ ಕಾರಣವಾಗಿ ಹೊಗಳುತ್ತ ಹೋಗುವದು, ಒಳ್ಳೆಯದಲ್ಲವೆಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ನಿರ್ಮಲತಾ ಸ್ವರೂಪ ಮುಗಿಯಿತು



# ಭೋಗ ಪದ್ಧತಿ

ಭೋಗೇ ರೋಗ ಭಯಂ ಕುಲೇಚ್ಯುತಿ ಭಯಂ ವಿತ್ತೇ
ನೃಪಾಲಾದ್ಭಯಂ
ಮೌನೇ ದೈನ್ಯ ಭಯಂ ಬಲೇರಿಪು ಭಯಂ.ರೂಪೇ ಜರಾಯಾಭಯಂ।
ಶಾಸ್ತ್ರೇವಾದಿ ಭಯಂ ಗುಣೇ ಖಲ ಭಯಂ ಕಾಯೇ
ಕೃತಾಂತಾದ್ಭಯಂ
ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ಶಂಭೋ: ಪದಂ
ನಿರ್ಭಯಮ್ ||೩೩||

ಅತೀವ ಭೋಗ ವಿಲಾಸದಿಂದ ರೋಗದ ಭಯವಿರುತ್ತದೆ. ಅದೇ ರೀತಿಯಾಗಿ, ಕುಲದಿಂದ ಕ್ಷತಿಯು, ಹೆಚ್ಚು ಐಶ್ವರ್ಯವಿದ್ದರೆ ಅರಸನ, ಹೆಚ್ಚು ಮಾತನಾಡುವದು ಒಳ್ಳೆಯದಲ್ಲವೆಂದು ಬಗೆದು ಮೌನಿಯಾಗಿದ್ದರೆ, ದೀನನಾಗಿರುವನೆಂಬ, ಅತೀವ ಬಲಶಾಲಿಯಾಗಿದ್ದರೆ, ವೈರಿಗಳ, ಆಕರ್ಷಕ ಸೌಂದರ್ಯವಿದ್ದರೆ—ರೂಪವಿದ್ದರೆ ವೃದ್ಧಾಪ್ಯದ ಶಾಸ್ತ್ರಗಳಲ್ಲಿ ವಾದ—ವಿವಾದದ, ಗುಣಗಳಲ್ಲಿ ದುಷ್ಟತನದ, ಹಾಗೂ ಮಾನವನ ಶರೀರಕ್ಕೆ ಮೃತ್ಯುವಿನ ಭಯವು ಯಾವಾಗಲೂ ಇದ್ದೇ ಇರುವದು.ಈ ರೀತಿಯಾಗಿ ಜಗತ್ತಿನೊಳಗಿನ ಎಲ್ಲ ವಸ್ತುವಸ್ತುಗಳಿಗೂ ಒಂದಿಲ್ಲೊಂದು ಯಾವುದಾದರೊಂದು—ಭಯವು ಇದ್ದೇ ಇರುತ್ತದೆ. ಅದು ಎಂದಿಗೂ ತಪ್ಪಿದ್ದಲ್ಲ. ತಪ್ಪುವದೂ ಇಲ್ಲ. ಆದರೆ ಕೇವಲದೇವ ದೇವನಾದ ಮಹಾದೇವನ ಚರಣಗಳು ಮಾತ್ರ ಆ ಭಯದಿಂದ ನಿರ್ಲಿಪ್ತವಾಗಿರುವವು.

ಅಮೀಷಾಂ ಪ್ರಾಣಾನಾಂ ತುಲಿತ ಬಿಸಿನೀ ಪತ್ರ ಪಯಸಾಂ
ಕೃತೇಂ ಕಿಂ ನಾಸ್ಮಾಭಿರ್ವಿಗಲಿತ ವಿವೇಕೈರ್ವ್ಯವಸಿತಂ।

ಯದಾಢ್ಯಾ ಸಾಮಗ್ರೀ ದ್ರವಿಣಮದ ನಿಃಶಂಕ ಮನಸಾಂ,
ಕೃತಂ ವ್ರೀತ ಬ್ರೀಡೈರ್ನಿಜ ಗುಣಕಥಾ ಪಾತಕಮಪಿ ||೩೪||

ಕಮಲದ ಎಲೆಯ ಮೇಲಿನ ಜಲ ಬಿಂದುವಿನಂತೆ ಅಸ್ಥಿರವಾದ ಈ ಪ್ರಾಣಕ್ಕಾಗಿ ನಾವು ನಮ್ಮಲ್ಲಿಯ ವಿವೇಕವನ್ನು ಬದಿಗಿರಿಸಿ, ಎತೆಂತಹ ಕುಕಾರ್ಯಗಳನ್ನು ಮಾಡಲಿಲ್ಲ? ಅಂದರೆ ಮಾಡಬಾರದಂಥ ಕಾರ್ಯಗಳನ್ನು ಮಾಡಿದೆವೆಂದರ್ಥ. ಏಕೆಂದರೆ ನಾವು ಐಶ್ವರ್ಯದ ಮದದಿಂದ ಉನ್ಮತ್ತರಾಗಿರುವಂಥ ಹಣವಂತರೆದುರು ನಮ್ಮಲ್ಲಿಯ ಗುಣಗಳ ಕಥನ ರೂಪದ ಪಾತಕವನ್ನು ಮಾಡಿದೆವು. ಅಂದಾಗ ಇದಕ್ಕಿಂತ ಹೆಚ್ಚಿನ ಪಾತಕ ಕಾರ್ಯವು ಇನ್ನಾವುದಿದೆ?

ಎಲೆಯ ಮೇಲೆ ನಿಂತುಕೊಂಡಿರುವ ನೀರಿನ ಗುಳ್ಳೆಯಂತೆ ಅಸ್ಥಿರವಾದ ಈ ದೇಹಕ್ಕಾಗಿ– ಪ್ರಾಣಕ್ಕಾಗಿ ನಾವು ಏನೇನನ್ನೋ ಮಾಡುತ್ತಿದ್ದೇವೆ. ಪ್ರಾಣವು ನಿಜಕ್ಕೂ ಯಾವಾಗ ಹೋದೀತು. ಯಾವಾಗ ಏನಾದೀತು ? ಎಂದು ಖಂಡಿತವಾಗಿ ಹೇಳುವದು ಯಾರಿಂದಲೂ ಸಾಧ್ಯವಿಲ್ಲ. ಹೀಗಿರುವಾಗ ಇಂಥ ದೇಹಕ್ಕಾಗಿ; ಪ್ರಾಣಕ್ಕಾಗಿ ಹಣವಂತರೆದುರು ನಿಂತುಕೊಂಡು ಆವರನ್ನು ಹೊಗಳುವದಾಗಲಿ: ತಮ್ಮಲ್ಲಿಯ ಕಿರುಕಳವನ್ನು ಪ್ರದರ್ಶಿಸುವದಾಗಲಿ, ಪಾತಕವೆಂದೇ ತಿಳಿಯತಕ್ಕದ್ದು ಎಂಬುದು ಭರ್ತೃಹರಿಯ ಅಭಿಪ್ರಾಯ.

ಸಾರಮ್ಯಾ ನಗರೀ ಮಹಾನ್ಸ ನೃಪತಿ: ಸಾಮನ್ತ ಚಕ್ರಂ ಚ ತತ್,
ಪಾರ್ಶ್ವೇ ತಸ್ಯ ಚ ಸಾ ವಿದಗ್ಧ ಪರಿಪತ್ತಾಶ್ಚಂದ್ರ ಬಿಂಬಾನನಾ:|
ಉದ್ರಿಕ್ತ: ಸ ಚ ರಾಜಪುತ್ರ ನಿವ ಹಸ್ತೇ ವಂದಿನಾಸ್ತಾಃ ಕಥಾ:
ಸರ್ವಂ ಯಸ್ಯ ವಶಾದಗಾತ್ ಸ್ಮೃತಿಪಥಂ ಕಾಲಾಯ
ತಸ್ಮೈನಮ:

ಮೊದಲು ಈ ನಗರವು ಎಷ್ಟೊಂದು ಸುಂದರವಾಗಿದ್ದಿತು, ರಮಣೀಯವಾಗಿದ್ದಿತು! ಅರಸನು ಕೂಡ ಎಷ್ಟೊಂದು ಒಳ್ಳೆಯವನಾಗಿದ್ದ ಅಲ್ಲದೆ ಅವನ ರಾಜ್ಯವು ಎಷ್ಟೊಂದು ವಿಸ್ತಾರವಾಗಿದ್ದಿತು! ಆ ಅರಸನ ಸುತ್ತು

ಮತ್ತು ಯಾವಾಗಲೂ ದೊಡ್ಡ ಪಂಡಿತರು ಹಾಗು ಎಂತೆಂತಹ ಚಂದ್ರಮುಖಿಯರು ಇರುತ್ತಿದ್ದರು! ಎಷ್ಟೊಂದು ಜನ ವೀರರಾದ ರಾಜಕುಮಾರರ ಸಮೂಹವಿದ್ದಿತು! ಅವನ—ಆ ಅರಸನ ಸೆರೆಮನೆಯೊಳಗೆ ಎಷ್ಟೊಂದು ಜನ ಬಂದಿಳಿದಿದ್ದರು. ಅವರ-ಕೈದಿಗಳ-ಕಥೆಯೂ ಎಷ್ಟೊಂದು ವಿಚಿತ್ರವಾಗಿದ್ದಿತು! ಅಂತೆಯೇ ಅವೆಲ್ಲ ನಾಶವಾಗಿ ಕೇವಲ ಮಧುರ ಸ್ಮೃತಿಯಾಗಿ ಉಳಿದಿರುವಂಥ ಆ ಸಮಯಕ್ಕೆ ನಾವು ಅತ್ಯಂತ ಆದರದಿಂದ ನಮಸ್ಕಾರ ಮಾಡುತ್ತೇವೆ.

ವಯಂ ಯೇಭ್ಯೋ ಜಾತಾಶ್ಚಿರ ಪರಿಗತಾ ಏವ ಖಲು ತೇ
ಸಮಂ ಯೈಃ ಸಂವೃದ್ಧಾಃ ಸ್ಮೃತಿ ವಿಷಯತಾಂ ತೇಪಿ ಗಮಿತಾಃ।
ಇದಾನೀಮೇತೆ ಸ್ಮ: ಪ್ರತಿ ದಿವಸ ಮಾಸನ್ನ ಪತನಾ
ಗತಾಸ್ತುಲ್ಯಾವಸ್ಥಾಂ ಸಿಕತಿಲ ನದೀ ತೀರ ತರುಭಿಃ ॥೩೬॥

ನಮ್ಮನ್ನು ಹುಟ್ಟಿಸಿದಂಥ ತಂದೆ ತಾಯಿಗಳು ಸ್ವರ್ಗಕ್ಕೆ ಹೋಗಿ ಬಹು ಸಮಯವಾಯಿತು. ನಮ್ಮೊಂದಿಗೆ ಬೆಳೆದವರು ಕೂಡ ಕೇವಲ ಸ್ಮೃತಿ ಪಥಕ್ಕೆ ಪಾತ್ರರಾದರು. ಈಗ ನಾವು ಹೊಳೆಯ ದಂಡೆಯ ಮೇಲಿನ ಉಸುಕಿನಲ್ಲಿ ಬೆಳೆದ ಮರವು ಈಗೋ ಇನ್ನೊಂದು ಗಳಿಗೆಗೋ ಬೀಳುವಂತೆ ನಮ್ಮ ದೇಹವು ದಿನ ದಿನಕ್ಕೆ ಮೃತ್ಯುವಿನತ್ತ ಸಮೀಪಿಸುತ್ತಿದೆ.

ಈ ಜಗತ್ತು ನಶ್ವರವಾದದ್ದು. ಇಲ್ಲಿಗೆ ಬಂದವರು ಅರ್ಥಾತ್ ಹುಟ್ಟಿ ಬಂದವರೆಲ್ಲರೂ ಕೊನೆಗೊಮ್ಮೆ ಸತ್ತು ಹೋಗಿದ್ದಾರೆ, ಹೋಗುತ್ತಿದ್ದಾರೆ. ಹುಟ್ಟಿಸಿದ ತಂದೆ—ತಾಯಿಗಳು ಇಲ್ಲವಾಗುತ್ತಾರೆ. ಬಾಲ್ಯದಲ್ಲಿ ಜೊತೆಗೆ ಆಡಿದ, ಗೆಳೆಯರು, ಬಂಧು-ಬಾಂಧವರು ಸಾಯುತ್ತಾರೆ. ಪತ್ನೀ—ಪುತ್ರರೂ ಸ್ಥಿರವಾಗಿ ಉಳಿಯುವದಿಲ್ಲ. ಕೆಲವರು ಮೊದಲೇ ಅಳಿಯಬಹುದು. ಮತ್ತೆ ಕೆಲವರು ತಡವಾಗಿ ಸ್ವರ್ಗಸ್ಥರಾಗಬಹುದು. ಅಂತೂ ಎಲ್ಲರೂ ಇಲ್ಲವಾಗುವದು ನಿಶ್ಚಿತ ಅಂತೆಯೇ ಈ ಜೀವನವು ಅನಿಶ್ಚಿತ..



ಪತ್ರಾನೇಕಃ ಕ್ವಚಿದಪಿ ಗೃಹೇ ತತ್ರ ತಿಷ್ಠತ್ಯ ಥೈಕೋ
ಯತ್ರಾಪ್ಯೇಕಸ್ತದನು ಬಹವಸ್ತತ್ರ ನೈಕೋಪಿ ಚಾಂತೇ|
ಇತ್ಥಂ ಚೇಮೌ ರಜನಿ ದಿವಸೌ ದೌಲಯಂದ್ವಾ ವಿವಾ ಕ್ಷೌ
ಕಾಲಃ ಕಾಲ್ಯಾ ಭುವನ ಫಲಕೇ ಕ್ರೀಡತಿ ಪ್ರಾಣ ಶಾರೈಃ ||೩೭||

ಇಂದಿಗೆ ಕೆಲ ಸಮಯದ ಹಿಂದೆ ಬಹಳಷ್ಟು ಜನರು ಇದ್ದಂಥ ಮನೆಯೊಳಗೆ ಇಂದು ಒಬ್ಬರೇ ಕಂಡು ಬರುತ್ತಾರೆ. ಅದೇ ರೀತಿಯಾಗಿ ಒಬ್ಬನೇ ಇದ್ದಂಥ ಮನೆಯಲ್ಲಿ ಬಹಳಷ್ಟು ಜನರು ಕಾಣುತ್ತಿದ್ದಾರೆ. ಹೀಗಿದ್ದರೂ ಕೊನೆಗೆ ಒಬ್ಬನೂ ಉಳಿಯುವದಿಲ್ಲ, ಎಲ್ಲರೂ ಇಲ್ಲವಾಗುವರು- ಇದರ ಮೇಲಿಂದ ಕಾಲ ಪುರುಷನ ಮಹಿಮೆಯು, ಎಷ್ಟೊಂದು ವಿಚಿತ್ರವಾಗಿದೆ· ಅವನು ಜಗತ್ತಿನೊಳಗಿನ ಪ್ರಾಣಿಗಳೊಂದಿಗೆ ಯಾವ ರೀತಿಯಿಂದ ಆಟ ವಾಡುತ್ತಿದ್ದಾನೆ ಎಂಬುದು ವ್ಯಕ್ತವಾಗುವದು.

ಕಾಲ ಪುರುಷನ ಮಹಿಮೆಯು ಅತ್ಯಂತ ವಿಚಿತ್ರವಾದುದಾಗಿದೆ. ಹೀಗೆಯೇ ಇದೆ ಎಂದು ಹೇಳುವದು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಇಂದು ಒಂದು ಮನೆಯಲ್ಲಿ ನಾವು ಹತ್ತೆಂಟು ಜನರನ್ನು ನೋಡಿದರೆ ಮುಂದೆ ಕೆಲವೇ ದಿವಸಗಳಲ್ಲಿ ಆ ಮನೆಯೊಳಗೆ ಕೇವಲ ಒಬ್ಬಿಬ್ಬರು ಮಾತ್ರ ಉಳಿದಿರುತ್ತಾರೆ. ಕೆಲವು ಸಮಯಗಳಲ್ಲಿಯಂತೂ ಒಬ್ಬರೂ ಉಳಿದಿರುವದಿಲ್ಲ. ಮತ್ತೆ ಕೆಲವು ಕಡೆಗೆ ಇಮ್ಮಡಿ ಮುಮ್ಮಡಿಯಾಗಿ ಬೆಳೆದಿರುತ್ತದೆ. ಆದರೂ ಕೊನೆಗೆ ಯಾರೂ ಉಳಿಯುವದಿಲ್ಲ. ಎಲ್ಲರೂ ಒಂದಿಲ್ಲೊಂದು ದಿನ ಕಾಲನ ದವಡೆಯೊಳಗೆ ಸಿಕ್ಕು ಬಿಡುತ್ತಾರೆ.

ತಪಸ್ಯಂತ: ಸಂತ: ಕಿಮಧಿನಿವಸಾಮಃ ಸುರನದಿಂ
ಗುಣೋದಾರಾಂದಾರಾನುಮತ ಪರಿಚರಾಮಃ ಸವಿನಯಂ|
ಪಿಬಾಮ: ಶಾಸ್ತ್ರೌಘಾನುತ ವಿವಿಧ ಕಾವ್ಯಾಮೃತ ರಸಾನ್,
—ನ ವಿದ್ಮ: ಕಿಂ ಕರ್ಮ: ಕತಿಪಯ ನಿಮೇಷಾಯು ಜನೇ ||೩೮||

ಕೇವಲ ನಿಮಿಷ ಮಾತ್ರ ಸ್ಥಿರವಾಗಿರುವಂಥ ಅರ್ಥಾತ್ ಬಹುಕಾಲ ಇರದೇ ಇರುವಂಥ ಅಲ್ಪಾವಧಿಯ ಶರೀರದಿಂದ ನಾವು ಏನು ಮಾಡತಕ್ಕ

ಷ್ಟೆಂಬುದು ನಮಗೆ ಗೊತ್ತಿಲ್ಲ. ಅಂದರೆ ತಪಸ್ಸು ಮಾಡುತ್ತ ಗಂಗಾ ನದಿಯ ತೀರದಲ್ಲಿಯೇ ವಾಸಿಸಬೇಕೋ, ಸದ್ಗುಣ ಭರಿತಳಾದ ತರುಣಿಯ ಸೇವೆಯನ್ನು ಮನಃಸ್ಸು ಗೊಟ್ಟು ಮಾಡಬೇಕೋ ಅಥವ ಶಾಸ್ತ್ರ ವೇದಾಂತ ಇಲ್ಲವೆ ಕಾವ್ಯ ರೂಪದ ಅಮೃತದ ಸೇವನೆಯಲ್ಲಿ ಸಮಯವನ್ನು ಕಳೆಯಬೇಕೋ ಒಂದೂ ತಿಳಿಯಪಂತಾಗಿದೆ

ಕೇವಲ ಅಲ್ಪ ಸಮಯದ ವರೆಗೆ ಮಾತ್ರ ಇರುವಂಥ ಈ ನಶ್ವರವಾದ ಯಾವ ರೀತಿಯ ಕೆಲಸವನ್ನು ತೆಗೆದುಕೊಳ್ಳಬೇಕೆಂಬುದು ನಮಗೆ ಗೊತ್ತಿಲ್ಲ. ಈ ಶರೀರವನ್ನು ತಪಸ್ಸಿನ ಕಾರ್ಯದಲ್ಲಿ ತೊಡಗಿಸಬೇಕೋ, ಸುಂದರ ತರುಣಿಯರೊಂದಿಗೆ ಕಳೆಯಬೇಕೋ ಇಲ್ಲವೆ ಶಾಸ್ತ್ರ ವೇದಾಂತಗಳ ಅಧ್ಯಯನದಲ್ಲಿ ಕಳೆಯಬೇಕೋ ಎಂಬುದು ತಿಳಿಯದಂತಾಗಿದೆ ಎಂಬುದು ಈ ಶ್ಲೋಕದ ಸಾರವಾಗಿರುವದು.

ಗಂಗಾತೀರೇ ಹಿಮಗಿರಿ ಶಿಲಾಬದ್ಧ ಪದ್ಮಾಸನಸ್ಯ
ಬ್ರಹ್ಮಜ್ಞಾನಾಭ್ಯಾಗ ನವಿಧಿನಾ ಯೋಗ ನಿದ್ರಾಂ ಗತಸ್ಯ
ಕಿಂ ತೈರ್ಭಾವ್ಯಂ ಮಮ ಸುದಿವ ಸೈರ್ಯತ್ರ ತೇ ನಿರ್ವಿಶಂಕಾ:
ಕಂಡೂಯಂತೇ ಜರಠ ಹರಿಣಾಃ ಸ್ವಾಂಗ ಮಂಗೇ
ಮದೀಯೇ ||೩೯||

ನಾನು ಗಂಗಾ ನದಿಯ ತೀರದಲ್ಲಿ ಹಿಮವತ್ಪರ್ವತಾಗ್ರ ಭಾಗದಲ್ಲಿ ಪದ್ಮಾಸನವನ್ನು ಹಾಕಿ ಕುಳಿತುಕೊಂಡು, ಬ್ರಹ್ಮ ಜ್ಞಾನದೊಳಗೆ ಲೀನನಾಗಿ ವಿಧಿ ಪೂರ್ವಕವಾಗಿ ಕಣ್ಣುಗಳನ್ನು ಮುಚ್ಚಿಕೊಂಡು ಯೋಗ ನಿದ್ರೆಯನ್ನು ವಶಪಡಿಸಿಕೊಳ್ಳುವದು,–ಹಾಗು ನಾನು ಅಂತಹ ಪರಿಸ್ಥಿತಿಯಲ್ಲಿರುವಾಗ ಮುದಿ ಹರಿಣವು ನಿರ್ಭಯದಿಂದ ನನ್ನ ಬಳಿಗೆ ಬಂದು ತನ್ನ ಮೈಯನ್ನು ನನ್ನ ಶರೀರಕ್ಕೆ ಅಕ್ಕರತೆಯಿಂದ ತಿಕ್ಕುವಂಥ ಪರಿಸ್ಥಿತಿಯು ನನಗೆ ಪ್ರಾಪ್ತವಾಗಬಹುದೆ?

ಚಂಚಲ ಮನಸ್ಸಿನ ಮಾನವನಿಗೆ ಏಕಾಗ್ರತೆಯು, ಪ್ರಾಪ್ತವಾಗ ಬಹುದೆ? ಎಂದು ಭರ್ತೃಹರಿಯು ಅತಿ ಕಳಕಳಿಯಿಂದ ಕೇಳಿಕೊಂಡಿದಾನೆ.

ಮುದಿ ಹರಿಣವು ಅತ್ಯಂತ ಭಯದ ಹಾಗು ಕೊಂಚ ಸಂಶಯ ಬಂದರೆ ಸಾಕು, ವಾಯುವಿನಂತೆ ಜಿಗಿದು ಬಿಡುವ ಪ್ರಾಣಿಯಾಗಿದೆ. ಅಂಥ ಪ್ರಾಣಿಯು ತನ್ನ ಮೈಯನ್ನು ಮಾನವನ ಶರೀರಕ್ಕೆ ತಿಕ್ಕಬೇಕಾದರೆ ಅವನು ಕೊರಡಿನಷ್ಟು ನಿಶ್ಚಲನಾಗಿರಬೇಕಾಗುತ್ತದೆ. ಅರ್ಥಾತ್ ಅವನಲ್ಲಿ ತನ್ನ ಶರೀರನ್ನು ಕೊರಡಿನಂತೆ ಮಾರ್ಪಡಿಸುವಷ್ಟು ಏಕಾಗ್ರತೆಯು ಬೇಕಾಗುತ್ತದೆ ಅಂಥ ಏಕಾಗ್ರತೆಯು ಅಂಥ ದಿವಸವು ನನ್ನ ಜೀವನದಲ್ಲಿ ಬರಬಹುದೇ? ಎಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ಸ್ಫುರತ್ಸಾರ ಜ್ಯೋತ್ಸ್ನಾ ಧವಲಿತ ತಲೇ ಕ್ವಾಪಿ ಪುಲಿನೇ
ಸುಖಾಸೀನಾ: ಶಾಂತ ಧ್ವನಿಷು ದ್ಯುಸರಿತ:।
ಭವಾ ಭೋಗೋದ್ವಿಗ್ನಾ: ಶಿವ ಶಿವ ಶಿವೇತ್ಯಾದಿವಚಸಾ
ಕದಾ ಸ್ಯಾಮಾನಂದೋದ್ಗತ ಬಹುಲ ಬಾಷ್ಪಾಪ್ಲುತ
ದೃಶ: ॥೪೦॥

ನಿಸ್ತಬ್ಧವಾದ ರಾತ್ರಿಯ ಸಮಯದಲ್ಲಿ ಗಂಗಾ ನದಿಯ ಉಸುಕು ತುಂಬಿದ ದಂಡೆಯ ಪ್ರದೇಶವು ದೇದೀಪ್ಯಮಾನವಾದ ಬೆಳದಿಂಗಳಿನಿಂದ ಶುಭ್ರವಾಗತೊಡಗಿದೆ. ಅಲ್ಲಿ ನಾವು ಸಂಸಾರದ ಜಂಜಡವನ್ನು ಕಿತ್ತೊಗೆದು ಅರ್ಥಾತ್ ಸಂಸಾರದ ದು:ಖದಿಂದ ಆತುರಗೊಂಡು, ಆರ್ತಸ್ವರದಿಂದ ಶಿವ ಶಿವಾ ಎಂದು ಶಿವನ ಧ್ಯಾನದಲ್ಲಿಯೇ ಯಾವಾಗ ಮಗ್ನರಾದೇವು? ಹಾಗು ನಮ್ಮ ನೇತ್ರಗಳನ್ನು ಆನಂದಾಶ್ರುಗಳಿಂದ ಯಾವಾಗ ಪರಿಪೂರ್ಣಗೊಳಿಸೇವು?

ಸಂಸಾರದ ಜಂಜಡಗಳಿಂದ ಆತ್ಮಕ್ಕೆ ಶಾಂತಿಯು ದೊರೆಯುವಂದಾಗಲಿ ಏಕಾಗ್ರತೆಯನ್ನು ಸಾಧಿಸುವದಾಗಲಿ ಸಾಧ್ಯವಿಲ್ಲ. ಅದನ್ನೆಲ್ಲ ಪಡೆಯಲು ಶಿವನಾಮೋಚ್ಚಾರಣೆಯೇ ಶ್ರೇಷ್ಠವಾದ ಮಾರ್ಗವಾಗಿರುವದು. ನದೀ ತೀರದ ಉಸುಕಿನ ಪ್ರದೇಶದಲ್ಲಿ ಹಿಟ್ಟು ಚಲ್ಲಿದಂತೆ ಬೆಳದಿಂಗಳು ಬಿದ್ದಿರುವಾಗ ಶಿವ ಶಿವಾ ಎಂದು ದೀನರಾಗಿ ಆ ಮಹಾದೇವನ ನಾಮೋಚ್ಚಾರಣೆ ಮಾಡಿದರೆ ಆತ್ಮಕ್ಕೆ ಮಹದಾನಂದವು ದೊರೆಯುವದು.

ಮಹಾದೇವೋ ದೇವ: ಸರಿದಪಿ ಚ ಸೈಷಾ ಸುರಸರಿದ್–
ಗುಹಾ ಎವಾಗಾರಂ ವಸನವಪಿ ತಾ ಏವ ಹರಿತ:|
ಸುಹೃದ್ವಾ ಕಾಲೋಽಯಂ ವ್ರತಮಿದಂ ದೈನ್ಯ ವ್ರತ ಮಿದಂ
ಕಿಯದ್ವಾ ವಕ್ಷ್ಯಾಮೋ ವಟ ವಿಟಪ ಎವಾಸ್ತು
ದಯಿತಾ ||೬೧||

ನಮಗೆ ದೇವ ದೇವನಾದ ಮಹಾದೇವನೊಬ್ಬನೇ ಪೂಜ್ಯನಾದ ದೇವ ನಾಗಿರುವನು ಗಂಗೆಯೇ ಶ್ರೇಷ್ಠ ನದಿಯಾಗಿರುವದು. ಪರ್ವತ ಪ್ರದೇಶ ದೊಳಗಿನ ಗುಹೆಗಳೇ ಮನೆಗಳು, ದಿಕ್ಕುಗಳೇ ವಸ್ತ್ರಗಳು, ಕಾಲವೇ ಗೆಳೆಯ, ಯಾವನೆದುರಿಗೂ ನಿಂತುಕೊಂಡು ದೀನತೆಯನ್ನು ಪ್ರದರ್ಶಿಸದಿ ರುವದೇ ಒಂದು ವ್ರತ, ವಟ ವೃಕ್ಷವೇ ನಮಗೆ ಆಶ್ರಯ ಸ್ಥಾನವಾಗಿರುವದು. ಒಟ್ಟಿನ ಮೇಲೆ ಸಾರಾಂಶವಿಷ್ಟೆ: ವಿರಕ್ತ ಪುರುಷರಿಗೆ ಇಷ್ಟೇ ವಸ್ತುಗಳು ಅತ್ಯಂತ ಪ್ರಿಯವಾಗಿರುತ್ತವೆ.

ವಿರಕ್ತ ಪುರುಷರಿಗೆ ಅರಮನೆಗಳಾಗಲಿ, ಉಪಭೋಗದ ನಾನಾ ಬಗೆಯ ವಸ್ತುಗಳಾಗಲಿ ಬೇಕಾಗುವದೇ ಇಲ್ಲ. ಅವರಿಗೆ ವಾಸಿಸಲು ಗುಹೆ ಗಳು, ಕುಳಿತುಕೊಳ್ಳುವದಕ್ಕೆ ವೃಕ್ಷ ಕುಡಿಯಲು ಗಂಗಾ ನದಿಯ ನೀರು ಧ್ಯಾನಕ್ಕಾಗಿ—ಸ್ಮರಣೆಗಾಗಿ-ಮಹಾದೇವನ ನಾಮ ಇವಿಷ್ಟು ಇದ್ದರೆ ಸಾಕು. ಅವನು ಅತ್ಯಂತ ಆನಂದದಿಂದ ತನ್ನ ದಿನಗಳನ್ನು ಕಳೆದು ತನ್ನ ಮನದಿಚ್ಛೆಯನ್ನು ಪೂರೈಸಿಕೊಳ್ಳುವನು.

ಆಶಾ ನಾಮ ನದೀ ಮನೋರಥ ಜಲಂ ತೃಷ್ಣಾ ತರಂಗಾ ಕುಲಾ
ರಾಗ ಗ್ರಾಹವತಿ ವಿತರ್ಕವಿಹಗಾ ಧೈರ್ಯದ್ರುಮಧ್ವಂಸಿನಿ|
ಮೋಹಾವರ್ತಸುದುಸ್ತರಾ ವಿಗಹನಾ ಪ್ರೋತ್ತುಂಗ ಚಿಂತಾತಟಿ
ತಸ್ಯಾಃ ಪಾರಗತಾ ವಿಶುದ್ಧ ಮನಸೋಽನಂದಂತಿ
ಯೋಗೀಶ್ವರಾ: ||೬೨||

ಆಸೆಯೆಂಬ ನದಿಯಿದೆ—ಏಕೆಂದರೆ-ಕವಿಗಳು ಆಸೆಯನ್ನು ಹೊಳೆಗೆ ಹೋಲಿಸಿರುವರು—ಅದರೊಳಗೆ ಮನೋರಥವೆಂಬ ಜಲವು ತುಂಬಿರುವದು.

ತೃಷ್ಣಾ ರೂಪದ ತರಂಗಗಳಿರುವವು. ಹಾಗೂ ಅದರೊಳಗೆ ವಿಷಯವಾಸನೆ ಯೆಂಬ ಮೊಸಳೆಗಳಿರುವವು. ಧೈರ್ಯವೆಂಬ ವೃಕ್ಷವನ್ನು ಉರುಳಿಸುವಂಥ ವಿತರ್ಕ ರೂಪದ ಪಕ್ಷಿಗಳು ಅದರ ಮೇಲೆ ಹಾರಾಡುತ್ತಿರುತ್ತವೆ. ಮೋಹ ರೂಪದ ತಿರುಗಣಿ ಮಡುವು ಅತ್ಯಂತ ದುಸ್ತರ ಹಾಗು ಕಠಿಣವಾಗತೊಡಗಿದೆ ಮತ್ತು ದೀರ್ಘ ಚಿಂತೆಯೇ ಆ ನದಿಯ ತೀರವಾಗಿರುವದು. ಇಂಥ ನದಿ ಯನ್ನು ದೊಡ್ಡ ದೊಡ್ಡ ಯೋಗಿಗಳು ದಾಟಿ ಹೋಗಿ: ನಿತ್ಯಾನಂದವನ್ನು ಪಡೆದಿರುವರು.

ಮನುಷ್ಯನಿಗೆ ಆಶೆಯೆಂಬುದು ಇದ್ದೇಇರುತ್ತದೆ ನಿತ್ಯಾನಂದ ಪಡೆಯ ಬೇಕೆನ್ನುವವನು ಆಶಾರೂಪದ ಹೊಳೆಯನ್ನು ಈಜಿಪಾರಾ ಗಬೇಕಾಗುತ್ತದೆ. ಈ ನದಿಯು ಸಾಮಾನ್ಯವಾದುದಲ್ಲ. ಅಂತೆಯೇ ಇದನ್ನು ಈಸಿ ಪಾರಾ ಗುವದು ಸಣ್ಣ ಮಾತಲ್ಲ. ಹಾಗು ಎಲ್ಲರಿಂದಲೂ ಸಾಧ್ಯವಾಗುವಂತಹ ಕಾರ್ಯವಲ್ಲವಿಕೆಂದರೆ ಆನದಿಯೊಳಗೆ ತೃಷ್ಣಾರೂಪದ ತರಂಗ, ಮೋಹವೆಂಬ ತಿರುಗಣಿ ಮಡುವುಗಳೇ ಮೊದಲಾದವುಗಳಿದ್ದು ಅವು ಹೆಜ್ಜೆ ಹೆಜ್ಜೆಗೂ ಮನವನ್ನು ಬಾಧಿಸುತ್ತಿರುತ್ತದೆ. ನಿಜವಾದ ಆನಂದವು ದೊರೆಯಬೇಕೆನ್ನು ವವನು ಈ ನದಿಯನ್ನು ದಾಟಬೇಕು,

ಆಸಂಸಾರಂ ತ್ರಿಭುವನಮಿದಂ ಚಿನ್ವತಾಂ ತಾತ ತಾದೃಜ-
ನೈವಾಸ್ಮಾಕಂ ನಯನ ಪದವಿಂ ಶ್ರೋತ್ರ ವರ್ತ್ಮಾಗತೋ ವಾ
ಯೋಯಂ ಧತ್ತೇ ವಿಷಯ ಕರಿಣೀ ಗಾಢ ಮೂಢಾಭಿಮಾನ-
ಕ್ಷೀಬಸ್ಯಾಂತಃ ಕರಣ ಕರಿಣಃ ಸಂಯಮಾಲಾನ ಲೀಲಾಂ||೪೩||

ಓ, ತಾತನೇ! ಈ ಸಂಸಾರವು ಎಂದು ಹುಟ್ಟಿತೋ ಅಂದಿನಿಂದ ನಾವು ತ್ರಿಭುವನವನ್ನೇ ಸುತ್ತಿ ಹಾಕಿದೆವು. ಆದರೆ ವಿಷಯ ಸುಖಕ್ಕೆ ಬಲಿಯಾಗದೆ ಮನವನ್ನು ತನ್ನ ಆಧೀನದೊಳಗಿರಿಸಿಕೊಂಡಂಥವನು ಒಬ್ಬನೂ ಸಿಕ್ಕಲಿಲ್ಲ. ಅಂದರೆ ವಿಷಯ ರೂಪೀ ಆನೆಯ ಗರ್ಭದಿಂದ ಉದಿಸಿದ ಮೂಢ ಅಭಿಮಾನ ದಿಂದ ಉನ್ಮತ್ತ ಅಂತಃಕರಣ ರೂಪದ ಆನೆಗೆ ಸಂಯಮ ರೂಪದ ಬಂಧನ ದೊಳಗೆ ಬಂಧಿಸಿ ತಡೆದಿಡುವುದು ಅಸಾಧ್ಯವು.

ಈ ಜಗತ್ತು ಹುಟ್ಟಿದಂದಿನಿಂದ ಇಂದಿನ ವರೆಗೆ ಬಹಳಷ್ಟು ಜನರು ಆಗಿ ಹೋದರು. ಆದರೆ ಅವರಲ್ಲಿ ವಿಷಯ ವಾಸನೆಯನ್ನು ಹತ್ತಿಕ್ಕಿ, ಮನವನ್ನು ಅಂಕಿತದಲ್ಲಿರಿಸಿಕೊಳ್ಳ ಬಲ್ಲಂಥವರು ತೀರ ವಿರಳ. ಅಂಥವರು ಇಲ್ಲವೇ ಇಲ್ಲವೆಂದರೂ ಅಡ್ಡಿಯಿಲ್ಲ. ಏಕೆಂದರೆ ಮನುಷ್ಯನಿಗೆ ಈ ಸಂಸಾರ ದಲ್ಲಿ ಅಷ್ಟೊಂದು ಆಕರ್ಷಣೆಗಳೇ—ಆಶೆ ಆಮಿಷಗಳೇ-ಬೆನ್ನುಹತ್ತಿರುತ್ತವೆ. ಅಂತೆಯೇ ಮನವನ್ನು ಆಧೀನದಲ್ಲಿರಿಸಿಕೊಳ್ಳಬಲ್ಲವರು ಸಿಕ್ಕುವದು ವಿರಳ.

ಭೋಗ ಪದ್ಧತಿ ಮುಗಿಯಿತು.



# ನಿರ್ವೇದತಾ ಸ್ವರೂಪ

ಏ ವರ್ಧಂತೇ ಧನಪತಿ ಪುರಃ ಪ್ರಾರ್ಥನಾ ದುಃಖ ಭಾಜೋ
ಏ ಚಾಲ್ಪತ್ವಂ ದಧತಿ ವಿಷಯಾ ಕ್ಷೇಪಪರ್ಯಾಸ್ತಬುದ್ಧೇಃ।
ತ್ಯೇಷಾಮಂತಃ ಸ್ಫುರಿತ ಹಸಿತಂ ವಾಸರಾಣಾಂ ಸ್ಮರೇಯಂ
ಧ್ಯಾನಚ್ಛೇದೇ ಶಿಖರಿ ಕುಹರ ಗ್ರಾವಶಯ್ಯಾ ನಿಷಣ್ಣ: ॥ ೪೪॥

ಪರ್ವತದ ಗುಹೆಗಳಲ್ಲಿ ಕಲ್ಲು ಹಾಸಿಗೆಯ ಮೇಲೆ ಕುಳಿತುಕೊಂಡ ನಾವು ಧ್ಯಾನ ಮಗ್ನರಾಗುವ ಪೂರ್ವದಲ್ಲಿ, ಮೊದಲಿನ ದಿನಗಳನ್ನು ಅಂದರೆ "ಹಣವಂತರ ಎದುರಿಗೆ ನಿಂತುಕೊಂಡು ದೀನತೆಯನ್ನು ಪ್ರದರ್ಶಿಸುವದು. ಅವರನ್ನು ಸದಾಕಾಲವೂ ಹೊಗಳುತ್ತಿರುವದು, ಅರ್ಥಾತ್ ಅಂಥವರ ಸ್ತುತಿಯಲ್ಲಿಯೇ ದಿವಸಗಳನ್ನು ಕಳಯುವವರೆಗೆ ಹಾಗೂ ಯಾವಾಗಲೂ ವಿಷಯ ಸುಖದಲ್ಲಿಯೇ ಲೀನವಾಗಿರುವಂಥ ಪುರುಷರಿಗೆ ತಮ್ಮ ಸಮಯವು ಯಾವ ರೀತಿಯಿಂದ ಕಳೆಯಿತು ಎಂಬುದು ಗೊತ್ತಿರುವದಿಲ್ಲ" ಎಂಬುದನ್ನು ನೆನಪು ಮಾಡಿಕೊಳ್ಳುತ್ತಿದ್ದೇವೆ.

ಅಂದರೆ, ಮನುಷ್ಯನು ತನ್ನ ಸ್ವಾರ್ಥಕ್ಕಾಗಿ, ತನ್ನ ಹೊಟ್ಟೆ ಹೊರೆದುಕೊಳ್ಳುವದಕ್ಕಾಗಿ ಏನು ಬೇಕಾದುದನ್ನು ಮಾಡುತ್ತಾನೆ. ಆಗ ಅವನು ತಾನು ಮಾಡುತ್ತಿರುವುದು ಏನು ? ಹೀಗೆ ಮಾಡುವದು ಉಚಿತವೇ? ಎಂಬುದನ್ನು ಪರಿಶೀಲಿಸಿ ಪರಿಸ್ಥಿತಿಯಲ್ಲಿರುವದಿಲ್ಲ. ಆದೇ ರೀತಿಯಾಗಿ ವಿಷಯ ಸುಖದಲ್ಲಿ ಮತ್ತರಾದ ಕಾಮುಕರ ಪರಿಸ್ಥಿತಿಯೂ ಹಾಗೆಯೇ ಇರುತ್ತದೆ. ಇನ್ನೂ ಮೋಜಿನ ವಿಷಯವೆಂದರೆ ಇವರಿಗೆ ಸಮಯದ ಪರಿವೆಯೇ ಇರುವದಿಲ್ಲ. ಈ ಮಾತು ಕೊನೆಗೆ ಎಲ್ಲಿಯಾದರೂ ಗುಹೆಯೊಳಗೆ ಕುಳಿತುಕೊಂಡಾಗ ಜ್ಞಾಪಕಕ್ಕೆ ಬರುವದು.

ವಿದ್ಯಾನಾಧಿಗತಾ ಕಲಂಕರಹಿತಾ ವಿತ್ತಂ ಚ. ನೋಪಾರ್ಜಿತಂ
ಶುಶ್ರೂಷಾಪಿ ಸಮಾಹಿತೇನ ಮನಸಾ ಪಿತ್ರೋರ್ನ ಸಂಪಾದಿತಾ ।

ಆಲೋಲಾಯತ ಲೋಚನಾ ಯುವತಯಃ ಸ್ವಪ್ನೇಪಿ ನಾಲಿಂಗಿತಾ
ಕಾಲೋಯಂ ಪರಪಿಂಡ ಲೋಲುಪತಯಾ ಕಾಕೈರಿವ
ಪ್ರೇಯತೇ ||೪೫||

ನಾವು ಕೇವಲ ನಿಷ್ಕಳಂಕವಾದ ವಿದ್ಯೆಯನ್ನು ಮಾತ್ರ ಸಂಪಾದಿಸಿದೆವು ಅದೊಂದನ್ನುಳಿದು ನಾವು ಬೇರೇನನ್ನೂ ಮಾಡಲಿಲ್ಲ. ಅಂದರೆ, ಐಶ್ವರ್ಯ ವನ್ನು ಸಂಪಾದಿಸಲಿಲ್ಲ. ಹಾಗು ಏಕಾಗ್ರಚಿತ್ತದಿಂದ ತಂದೆ ತಾಯಿಗಳ ಸೇವೆಯನ್ನು ಮಾಡಲಿಲ್ಲ. ಇಷ್ಟೇ ಅಲ್ಲ. ಚಂಚಲ ಹಾಗು ವಿಶಾಲ ನೇತ್ರೆ ಯರಾದ ಸುಂದರ ತರುಣಿಯರನ್ನು ಕೂಡ ಆಲಂಗಿಸಲಿಲ್ಲ. ಪರರ ಅನ್ನಕ್ಕಾಗಿ ಹಾತೊರೆಯುತ್ತಿರುವ ಕಾಗೆಯಂತೆ. ನಮ್ಮ ಜೀವನದ ಬಹು ಮುಖ್ಯ ಸಮಯವು ನಿರರ್ಥಕವಾಗಿಯೇ ಕಳೆದುಹೋಗಿರುವದು.

ಕೇವಲ ವಿದ್ಯೆಯನ್ನು ಗಳಿಸಿದರೆ ಸಾಲದು, ಅದರ ಜೊತೆಗೆ ವ್ಯವಹಾರ ಜ್ಞಾನವೂ ಇರಬೇಕು. ಅದಿಲ್ಲದಿದ್ದರೆ ಅಂಥವನ ಬಾಳು ನಿರರ್ಥಕವಾಗುತ್ತದೆ. ಅವನು ಕಲಿತೂ ಉಪಯೋಗವಿಲ್ಲದಂತಾಗುತದೆ. ತಂದೆ-ತಾಯಿಗಳತ್ತ ಗಮನ ಕೊಡದವ, ಹೆಂಡತಿ—ಮಕ್ಕಳು ಹಾಗು ಸಂಸಾರ ನಿರ್ವಹಣೆಯತ ಗಮನ ಕೊಡದಂಥ ಪುಸ್ತಕ ಪಂಡಿತನಿಂದ ಆಗು ಉಪಯೋಗವಾದರೂ ಏನು

ವಿಶ್ರೀರ್ಣೇ ಸರ್ವಸ್ವೇ ತರುಣ ಕರುಣಾ ಪೂರ್ಣ ಹೃದಯಾ
ಸ್ಮರಂತಃ ಸಂಸಾರೇ ವಿಗುಣ ಪರಿಣಾಮ ವಧಿಗತಿ|
ವಯಂ ಪುಣ್ಯಾರಣ್ಯೇ ಪರಿಣತ ಶರಶ್ಚಂದ್ರ ಕಿರಣಾ—
ಸ್ತ್ರಿಯಾಮಾಂ ನೇಷ್ಯಾಮೋ ಹರಚರಣ ಚಿತ್ತೈಕ ಶರಣಾಃ||೪೬||

ಬೇಡಿದವರಿಗೆ ಸರ್ವಸ್ವವನ್ನು-ಇದ್ದುದೆಲ್ಲವನ್ನೂ—ಕೊಟ್ಟು ಅತ್ಯಂತ ಕರುಣೆಯ ಹೃದಯದವರಾಗಿ, ಎಲ್ಲ ಗುಣಗಳೂ ಶೂನ್ಯಮಯವೆಂದು— ಉಪಯೋಗವಿಲ್ಲದವುಗಳೆಂದು-ಭಾವಿಸಿ ದೇವ ದೇವನಾದ ಮಹಾದೇವನ ಚರಣಗಳಲ್ಲಿ ಆಶ್ರಯವನ್ನು ಪಡೆದು, ಯಾವಾಗಲೂ ಅವನ ಸ್ಮರಣೆಯನ್ನೇ

ಮಾಡುತ್ತ ಯಾವುದಾದರೊಂದು ಪವಿತ್ರವಾದ ವನ ಪ್ರದೇಶದೊಳಗೆ ಕುಳಿತುಕೊಂಡು ನಮ್ಮ ಪಾಲಿಗೆ ಬಂದ ಶರದ್ ಋತುವಿನ ಬೆಳದಿಂಗಳದ ರಾತ್ರಿಯನ್ನು ನಾವು ಅತ್ಯಂತ ಆನಂದದಿಂದ ಕಳೆಯುತ್ತೇವೆ.

ಮಹಾದೇವನ ಚರಣ ಕಮಲಗಳು ಹಾಗು ಅವನ ನಾಮಸ್ಮರಣೆ ಇವುಗಳನ್ನಿಳಿದು ಈ ಜಗತ್ತಿನೊಳಗೆ ಬೇರಾವುದೂ ಬೇಡ. ಇವುಗಳನ್ನಲ್ಲ ಬೇಡಿದವರಿಗೆ ಕೊಟ್ಟು ಪವಿತ್ರವಾದಂಥ ಯಾವುದೊಂದು ಕಾನನ ಪ್ರದೇಶ ದೊಳಗೆ ಕುಳಿತುಕೊಂಡು ಶಿವನ ನಾಮ ಸ್ಮರಣೆಯಲ್ಲಿ ಕಾಲಕಳೆಯುವದು ಬಹಳ ಒಳ್ಳೆಯದು. ಅಂಥವನ ಜನ್ಮವೂ ಸಾರ್ಥಕವಾಗುವದು.

ವಯಮಿಹ ಪರಿತುಷ್ಟಾ ವಲ್ಕಲೈ ಸ್ತ್ವಂ ದುಗುಲೈ:
ಸಮಇವ ಪರಿತೋಷೋ ನಿರ್ವಿಶೇಷೋ ವಿಶೇಷಃ |
ಸ ತುಭವತಿ ದರಿದ್ರೋಯಸ್ಯ ತೃಷ್ಣಾ ವಿಶಾಲಾ
ಮನಸಿ ಚ ಪಸಿತುಷ್ಟೇ ಕೋರ್ಥವಾನ್ ಕೋ ದರಿದ್ರಃ ||೪೭||

ಇಲ್ಲಿ ನಾವು ವಲ್ಕಲಗಳಿಂದ-ಗಿಡದ ತೊಗಟೆಗಳು ಹಾಗು ನಾರು ಬಟ್ಟೆಗಳಿಂದ—ನಾವು ಸಂತುಷ್ಟರಿದ್ದೇವೆ. ನೀನು ರೇಶಿಮೆಯ ಬಟ್ಟೆಗಳನ್ನು ಧರಿಸಿ ಆನಂದ ತುಂದಿಲನಾಗಿರುವಿ. ಈ ರೀತಿಯಾಗಿ ನಾವು ವಸನಗಳ ಆನಂದದಿಂದ ಸರಿಸಮಾನ ರಾಗಿರುವೆವು. ಅರ್ಥಾತ್ ನಮ್ಮ ಹಾಗು ನಿನ್ನ ಆನಂದದಲ್ಲಿ ಯಾವ ಭೇದವೂ ಇಲ್ಲ. ಹೀಗಿರುವಾಗ ತೃಷೆವು ಯಾವನಲ್ಲಿ ಅಧಿಕವಾಗಿರುವದೋ ; ಅವನನ್ನು ದರಿದ್ರನೆಂದು ಕರೆಯಬೇಕಾಗುತ್ತದೆ. ಏಕೆಂದರೆ ಒಂದು ಸಲ ಮನಸಾ ಸಂತುಷ್ಟನಾದ ನಂತರ ಅವನು ದರಿದ್ರನೂ ಅಲ್ಲ, ಐಶ್ವರ್ಯವಂತನೂ ಅಲ್ಲ.

ಮನಸ್ಸು ತೃಪ್ತಿಗೊಳ್ಳುವದೆಂದರೆ ಸಣ್ಣ ಮಾತಲ್ಲ. ಒಂದು ಸಲ ಮನವು ತೃಪ್ತಿಗೊಂಡರೆ ಅವನಿಗೆ ಯಾವ ತೊಂದರೆಗಳೂ ಪೀಡಿಸಲಾರವು. ಅವನು ದಾರಿದ್ರ್ಯಕ್ಕೆ ಕುಗ್ಗದೆ ಐಶ್ವರ್ಯಕ್ಕೆ ಹಿಗ್ಗದೆ ಧೀರೋದಾತ್ತತನದಿಂದ

ಮುಂದುವರಿಯುವನು. ಆದರೆ ಅಂಥ ತೃಪ್ತಿಯನ್ನು-ಸಂತೋಷವನ್ನು-ಪಡೆದವರು ಇಂದು ಎಷ್ಟು ಜನರು ಸಿಕ್ಕಬಹುದು ?

ಯದೇತತ್ಸ್ವಚ್ಛಂದಂ ವಿಹರಣಂ ಕಾರ್ಪಣ್ಯ ಮಶನಂ
ಸಹಾರ್ಯೈಃ ಸಂವಾಸಃ ಶ್ರುತಮುಪ ಶಮೈಕ ವ್ರತ ಫಲಂ।
ಮನೋಮಂದಸ್ಪಂದಂ ಬಹಿರಪಿ ಚಿರಸ್ಯಾಪಿ ವಿಮೃಶನ್ನ
ಜಾನೇ ಕಸ್ಯೈಷಾ ಪರಿಣತಿರುದಾರಸ್ಯ ತಪಸಃ ॥೬೮॥

ಎಲ್ಲ ಬಗೆಯ ಸ್ವಚ್ಛಂದ ವಿಹಾರ ಮಾಡುವದು ಅಂದರ ಮನಬಂದಂತೆ ನಿಸ್ಸಂಕೋಚವಾಗಿ ವರ್ತಿಸುವದು. ಯಾರಿಗೂ ಬೇಡದೆಯೇ ಊಟಮಾಡುವದು, ಹಾಗೂ ಯಾವಾಗಲೂ ಉತ್ತಮ ಪುರುಷರ ಸಹವಾಸದಲ್ಲಿಯೇ ಇರುವದು, ಶಾಸ್ತ್ರ-ವೇದಾಂತ ವಿಷಯಗಳನ್ನು ಕೇಳುವದೇ ಮೊದಲಾದವುಗಳ ಫಲವು ಉಪ ಶಮನದ ರೂಪದ ಒಂದು ವ್ರತವೇ ಆಗಿರುವದು. ಆದರೆ ಇವೆಲ್ಲವುಗಳೂ ಒಬ್ಬನಲ್ಲಿಯೇ ಕಂಡು ಬರಬೇಕಾದರೆ ಅವನಿಗೆ ಪ್ರಾಚೀನ ಕಾಲದ ತಪದ ಫಲವೇ ಲಭಿಸಿದೆಯೆನ್ನಬೇಕು.

ಯಾವಾಗಲೂ ಒಳ್ಳೆಯವರ ಸಹವಾಸದಲ್ಲಿರುವದು, ಸ್ವಚ್ಛಂದ ಮನೋವೃತ್ತಿಯವರಾಗಿರುವದು, ಹಾಗು ಸದಾ ಶಾಸ್ತ್ರ-ವೇದಾಂತಗಳ ಪಠಣ ಮತ್ತು ಶ್ರವಣಗಳಲ್ಲಿಯೇ ಮಗ್ನರಾಗಿರುವದೂ ಒಂದು ಬಗೆಯ ವ್ರತವೆಂದೇ ಹೇಳಬಹುದು. ಇಂಥ ವ್ರತವನ್ನು ಪಾಲಿಸುವಂಥವರು ಬಹು ಕಡಿಮೆ ಜನರು ಸಿಕ್ಕುವರು. ಏಕೆಂದರೆ ಪೂರ್ವ ಜನ್ಮದಲ್ಲಿ ಸಾಕಷ್ಟು ಪುಣ್ಯ ಮಾಡಿದಂಥವರಿಗೆ ಅಂಥ ನಡಾವಳಿಯು ಸಾಧ್ಯ.

ಪಾಣಿಃ ಪಾತ್ರಂ ಪವಿತ್ರಂ ಭ್ರಮಣ ಪರಿಗತಂ ಭೈಕ್ಷ ಮಕ್ಷಯ್ಯಮನ್ನಂ
ವಿಸ್ತೀರ್ಣಂ ವಸ್ತ್ರ ಮಾಶಾ ಸುದಶ ಕಮಲಂ ತಲ್ಪಂ ಸ್ವಲ್ಪ ಮುರ್ವೀಂ।
ಏಷಾಂನಿಃ ಸಂಗತಾಂಗೀ ಕರಣ ಪರಿಣತಿಃ ಸ್ವಾತ್ಮ ಸಂತೋಷಿಣಸ್ತೇ
ಧನ್ಯಾಃ ಸನ್ಯಸ್ತ ದೈನ್ಯ ವ್ಯತಿಕರ ನಿಕರಾಃ ಕರ್ಮ ನಿರ್ಮೂಲಯಂತಿ ॥೬೯॥

ತನ್ನ ಕೈಯೇ ತನಗೆ ಪವಿತ್ರ ಪಾತ್ರೆಯಾಗಿರುವಂಥ ಪುರುಷನು ನಿಜಕ್ಕೂ ಧನ್ಯನು. ಅದೇ ರೀತಿಯಾಗಿ ಅಲ್ಲಲ್ಲಿ ತಿರುಗಾಡಿ ತಂದಂಥ ಅವರ ಅಕ್ಷಯ—ಕ್ಷಯರಹಿತ— ಭಿಕ್ಷಾನ್ನವಿದ್ದವರು, ವಿಸ್ತ್ರತವಾದ ದಶದಿಶೆಗಳನ್ನೇ ನಿರ್ಮಲ ವಸನವನ್ನಾಗಿ ಮಾಡಿಕೊಂಡಂಥವರು, ಬಹು ವಿಸ್ತಾರ—ವಿಶಾಲ ವಾದ ಇಡಿಯ ಪೃಥ್ವಿಯನ್ನೇ ಹಾಸುಗೆಯನ್ನಾಗಿ ಮಾಡಿಕೊಂಡವರು, ಈ ಜಗತ್ತಿನಿಂದಲೇ ಬೇರೆಯದಾದಂಥವರು, ಬಹು ವಿಸ್ತಾರ—ವಿಶಾಲ— ವಾದ ಇಡಿಯ ಪೃಥ್ವಿಯನ್ನೇ ಹಾಸುಗೆಯನ್ನಾಗಿ ಮಾಡಿಕೊಂಡವರು, ಈ ಜಗತ್ತಿನಿಂದಲೇ ಬೇರೆಯದಾದಂಥ ಅಂತಃಕರಣ ಪ್ರವೃತ್ತಿಯನ್ನು ಪಡೆದಂಥ ವರು, ಅರ್ಥಾತ್ ಹೃದಯದೊಳಗೆ ಯಾವುದೇ ಬಗೆಯ ಆಸೆಯನ್ನು ಇರಿಸಿ ಕೊಂಡಿರಲಾರದಂಥವರು, ಭೋಗಲಾಲಸೆಯಿಂದ ನಿರ್ಲಿಪ್ತರಾಗಿ ತಮ್ಮ ಷ್ಟಕ್ಕೆ ತಾವೇ ಸಂತುಷ್ಟರಾಗಿರುವಂಥವರು, ದೀನತೆಯ ಪರಂಪರೆಯನ್ನು ಹರಿದೊಗೆದಂಥವರು ಅಂದರೆ ಯಾರೆದುರೂ ತಮ್ಮ ದೀನತೆಯನ್ನು; ಅಸಹಾ ಯಕತೆಯನ್ನು ಪ್ರದರ್ಶಿಸದಂಥವರು ಹಾಗು ಕಂಡವರೆದುರು ದೈನ್ಯದಿಂದ ಕೈಚಾಚುವದನ್ನು ಸೇರದೆ ಇರುದಂಥವರು, ಹಾಗು ಕರ್ಮವನ್ನು ಸಮೂಲ ವಾಗಿ ನಿರ್ಮೂಲಮಾಡಿದವರು, ಅಂದರೆ ತತ್ವ ಜ್ಞಾನವನ್ನು ಹೆಚ್ಚಿಸಿ ಕೊಂಡು ತ್ರಿವಿಧ ಕರ್ಮಗಳನ್ನು ಕಳೆದುಕೊಂಡಂಥ ಮಹನೀಯರು ನಿಜಕ್ಕೂ ಧನ್ಯರೆಂದೇ ಹೇಳಬಹುದು.

ದುರಾರಾಧ್ಯಾ: ಸ್ವಾಮಿ ತುರಗ ಚಲಚಿತ್ತಾ: ಕ್ಷಿತಿ ಭುಜೋ
ವಯಂ ತು ಸ್ಥೂಲೇಚ್ಛಾ ಮಹತಿ ಚ ಪದೇ ಬದ್ಧ ಮನಸಃ|
ಜರಾ ದೇಹಂ ಮೃತ್ಯುರ್ಹರತಿ ಸಂಕಲಂ ಜೀವಿತ ಮಿದಂ
ಸಖೇ ನಾನ್ಯಚ್ಛ್ರೇಯೋ ಜಗತಿ ವಿದುಷೋನ್ಯತ್ರ ತಪಸ: ||೫೦||

ಕುದುರೆಯಂತೆ ಚಂಚಲ ಮನಸ್ಸಿನವರಾದ ಈ ಅರಸರ ಆರಾಧನೆ ಯನ್ನು ಮಾಡುವದು ಬಹು ಕಷ್ಟದ, ತೊಂದರೆಯ ಕಾರ್ಯವ ಗಿರುವದು. ಆದರೆ ನಮ್ಮ ಇಚ್ಛೆಯು ಪ್ರಬಲವಾಗಿದ್ದು ನಮ್ಮ ಚಿತ್ತವು ಉನ್ನತ ಸ್ಥಾನ ದಲ್ಲಿ ತಲ್ಲೀನವಾಗಿ ಬಿಟ್ಟಿರುವದು. ವೃದ್ಧಾವಸ್ಥೆಯು ಶರೀರವನ್ನು ನಷ್ಟ

ಗೊಳಿಸುವದು. ಹಾಗು ಅದನ್ನು ಮೃತ್ಯುವು ಹರಣ ಮಾಡುವದು. ಅದ ಕ್ಕಾಗಿ. ಓ, ಗೆಳೆಯಾ! ಜ್ಞಾನಿಯಾದವನಿಗೆ ಈ ಜಗತ್ತಿನೊಳಗೆ ತಪಸ್ಸಿಗಿಂತ ಒಳ್ಳೆಯದಾದುದು, ಕಲ್ಯಾಣಕಾರಕವಾದುದು ಯಾವುದೂ ಇಲ್ಲ.

ತಪಸ್ಸು ಮಾನವನನ್ನು ಕಲ್ಯಾಣ ಮಾರ್ಗದತ್ತ ಎಳೆದೊಯ್ಯುವದು. ಅಲ್ಲದೆ ಅದು ಅವನನ್ನು ಸದಾ ಇನಂದ ತುಂದಿಲನನ್ನಾಗಿ ಮಾಡುವದು. ಆವೊಂದನ್ನುಳಿದು ಬೇರಾವುದೂ ಯಾವ ಮಾರ್ಗವೂ ಅವನನ್ನು ಸರಿ ಯಾದ ಮಾರ್ಗದಲ್ಲಿ ಒಯ್ಯಲಾರದು. ಏಕೆಂದರೆ ಅರಸನನ್ನು ನಂಬಬೇಕೆಂ ದರೆ ಅದೂ ಅನಿಶ್ಚಿತವಾಗಿರುವದು. ಹಾಗಾಗಲು ಕಾರಣವಿಷ್ಟೆ. ಅರಸನ ಚಿತ್ತವು ಮಧ್ಯಾಹ್ನದ ಸೂರ್ಯನಂತಿರುವದು. ಅಂದರೆ ಅವನ-ಅರಸನ ಚಿತ್ತವು ಒಂದೇ ಸಮನಾಗಿರುವದಿಲ್ಲ. ಅದು ನಿಮಿಷ ನಿಮಿಷಕ್ಕೆ ಬದಲಾಯಿ ಸುತ್ತಲೇ ಇರುತ್ತದೆ. ಅದಕ್ಕಾಗಿ ಅಂಥ ಅರಸನನ್ನು ನಂಬಿಕೊಂಡು ಕುಳಿತ ವನ ಗತಿ ಏನಾಗಬೇಕು? ಎಂಬುದನ್ನು ಕೇವಲ ಊಹಿಸಿಯೇ ಅರಿತು ಕೊಳ್ಳಬೇಕಲ್ಲದೆ ಬರೆಯುವದು ಸಾಧ್ಯವಿಲ್ಲ.

ಭೋಗಾ ಮೇಘ ವಿಧಾನ ಮಧ್ಯಮ ಶತ್ಸೌದಾಮಿನೀ ಚಂಚಲಾ
ಆಯುರ್ವಾಯು ವಿಘಟ್ಟಿ ತಾಭ್ರಪಟ ಲೀಲೀನಾಂಬುಬದ್ಭಂಗುರಂ|
ಲೋಲಾ ಯೌವನಲಾಲ ಸಾಸ್ತ್ರಸು ಭೃತಾಮಿತಾಕಲಯ್ಯದ್ರೂತಂ
ಯೋಗೇ ಧೈರ್ಯ ಸಮಾಧಿಸಿದ್ಧಿ ಸುಲಭೇ ಬುದ್ಧಿಂ ವಿಧಧ್ವಂ
ಬುಧಾಃ ||೫೧||

ದೇಹಧಾರಿಗಳಾದಂಥವರಿಗೆ ಭೋಗವು, ಮೇಘಗಳ ಸಮುದಾಯದಲ್ಲಿ ಹೊಳೆಯುವಂತಹ ಕೋಲ್ಮಿಂಚಿನಂತಿರುವದು. ಅವನ ಆ ಆಯುಷ್ಯವು, ವಾಯುವಿನ ಹೊಡೆತಕ್ಕೆ ಸಿಲುಕಿ ಛಿನ್ನ ವಿಚ್ಛಿನ್ನವಾಗಿರುವಂಥ ಮೇಘ ಸ್ಥಿತ ಜಲದಂತೆ ಕ್ಷಣ ಭಂಗುರವಾದುದಾಗಿರುವದು. ಅಲ್ಲದೆ ಯೌವ್ವನದ ಬಯಕೆ ಗಳು ಕೂಡ ಸ್ಥಿರವಾದಂಥವುಗಳಲ್ಲ. ಇವುಗಳನ್ನೆಲ್ಲ ಚನ್ನಾಗಿ ವಿಚಾರ ಮಾಡಿದ ನಂತರ, ಓ ಪಂಡಿತರೆ! ಧೈರ್ಯದ ಸಮಾಧಿಯಿಂದ ನಿನು ಬುದ್ಧಿಯನ್ನು ಸುಲಭಯೋಗದೊಳಗೆ ತೊಡಗಿಸಿರಿ.

ಮನುಷ್ಯನ ಜೀವನವು ಕ್ಷಣ ಭಂಗುರವಾದುದು. ಯಾವಾಗ ಏನಾದೀ ತೆಂಬುದನ್ನು ಹೇಳುವದ ಯಾವನಿಂದಲೂ ಸಾಧ್ಯವಿಲ್ಲ. ಅದಕ್ಕಾಗಿ ತಮ್ಮ ಮನವನ್ನು ಸುಲಭಯೋಗದತ್ತ ತಿರುಗಿಸುವದು ಬಹಳ ಒಳ್ಳೆಯದು. ಎಂದು ಧಾರಾಳವಾಗಿ ಹೇಳಬಹುದಾಗಿದೆ. ಏಕೆಂದರೆ ಭೋಗ ಲಾಲಸೆಯು, ಯೌವ ನವಿರುವ ವರೆಗೆ ಮಾತ್ರ ಆದರೆ ಆ ಯೌವನವಾದರೂ ಶಾಶ್ವತವಾಗಿರುವದೇ? ಅದೂ ಇಲ್ಲ. ಅಂದಾಗ ಅಂಥವುಗಳ ಜಂಜಡದಲ್ಲಿ ಸಿಲುಕುವದರಲ್ಲಿ ಏನರ್ಥವಿದೆ?

ಪುಣ್ಯೋಗ್ರಾಮೇ ಏನೇ ವಾಮಹತಿ ಸಿತಪಟಚ್ಛನ್ನ ಪಾಲಿಂಕಪಾಲಿಂ
ಹ್ಯಾದಾಯ ನ್ಯಾಯಗರ್ಭದ್ವಿಜ ಮುಖಹುತ ಭುಗ್ಧೂಮ
ಧೂಮ್ರೋಪಕಂಠಮ್‌।
ದ್ವಾರಂ ದ್ವಾರಂ ಪ್ರವೃತ್ತೋವರ ಮುದರೀ ಪೂರಣಾಯ
ಕ್ಷುದ್ರಾತೋಮ್,
ಮಾನೀ ಪ್ರಾಣೀ ಸಂ ಧನ್ಯೋಮ ಪುನರನುದಿನಂ ತುಲ್ಯ—
—ಕುಲ್ಯೇಷು ದೀನಃ ॥೫೨॥

ಹಸಿವೆಯಿಂದ ಬಳಲುತ್ತಿರುವಂಥವನು, ವ್ಯಾಕುಲಗೊಂಡಂಥವನು, ತನ್ನ ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳಲೋಸುಗ ಶುಭ್ರವಾದ ಬಟ್ಟೆ ಯಿಂದ ಮುಚ್ಚಲ್ಪಟ್ಟ ಹರಿವಾಣವನ್ನು ಹಿಡಿದುಕೊಂಡು, ಹೋಮದ ಅಗ್ನಿ ಯಿಂದ ಕೃಷ್ಣಛಾಯೆಯನ್ನು ತಳೆದಂಥ ಬಾಗಿಲುಗಳುಳ್ಳ ನೀತಿವಂತ ಬ್ರಾಹ್ಮಣನ ಮನೆಯ ಮುಂದೆ ನಿಂತುಕೊಂಡು ಭಿಕ್ಷೆ ಬೇಡುವಂಥ ಪುರುಷನು ನಿಜಕ್ಕೂ ಧನ್ಯರು. ಆದರೆ ಹಸಿವೆಗಾಗಿ, ತನ್ನ ಸಮಾನ ಕುಲದವರ ಬಳಿಗೆ ಹೋಗಿ ಪ್ರತಿದಿನವೂ ದೀನರಂತೆ ಬೇಡುದು ಒಳ್ಳೆಯದಲ್ಲ. ಅದು ಒಳ್ಳೆಯವರ ಲಕ್ಷಣವೂ ಅಲ್ಲ.

ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳಲೋಸುಗ ಬಿಕ್ಷೆ ಬೇಡುವದು ತಪ್ಪಲ್ಲ. ಆದರೆ ಕಂಡ—ಕಂಡವರೆದುರು ಬಾಯಿ ಬಿಡುವದು, ದೀನತನ ವನ್ನು ಪ್ರದರ್ಶಿಸುವದು ಸರ್ವಥಾ ಯೋಗ್ಯವಲ್ಲ. ಅದಕ್ಕಾಗಿ ಬಿಕ್ಷೆಬೇಡುವ

ಪ್ರಸಂಗ ಬಂದರೂ ನೀತಿವಂತರಾದವರ ಮನೆಯಲ್ಲಿ ಬೇಡಬೇಕೆ ವಿನಾ ಕಂಡ ಕಂಡಲ್ಲಿ ಅಲ್ಲ ಎಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ಚಾಂಡಾಲಃ ಕಿಮಯಂ ದ್ವಿಜಾತಿರಥವಾ ಶೂದ್ರೋಥ ಕಿಂ ತಾಪಸಃ
ಕಿಂ ವಾ ತತ್ತ್ವವಿವೇಕ ಪೇಶಲಮತಿರ್ಯೋಗೀಶ್ವರಃ ಕೋಪಿ ಕಿಂ ।
ಇತ್ಯುತ್ಪನ್ನ ವಿಕಲ್ಪ ಜಲ್ಪ ಮುಖರೈ: ಸಂಭಾಷ್ಯ ಮಾಣಾ ಜನೈರ್ನ
ಕ್ರುದ್ಧಾ: ಪಥಿ ನೈವ ತುಷ್ಟ ಮನಸೋ ಯಾಂತಿ ಸ್ವಯಂ ಯೋಗಿನಃ
॥ ೫೩ ॥

ಇವನೇನು ಚಾಂಡಾಲನೋ, ಇಲ್ಲವೆ ದ್ವಿಜಾತಿಯವನೊ ? ಶೂದ್ರನೊ ಇಲ್ಲವೆ ತಪಸ್ವಿಯೋ ? ಅಥವ ಇವನು ತತ್ತ್ವಜ್ಞಾನದೊಳಗೆ ಚತುರನಾಗಿರುವಂಥ ಯೋಗಿಶ್ವರನೋ ? ಎಂದು ತನ್ನ ವಿಷಯದ ಬಗೆಗೆ ನಾನಾ ಪ್ರಕಾರದ ಸಂಶಯದ ತರ್ಕ-ವಿತರ್ಕಗಳನ್ನು ಮಾಡಿದಾಗಲೂ ಕೂಡ ಯಾವುದೇ ಬಗೆಯ ಬೇಸರಿಕೆಯನ್ನು ತೋರಿಸದೆ, ಸಂತೋಷದಿಂದ ಇರುವಂಥವನು ನಿಜವಾದ ಯೋಗಿ ಎನ್ನಿಸುವನು. ಅಂಥ ಯೋಗಿಗಳಿಗೆ ಸಿಟ್ಟೆಂಬುದು ಇರವುದೇ ಇಲ್ಲ. ಅವರು ಯಾವಾಗಲೂ ತಮ್ಮ ಮಾರ್ಗದಲ್ಲಿಯೇ ಮುನ್ನಡೆಯುತ್ತಿರುತ್ತಾರೆ.

ನಿಜವಾದ ಯೋಗಿಗಳು ಹೊಗಳಿಕೆಗೆ ಹಿಗ್ಗುವದಿಲ್ಲ. ತೆಗಳಿಕೆಗೆ ಕುಗ್ಗುವದಿಲ್ಲ. ಅವರು ಯಾರು ಏನೇ ಅನ್ನಲಿ, ಅಂದರೆ ಅವರನ್ನು ಯಾರಾವರೂ ಬಾಯಿಗೆ ಬಂದಂತೆ ತೆಗಳಲಿ ಇಲ್ಲವೆ ಹೊಗಲಿ, ಅವರು ಅಂಥವುಗಳತ್ತ ಗಮನವೀಯದೆ ತಮ್ಮ ಮಾರ್ಗದಲ್ಲಿ ಮುಂದುವರಿಯುತ್ತಲೇ ಇರುತ್ತಾರೆ. ಅಂಥವರಿಗೆ ತೆಗಳುವವೆಂದರೆ ಆನೆಯು ಹೋಗುವಾಗ ಶ್ವಾನವು ಬೊಗಳಿದಂತೆ ಎಂದು ಹೇಳಬಹುದು. ಏಕೆಂದರೆ ಹೋಗುತ್ತಿರುವ ಆನೆಯನ್ನು ಕಂಡು ಶ್ವಾನವು ಬೊಗಳಿದರೆ ಆನೆಯು ಅದರತ್ತ-ಶ್ವಾನದತ್ತ-ಕಣ್ಣೆತ್ತಿ ಕೂಡ ನೋಡುವದಿಲ್ಲ. ಹಾಗು ಅದು ತನ್ನ ಮಾರ್ಗವನ್ನು ಹಿಡಿಯುವದು, ಯೋಗಿಗಳು ಕೂಡ ಅದೇ ರೀತಿಯಾಗಿರುವರು.

ಸಖೇ ಧನ್ಯಾ: ಕೇಚಿತ್ರುಟಿತಭವಬಂಧ ವ್ಯಾತಿಕರಾ
ಅಚಿನ್ವಂತೋರಣ್ಯೆ ಮನಸಿ ವಿಷಯಾ ಶೀವಿಷಗತಿಂ।
ಶರಚ್ಚಂದ್ರ ಜೋತ್ಸ್ನಾ ಧವಲಗಗನಾ ಭೋಗ ಸುಭಗಾಂ
ನಯಂತೇ ಏ ರಾತ್ರಿಂ ಸುಕ್ರತಚಯ ಚಿತ್ತೈಕ ಶರಣಃ ||೫೪||

ಓ ಗೆಳೆಯಾ ! ಸಂಸಾರ ಬಂಧನದ ಜಂಜಡವನ್ನು—ಸಂಬಂಧವನ್ನು—ಹರಿದೊಗೆದಂಥವನು, ವಿಷಯ 'ಲಾಲಸೆಯೆಂಬ ಹಾವಿನಗತಿಯನ್ನು—ಜಾಡನ್ನು—ಹುಡುಕಲಾರದವಂಥವನು ಮನಸ್ಸಿನೊಳಗೆ—ಹೃದ ಯದೊಳಗೆ-ಪುಣ್ಯದ ಸಮುದಾಯಕ್ಕೆ ಆಶ್ರಯವಲ್ಲ್ಕತ್ತಿರುವಂಥವನು ಹಾಗು ಶರದ ಋತುವಿನ ಬೆಳದಿಂಗಳಿನ ರಾತ್ರಿಯಲ್ಲಿ ಕಾನನದೊಳಗೆ ಕುಳಿತು ಕೊಂಡು ಗಗನ ಮಂಡಲದೊಳಗಿನ ಶುಭ್ರತೆಯನ್ನು ಪರಕಿಸುವಂಥವನು ನಿಜಕ್ಕೂ ಧನ್ಯನು.

ಜಗತ್ತಿನೊಳಗೆ ಬಾಳಿ ಧನ್ಯನೆನ್ನಿಸಿಕೊಳ್ಳುವದು ಬಹು ಕಷ್ಟದ ವಿಷಯವಾಗಿದೆ. ಏಕೆಂದರೆ ಅಂಥವರು ಆ ಬಗೆಯ ಮಾರ್ಗದಲ್ಲಿಯೇ ಮುಂದುವರಿಯಬೇಕಾಗುತ್ತದೆ. ಅಂದರೆ ಸಂಸಾರದ ಜಂಜಡವನ್ನು ಮೂಲ ಸಹಿತವಾಗಿ ಕಿತ್ತಿಸೆಯಬೇಕಾಗುವದು. ಭೋಗ ಲಾಲಸೆಯ ಸನಿಹಕ್ಕೂ ಸುಳಿಯಕೂಡದು. ಇಂಥ ನಿಯಮಗಳನ್ನು ನಡೆಯಿಸಿಕೊಂಡು ಮುಂದು ವರೆಯುವದು ಹಾಗು ಜಗತ್ತಿನೊಳಗಿನ ಪ್ರಾಣಿಗಳನ್ನೆಲ್ಲ ದಯೆಯಿಂದ ಕಾಣುವದೇ ಮೊದಲಾದವುಗಳು ಬಾಯಿಂದ ಹೇಳಲು ಸರಳವಿದ್ದಂತೆ, ಕೃತಿಯಲ್ಲಿ ತರಲು ಸಾಧ್ಯವಿಲ್ಲ ಅಂತೆಯೇ ಅವುಗಳನ್ನೆಲ್ಲ ಕೃತಿಯಲ್ಲಿ ತಂದಂಥ ಪುರುಷನು ಧನ್ಯನೆನಿಸುವನು.

ಎತಸ್ಮಾದ್ವಿರಮೇಂದ್ರಿಯಾರ್ಥ ಗಹನಾ ದಾಯಾ ಸಕಾದಾಶ್ರಯ—
ಶ್ರೇಯೋ ಮಾರ್ಗಮಶೇಷ ದುಃಖ ಶಮನ ವ್ಯಾಪಾರ ದಕ್ಷಂ
ಚಕ್ಷ್ವಾತ್
ಶಾಂತಂ ಭಾವಮುಪೈಹಿ ಸಂತ್ಯಜ ನಿಜಾಂ ಕಲ್ಲೋಲ ಲೋಲಾಂ ಗತಿ

ಮಾ ಭೂಯೋ ಭಜ ಭಂಗುರಾ ಭವರತಿಂ ಚೇತ:
ಪ್ರಸೀದಾಧುನಾ ||೫೫||

ಓ ಮನವೇ! ಈಗ ನೀನು ಪ್ರಸನ್ನನಾಗು, ಅದನ್ನು, ಪ್ರಸನ್ನತೆಯನ್ನು ಹುಟ್ಟಿಸಲೋಸುಗ ಬಹು ಕಷ್ಟದಿಂದ ಇಂದ್ರಿಯಗಳ ವಿಷಯ ರೂಪದ ವನವೊಳಗೆ ವಿಶ್ರಾಂತಿಯನ್ನು ತೆಗೆದುಕೋ. ನಿಮಿಷಾರ್ಧದಲ್ಲಿ ದು:ಖಗಳನ್ನು ಸಂಪೂರ್ಣವಾಗಿ ಇಲ್ಲವಾಗಿಸುವದರಲ್ಲಿ ಸಮರ್ಥವಾದ ಆ ಕಲ್ಯಾಣ ಮಾರ್ಗವನ್ನು ಅವಲಂಬಿಸು, ಶಾಂತ ಭಾವನೆಯನ್ನು ಸ್ವೀಕರಿಸಿ, ಅಂಗೀಕರಿಸಿ ತೆರೆಗಳಂತೆ ಚಂಚಲವಾಗಿರುವ ನಿನ್ನ ಗತಿಯನ್ನು ತ್ಯಾಗ ಮಾಡು. ಹಾಗು ಕ್ಷಣ ಭಂಗುರವಾದ ಈ ಸಂಸಾರದ ಸುಖಭೋಗಗಳತ್ತ ಎಂದಿಗೂ ಸುಳಿಯಬೇಡ.

ಮಾನವನ ಚಿತ್ತವು ತೆರೆಗಳಂತೆ—ತರಂಗಗಳಂತೆ-ಚಂಚಲವಾಗಿದ್ದರೆ ಅಂಥವನಿಂದ ಯಾವ ಕಾರ್ಯವೂ ಆಗಲಾರದು. ಅದಕ್ಕಾಗಿ ಒಳ್ಳೆಯ ಮಾರ್ಗವನ್ನು ಹಿಡಿಯಬೇಕೆನ್ನುವವನು ಎಲ್ಲಕ್ಕೂ ಮೊದಲು ಚಿತ್ತವನ್ನು ಸುಪ್ರಸನ್ನಗೊಳಿಸುವ ಪ್ರಯತ್ನವನ್ನು ಮಾಡತಕ್ಕದ್ದು. ಅದೊಂದು ಕಾರ್ಯದಲ್ಲಿ ಅಂದರೆ ಚಿತ್ತವನ್ನು ಸಂತುಷ್ಟಗೊಳಿಸುವ ಕಾರ್ಯದಲ್ಲಿ ಮಾನವನಿಗೆ ಯಶಸ್ಸು ದೊರೆಯಿತೆಂದರೆ ಅವನ ಒಳ್ಳೆಯ ದಿವಸಗಳು ಬಂದವೆಂದು ಭಾವಿಸುವದರಲ್ಲಿ ಯಾವ ಆತಂಕಗಳೂ ಇಲ್ಲ.

ಪುಣ್ಯೈರ್ಮೂಲ ಫಲೈ: ಪ್ರಿಯಪ್ರಣಯಿನಿ ವೃತ್ತಿಂ ಕುರುಷ್ವಾಧುನಾ
ಭೂಶಯ್ಯಾಂ ನವಪಲ್ಲವೈರ ಕರಣೈರುತ್ತಿಷ್ಠ ಯಾವೋ ವನಮ್ ।
ಕ್ಷುದ್ರಾಣಾಮ ವಿವೇಕ ಮೂಢ ಮನಸಾಂ ಯತ್ರೇಶ್ವರಾಣಾಂ ಸದಾ
ಚಿತ್ತವ್ಯಾಧಿ ವಿವೇಕ ವಿಹ್ವಲಗಿರಾಂ ನಾಮಾಪಿ ನಶ್ರೂಯತೇ ||೫೬||

ಓ ಪ್ರಿಯ ಚಿತ್ತವೇ! ಇನ್ನು ನೀನು ಎದ್ದೇಳು. ಹಾಗು ಪವಿತ್ರವಾದ ಪುಷ್ಪಗಳು ಮತ್ತು ಫಲಗಳಿಂದ ವೃತ್ತಿಯನ್ನು ಪ್ರಾರಂಭಿಸಿ ವಿಶಾಲವಾದ ಪೃಥ್ವಿಯನ್ನು ಹಾಸುಗೆಯನ್ನಾಗಿಯೂ ನವೀನ ಪಲ್ಲವಗಳನ್ನು ತೊಟ್ಟು

ಕೊಳ್ಳುವಂಥ ವಸ್ತ್ರಗಳನ್ನಾಗಿಯೂ ಮಾಡಿಕೋ. ಇನ್ನು ನಾವು ವನಕ್ಕೆ ತೆರಳುತ್ತೇವೆ. ಅಲ್ಲಿ ನಿನಗೆ, ಮೂಢ ಮತಿಗಳೂ, ಅವಿವೇಕಿಗಳೂ, ಹಾಗು ವ್ಯಾಧಿಯ ವಿಕಾರದಿಂದ ವಿಹ್ವಲಗೊಂಡಂಥ ಬುದ್ಧಿಯುಳ್ಳಂಥ ಧನಿಕರ ಹೆಸರೂ ನಿನಗೆ ಕೇಳಲು ಸಿಕ್ಕಲಾರವು.

ಸಂಸಾರದ ಜಂಜಡಗಳನ್ನು ತೊರೆದು ಅರಣ್ಯದೊಳಗೆ ಪ್ರವೇಶಿಸಿದಾಗ, ಅಲ್ಲಿ ಯಾವುದರ ಕೊರತೆಯೂ ಇರುವದಿಲ್ಲ. ತೊಟ್ಟುಕೊಳ್ಳಲು ಗಿಡದ ತೊಗಟೆಗಳು ಬೇಕಾದಷ್ಟು ಸಿಕ್ಕುವವು. ಶಯ್ಯೆಗಾಗಿ ಇಡಿಯ ಪೃಥ್ವಿಯೇ ಇರುತ್ತದೆ. ಆಹಾರಕ್ಕಾಗಿ ನಾನಾಬಗೆಯ ಫಲಗಳು ದೊರೆಯುವವು. ಅಂದಾಗ ಇದಕ್ಕೂ ಹೆಚ್ಚಿನದು ಇನ್ನೇನುಬೇಕು? ಅಲ್ಲಿ ಅಂದರೆ ಆ ಕಾನನ ದಲ್ಲಿ ಶ್ರೀಮಂತಿಕೆಯ ಗರ್ವದಿಂದ ಮೆರೆಯುತ್ತಿರುವಂಥವರ ಹೆಸರೂ ಕೇಳ ಬರುವದಿಲ್ಲನೆಂಬುದು ಈ ಶ್ಲೋಕದ ತಾತ್ಪರ್ಯವಾಗಿದೆ.

ಮೋಹಂ ಮಾರ್ಜಯ ತಾಮುಪಾರ್ಜಯ ರತಿಂ ಚಂದ್ರಾರ್ಧ—
ಚೂಡಾಮಣೌ
ಚೇತ: ಸ್ವರ್ಗತರಂಗಿಣೀತಟೆ ಭುವಾಮಾಸಂಗ ಮಂಗೀಕುರು ।
ಕೋವಾ ವಿಚಿಷು ಬುದ್ ಬುದೇಷು ಚ ತಡಿಲ್ಲೇಖಾಸು ಚ
ಸ್ತ್ರೀಷು ಚ
ಜ್ವಾಲಾಗ್ರೇಷು ಚ ಪನ್ನಗೇಷು ಚ ಸರಿದ್ವೇಗೇಷುಚ ಪ್ರತ್ಯಯ:।೫೭।

ಓ ಚಿತ್ತವೆ, ನಿನ್ನ ಮೇಲೆ ಆವರಿಸಿದಂಥ ಮೋಹದ ಪರೆಯನ್ನು ಹರಿದು ಹಾಕು. ಚಂದ್ರಾರ್ಧ ಚೂಡಾಮಣಿ ಶಿವನನ್ನು—ಜಟಾಮುಕುಟದಲ್ಲಿ ಅರ್ಧ ಚಂದ್ರನನ್ನು ಧರಿಸಿದಂಥನನ್ನು- ಆದರದಿಂದ ಪ್ರೀತಿಸು. ಹಾಗು ಸ್ವರ್ಗ ತರಂಗಿಣಿಯ ತೀರದ ಪ್ರದೇಶವನ್ನು ಆಶ್ರಯಿಸು. ಏಕೆಂದರೆ, ತೆರೆಗಳಲ್ಲಿ, ಬುದ್ ಬುದಗಳಲ್ಲಿ, ಮಿಂಚಿ ಮಾಯವಾಗುವ ಕೋಲ್ಮಿಂಚಿನಲ್ಲಿ, ಸ್ತ್ರೀಯ ರಲ್ಲಿ, ಹಾವುಗಳಲ್ಲಿ, ಜ್ವಾಲೆಯಲ್ಲಿ ಹಾಗು ನದಿಯ ಪ್ರವಾಹದಲ್ಲಿ ವಿಶ್ವಾಸ ಇರಿಸುವದು ಸಾಧ್ಯವಿದೆಯೆ? ಅರ್ಥಾತ್ ಇವುಗಳೆಲ್ಲ ಸ್ಥಿರವಾದವುಗಳಲ್ಲ.

ಅದಕ್ಕಾಗಿ ಇಂಥವುಗಳೆಲ್ಲದರ ಮೇಲೆ ವಿಶ್ವಾಸವನ್ನಿಸದೆ, ಶಿವನ ಚರಣ ಗಳನ್ನು ಬಲವಾಗಿ ನಂಬು.

ದೇವ ದೇವನಾದ ಮಹಾದೇವನ ಚರಣ ಕಮಲಗಳನ್ನುಳಿದು ಮಿಕ್ಕಿ ಪ್ಪೆಲ್ಲವೂ ವಿಶ್ವಾಸಾರ್ಹ ವಾದಂಥವುಗಳಲ್ಲ. ಅದಕ್ಕಾಗಿ ಅಂಥವುಗಳ ಮೋಹ ವನ್ನು ಮನದೊಳಗಿಂದ ಕಿತ್ತಿಹಾಕು. ಹಾಗು ಪರ್ವತ ಪ್ರದೇಶಕ್ಕೆ—ಯಾವು ದೊಂದು ನದಿಯ ಉಗಮಸ್ಥಾನಕ್ಕೆ—ಹೋಗಿ ಅಲ್ಲಿ ಜಟಾ ಮುಕುಟದಲ್ಲಿ ಅರ್ಧ ಚಂದ್ರನನ್ನು ಧರಿಸಿಕೊಂಡಿರುವಂಥ ಶಿವನನ್ನು ಧ್ಯಾನಿಸುತ್ತ ಕುಳಿತು ಕೋ. ಅಂದರೆ ಚಿತ್ತವು ಪಾವನವಾಗುವದು.

ಅಗ್ರೇ ಗೀತಂ ಸರಸಕವಯಃ ಪಾರ್ಶ್ವತೋ ದಾಕ್ಷಿಣಾತ್ಯಾಃ
ಪೃಷ್ಠೇ ಲೀಲಾವಲಯ ಪರಿಣಿತಂ ಚಾಮರ ಗ್ರಾಹಿಣೀನಾಂ।
ಯದ್ಯಸ್ತ್ಯೇವಂ ಕುರು ಭವರ ಸಾಸ್ವಾದನೇ ಲಂಪಟತ್ವಂ
ನೋ ಚೇಚ್ಚೇತಃ ಪ್ರವಿಶ ಸಹಸಾ ನಿರ್ವಿಕಲ್ಪೇ ಸಮಾಧೌ ॥೫೮॥

ಒಂದು ವೇಳೆ ನಿನ್ನೆದುರು ಗಾಯನದ ಕಾರ್ಯಕ್ರಮಗಳು ನಡೆಯು ತ್ತಿದ್ದರೆ, ಪಕ್ಕದಲ್ಲಿ, ಪಾರ್ಶ್ವಭಾಗದಲ್ಲಿ ದಾಕ್ಷಿಣಾತ್ಯ ಭಾಗದ ಕವಿಯು ಕುಳಿತುಕೊಂಡಿದ್ದರೆ. ಹಿಂಭಾಗದಲ್ಲಿ ಸೊಂಟವನ್ನು ಹೊರಳಿಸುತ್ತ ಒಯ್ಯಾರ ಮಾಡುವಂಥ ಸುಂದರ ಸ್ತ್ರೀಯರ ಝೇಂಕಾರವು ಕೇಳಬರುತ್ತಿದ್ದರೆ ಓ ಚಿತ್ತವೇ! ನೀನು ಸಂಸಾರದ ಸ್ವಾದವನ್ನು ಸವಿಯಲೋಸುಗ ಸಿದ್ಧನಾಗು ಅರ್ಥಾತ್ ಲಂಪಟನಾಗು. ಇಲ್ಲವೆ ಸ್ಥಿರ ಸಮಾಧಿಯೊಳಗೆ ಪ್ರವೇಶಿಸು.

ಸುಂದರಿಯರಾದ ತರುಣಿಯರು ಸೇವೆಗಾಗಿ ಸದಾ ಸಿದ್ಧರಿರುವಾಗ ಜೊತೆಗೆ ಶೃಂಗಾರದ ಸಲಕರಣೆಗಳು ಯಾವುದೇ ಬಗೆಯ ತೊಂದರೆಗಳಿಲ್ಲದೆ ಧಾರಾಳವಾಗಿ : ಸಿಕ್ಕುತ್ತಿರುವಾಗ, ಅಂದರೆ ಶೃಂಗಾರದ ಸಾಧನೆಗಳನ್ನು ಸುಂದರ ತರುಣಿಯರನ್ನು ಕೂಡ—ಪಡೆಯಲು ಯಾವುದೇ ಬಗೆಯ ಆತಂಕಗಳಿದ್ದರೆ ಧಾರಾಳವಾಗಿ ಅವುಗಳ ಉಪಯೋಗವನ್ನು ಮಾಡಿಕೋ. ಒಂದು ವೇಳೆ ಅಂಥ ಸೌಲಭ್ಯಗಳು ಇರದಿದ್ದರೆ ಮಾತ್ರ ಅಂಥ ವಿಷಯಗಳತ್ತ

ಮನವನ್ನು ಹರಿಬಿಡಬೇಡ. ಏಕೆಂದರೆ ಅವುಗಳನ್ನು ಸ್ವಾಧೀನ ಪಡಿಸಿ ಕೊಳ್ಳಲು ಹೆಣಗುವದಕ್ಕಿಂತ ಎಲ್ಲಿಯಾದರೂ ನಿರ್ಜನ ಸ್ಥಾನಕ್ಕೆ ಹೋಗಿ ಸಮಾಧಿಸ್ಥನಾಗು. ಅದು ಹೆಚ್ಚು ಶ್ರೇಯಸ್ಕರವಾದುದಾಗಿದೆ.

ವಿರಮತ ಬುಧಾ ಯೋಷಿತ್ಸಂಗಾತ್ಸುಖಾತ್ ಕ್ಷಣ ಭಂಗುರಾ
ತ್ಕುರುತ ಕರುಣಾ ಮೈತ್ರೀ ಪ್ರಜ್ಞಾವಧೂಜನ ಸಂಗಮಂ!
ನ ಖಲು ನರಕೇ ಹಾರಾಕ್ರಾಂತಂ ಘನ ಸ್ತನ ಮಂಡಲಂ
ಶರಣಮಯು ವಾ ಶ್ರೋಣಿಬಿಂಬಂ ರಣನ್ಮಣಿಮೇಖಲಂ ||೫೯||

ಓ, ಪಂಡಿತರೇ! ತರುಣಿಯರ ಸಂಪರ್ಕದಿಂದ ದೊರೆಯುವಂಥ ಕ್ಷಣ ಭಂಗುರವಾದ, ನಿಮಿಷ ಮಾತ್ರವಾದ ಸುಖವನ್ನು ತ್ಯಜಿಸಿರಿ ಹಾಗು ಮೈತ್ರಿ ಕರುಣೆ, ಮತ್ತು ಪ್ರಜ್ಞಾರೂಪದ ತರುಣಿಯೊಂದಿಗೆ ಸಂಪರ್ಕವನ್ನು ಬೆಳೆಸಿರಿ ಏಕೆಂದರೆ ನರಕದೊಳಗೆ ಪ್ರವೇಶಿಸಿದಾಗ ಅರ್ಥಾತ್ ಅತಿಶಯ ಲಂಪಟ ನಾಗಿದ್ದುಕೊಂಡು ನರಕ ಪ್ರಾಪ್ತಿಯಾದಾಗ ಅಲ್ಲಿ ನಿಮಗೆ, ಹಾರಗಳಿಂದ ಶೋಭಾಯಮಾನರಾದ ಸ್ತ್ರೀಯರ ಪುಷ್ಟ ಸ್ತನ ಮಂಡಲಗಳಾಗಲಿ, ಮತ್ತು ಅವರ ತುಂಬಿದ ತೊಡೆಗಳು, ಆಕರ್ಷಣೀಯವಾದ ಕಟಿ ಪ್ರದೇಶ ವಾಗಲಿ ಗೋಚರವಾಗಲಾರದು.

ಮಾನವನು ಯಾವಾಗಲೂ ಪ್ರಜ್ಞೆ ಹಾಗು ಕರುಣೆಗಳ ಮೂರ್ತಿಯೂ ಯಾಗಿರಬೇಕು. ಅದನ್ನು ಬಿಟ್ಟು ಸದಾಕಾಲಪೂ ಸುಂದರ ತರುಣಿಯು ರೊಂದಿಗೆ ಭೋಗವಿಲಾಸದಲ್ಲಿಯೇ ಮಗ್ನನಾದುದಾದರೆ ಪರದಲ್ಲಿ ನಾನಾ ಬಗೆಯ ಸಂಕಟಗಳನ್ನು ಎದುರಿಸಬೇಕಾಗುವದು. ಏಕೆಂದರೆ ಅಲ್ಲಿ ಅವ ನಿಗೆ ಅಂಥ ಸುಂದರಿಯರು ಕಾಣ ಸಿಗುವದಿಲ್ಲ.

ಮಾತರ್ಲಕ್ಷ್ಮಿ ಭಜಸ್ವ ಕಂಚಿದಪಂ ಮತ್ಕಾಂಕ್ಷಿಣೀ ಮಾಸ್ಮಭೂ-
ರ್ಭೋಗೇಷು ಸ್ಪೃಹಯಾಲವೋ ನ ಹಿ ವಯಂ ಕಾ ನಿಸ್ಪೃಹಾಣಾ
ಮಸಿ
ಸದ್ಯ: ಸ್ಯೂತ ಪಲಾಶಪತ್ರಪುಟಿಕಾ ಪಾತ್ರೇ ಪವಿತ್ರೀಕೃತೈ-

ಭಿಕ್ಷಾಸಕ್ತು ಭಿರೇವ ಸಂಪ್ರತಿ ವಯಂ ವೃತ್ತಿಂ ಸಮೀಹಾ
ಮಹೇ ||೬೦||

ಓ ಲಕ್ಷ್ಮೀ ಮಾತೆಯೆ! ಇನ್ನು ಮೇಲೆ ನೀನು ಬೇರೆ ಯಾರನ್ನಾದರೂ ಭಜಿಸು. ನನ್ನ ಆಶೆಯನ್ನು ಬಿಟ್ಟು ಬಿಡು. ಏಕೆಂದರೆ, ಈಗ ನನಗೆ ವಿಷಯ ಸುಖಗಳ ಬಗೆಗಿನ ಅಭಿಲಾಷೆಯು ಎಳ್ಳಷ್ಟೂ ಇರುವದಿಲ್ಲ. ಅಲ್ಲದೆ ನಿಸ್ಪೃಹ ವೃತ್ತಿಯ ಪುರುಷನಿಗೆ ನೀನು ಯಾರು? ಅಂಥವನು ನಿನ್ನನ್ನು ಲಕ್ಷಿಸುವದೇ ಇಲ್ಲ. ಅವನೆದುರು ನೀನು ತೀರ ತುಚ್ಛಳು. ಅದೇ ರೀತಿಯಾಗಿ ಇನ್ನು ಮೇಲೆ ನೀನೂ ನನಗೆ ತುಚ್ಛಳಾಗಿರುವಿ. ಏಕೆಂದರೆ ಭಿಕ್ಷೆ ಬೇಡಿ ಉಪಜೀವಿಸಲು ಸಿದ್ಧನಾಗಿರುವಂಥ ನನಗೆ ನಿನ್ನ ಅವಶ್ಯಕತೆಯಾದರೂ ಏನಿದೆ?

ಸಂಸಾರದ ಎಲ್ಲ ಸುಖಗಳೂ ಬೇಕು ಎನ್ನುವವನಿಗೆ ಐಶ್ವರ್ಯವೂ ಬೇಕು. ಏಕೆಂದರೆ ಸುಖವನ್ನು ಪಡೆಯಲು ಹಣವನ್ನು ನೀರಿನಂತೆ ವೆಚ್ಚ ಮಾಡಬೇಕಾಗುವದು. ಆದರೆ ಸಂಸಾರದ ಜಂಜಡಗಳನ್ನೆಲ್ಲ ಬದಿಗಿರಿಸಿ ಭಿಕ್ಷೆ ಬೇಡಿ ಹೊಟ್ಟೆ ಹೊರೆದುಕೊಳ್ಳಲು ನಿರ್ಧರಿಸಿದಂಥವನಿಗೆ ಐಶ್ವರ್ಯದ ಅರ್ಥಾತ್ ಲಕ್ಷ್ಮಿಯ ಆವಶ್ಯಕತೆಯಾದರೂ ಏನಿದೆ? ಇಲ್ಲವೆಂದರ್ಥ.

ಯೂಯಂ ವಯಂ ವಯಂ ಯೂಯಮಿತ್ರಾಸೀನ್ಮತಿರಾವಯೋಃ।
ಕಿಂ ಜಾತ ಮಧುನಾಮಿತ್ರಯೂಯಂ ಯೂಯಂ ವಯಂ
ವಯಮ್ ||೬೧||

ಓ, ಗೆಳೆಯಾ! ನೀನು ಇದ್ದಂತೆಯೇ ನಾನು ಇರುವೆನು. ಮತ್ತು ನಾನು ಹೇಗಿರುವೆನೋ ಹಾಗೆ ನೀನಿರುವೆ. ಅರ್ಥಾತ್ ನಾವೀರ್ವರೂ ಪರಸ್ಪರರು ಒಂದೇ ಆಗಿರುವೆವು. ನಮಗೆಲ್ಲ ಮೊಟ್ಟ ಮೊದಲಿಗೆ ಮತಿ ಇದ್ದಿತು. ಈಗ ಮಾತ್ರ ಅದು ಎಲ್ಲಿ ಹೋಗಿದೆಯೋ ಗೊತ್ತೇ ಇಲ್ಲದಂತಾಗಿದೆ. ಏಕೆಂದರೆ ನಾನು ನಾನೇ ಆಗಿದ್ದು ನೀನು ನೀನಾಗಿರುವಿ. ಅರ್ಥಾತ್ ನೀನು ವಿಷಯಾಭಿಲಾಷಿಯಾಗಿದ್ದು ನಾನು ವಿರಕ್ತನಾಗಿರುವೆನು. ಅದ್ಧಕ್ಕಾಗಿ ನಾವು ಪರಸ್ಪರರು ಒಂದೇ ಅಲ್ಲವೆಂಬುದು ಸಿದ್ಧವಾದಂತಾಯಿತು.

ಮಾನವರೆಲ್ಲರೂ ಒಂದೇ ಆಗಿರುವರು- ಯಾರು ಹೆಚ್ಚು ಅಲ್ಲ. ಯಾರು ಕಡಿಮೆಯೂ ಅಲ್ಲ. ಏಕೆಂದರೆ ಎಲ್ಲರೂ ದೇವ ನಿರ್ಮಿತರು. ಒಬ್ಬನಿಗೆ ಮುಳ್ಳು ತಗುಲಿದರೆ ಎಷ್ಟು ನೋವಾಗುವದೋ ಇನ್ನೊಬ್ಬನಿಗೆ ತಗುಲಿದಾಗಲೂ ಆವನಿಗೆ ಅಷ್ಟೇ ನೋವಾಗುವದು. ಅದಕ್ಕಾಗಿ ಎಲ್ಲರೂ ಒಂದೇ ಆಗಿದ್ದರೂ, ಅವರ ಗುಣಗಳು ಮಾತ್ರ ಬೇರೆ ಬೇರೆಯಾಗಿ, ಅವರ ಅಭಿಲಾಷೆಗಳು ಬೇರೆ ಬೇರೆಯಾಗಿ ಪರಸ್ಪರರು ಭಿನ್ನರಾಗುವರು.

ರಮ್ಯಂಹರ್ಮ್ಯತಲಂ ನ ಕಿಂ ವಸತಯೇ ಶ್ರಾವ್ಯಂ ನ ಗೇಯಾದಿಕಂ
ಕಿಂ ವಾ ಪ್ರಾಣಸಮಾಗಮಸುಖಂ ನೈವಾಧಿಕಂ ಪ್ರೀತಯೇ।
ಕಿಂ ತದ್‌ಭ್ರಾಂತ ಪತತ್ಪತಂಗ ಪವನವ್ಯಾಲೋಲ ದೀಪಾಂಕುರ-
ಚ್ಛಾಯಾ ಚಂಚಲ ಮಾಕಲಯ್ಯ ಸಕಲಂ ಸಂತೋವ ನಾಂತಂ
ಗತಾ: ॥೬೨॥

ಸಾಧು-ಸಂತರು ವಾಸಿಸಲೋಸುಗ ಅವರಿಗೆ ಮೊದಲು ಭವ್ಯವಾದ ಹರ್ಮ್ಯಗಳಿರಲಿಲ್ಲವೆ? ಅವರಿಗೆ, ಕೇಳಲು ಇಂಪಾದ ಗಾಯನ ಸಿಕ್ಕುತ್ತಿರ ಲಿಲ್ಲವೆ? ಅಧಿಕ ಪ್ರೀತಿಯನ್ನು ಹುಟ್ಟಿಸಲೋಸುಗ ಅವರಿಗೆ ಸ್ತ್ರೀ ಸಮಾ ಗಮದ ಸುಖವು ಇರಲಿಲ್ಲವೆ? ಆ ಸಾಧು ಸಂತರಿಗೆ ಅವುಗಳೆಲ್ಲವೂ ಇದ್ದವು. ಆದರೂ ಅವರು ಅಧೋಗತಿಗಿಳಿಸುವಂಥ ಈ ಸಂಸಾರವನ್ನು ಎರಗುತ್ತಿರುವ ಪತಂಗದಿಂದಾಗಿ ಅಲ್ಲಾಡುತ್ತಿರುವ ದೀಪದ ಛಾಯೆಯಂತೆ ಚಂಚಲವಾದು ದೆಂದು ತಿಳಿದು ಅದರ ಸಂಗವನ್ನೇ ತ್ಯಜಿಸಿಬಿಟ್ಟರು.

ಸಾಧು-ಸಂತರು ತಮಗೆ ಇರಲು ಮನೆಯಿಲ್ಲ, ವಿಷಯೋಪಭೋಗ ಗಳನ್ನು ಅನುಭವಿಸಲು ಆಸ್ಪದವಿಲ್ಲವೆಂದು ಅವರು ಸನ್ಯಾಸಿಗಳಾಗುವದಿಲ್ಲ. ಅವರಿಗೆ ಏನೆಲ್ಲವೂ ಇದ್ದರೂ ಕೂಡ ಅವರು ಈ ಸಂಸಾರವು ನಿ:ಸಾರವೆಂದು ಒಗೆದು ಆ ಮಾರ್ಗವನ್ನವಲಂಬಿಸಿರುತ್ತಾರೆ. ಗೌತಮಬುದ್ಧನಿಗೆ ಪ್ರಭು ದೇವರಿಗೆ ಯಾವುದೂ ಕಡಿಮೆಯಾಗಿರಲಿಲ್ಲ. ಬುದ್ಧನಿಗೆ ಹೆಂಡತಿ ಮಕ್ಕಳು, ಐಶ್ವರ್ಯರಾಜ್ಯ ಎಲ್ಲವೂ ಇದ್ದಿತು. ಆದರೂ ಅವನು ಅದನ್ನು ತ್ಯಜಿಸಿ ಸನ್ಯಾಸಿಯಾದನು ಪ್ರಭುದೇವರದಂತೂ ಇನ್ನೂ ವಿಚಿತ್ರ. ಅರಸೊತ್ತಿಗೆ

ಇವ್ವರೂ ಹೆಣ್ಣಿನ ಮಾಯೆಯೊಳಗೆ ಸಿಲುಕದೆ ವೀರ ವಿರಕ್ತರಾದರು. ಹೀಗೆ ಅವರವರ ಅಭಿಲಾಷೆಗಳನ್ನು ಅನುಸರಿಸಿ ಮಾನವರಲ್ಲಿ ಅಂತರವು ಕಂಡು ಬರುವದು.

ಕಿಂ ಕಂದಾ: ಕಂದರೇಭ್ಯಃ ಪ್ರಲಯ ಮುಪಗತಾ ನಿರ್ಝರಾ
ವಾಗಿರಿಭ್ಯ:
ಪ್ರಧ್ವಸ್ತಾವಾ ತರುಭ್ಯಃ ಸರಸಫಲಭೃತೋ ವಲ್ಕಲಿನ್ಯಶ್ಚ ಶಾಖಾಃ।
ವೀಕ್ಷ್ಯಯಂತೇ ಯನ್ಮುಖಾನಿ ಪ್ರಸಭಮುಖಗತ ಪ್ರಶ್ರಯಾಣಾಂ
ಖಲಾನಾಂ
ದು:ಖೋಪಾತ್ತಾಲ್ಪವಿತ್ತ ಸ್ಮಯಪವನ ಶಾನ್ನಿರ್ತಿಂತ
ಭ್ರೂಲತಾನಿ ॥೬೩॥

ಕಂದರಗಳೊಳಗಿನ ಕಂದ ಮೂಲಗಳು ಹಾಗು ಪರ್ವತ ಪ್ರದೇಶ ದೊಳಗಿನ ನೀರಿನ ಝರಿಗಳು ಪ್ರಳಯ ಹೊಂದಿದವೆ? ಅರ್ಥಾತ್ ಅವು ಗಳೆಲ್ಲ ಹಾಳಾಗಿ ಹೋದವೆ? ಅಥವ ರಸಭರಿತ ಫಲಗಳನ್ನು ಹಾಗು ವಲ್ಕಲಗಳನ್ನು ದಯಪಾಲಿಸುವಂಥ ವೃಕ್ಷಗಳು ಇಲ್ಲವಾಗಿ ಬಿಟ್ಟವೆ? ಹಣವೇ ಸರ್ವಸ್ವವೆಂದು ಭಾವಿಸಿ ತಾವೇ ತಾವಾಗಿ ಮೆರೆಯುತ್ತಿರುವ ಮದಾಂಧರ ಬಳಿಗೆ ನಾವು ಏತಕ್ಕೆ ಹೋಗಬೇಕು? ಅವರ ಆಶ್ರಯವನ್ನು ನಾವು ಏತಕ್ಕೆ ಬಯಸಬೇಕು? ನಮಗೆ ಕಾನನ ಪ್ರದೇಶದೊಳಗೆ ಯಾವುದಕ್ಕೆ ಕಡಿಮೆ ಯಾಗಿದೆಯೆಂದು ಅವರೆದುರು ದೀನತನವನ್ನು ಪ್ರದರ್ಶಿಸಬೇಕು? ತಾತ್ಪರ್ಯವಿಷ್ಟೆ: ಧನ ಮದಾಂಧರಾದ ದುಷ್ಟರ ಆಶ್ರಯದಲ್ಲಿದ್ದುಕೊಂಡ ರಾಜೋಪಭೋಗಗಳನ್ನು ಅನುಭವಿಸುವದಕ್ಕಿಂತ ಅರಣ್ಯದೊಳಗೆ ಸಜ್ಜನರ ಜೊತೆಗೆ ಇದ್ದುಕೊಂಡು ಕಂದ-ಮೂಲಗಳನ್ನು ಭಕ್ಷಿಸುತ್ತ ಕಾಲ ಕಳೆಯು ವದು ಬಹಳ ಒಳ್ಳೆಯದು.

ಮಾನವಂತರು ತಮ್ಮ ಘನತೆಗೆ, ಅಂತಸ್ತಿಗೆ ಕುಂದು ಬರುವಂತಹ ಸ್ಥಳದಲ್ಲಿ — ಅಲ್ಲಿ ಅವರಿಗೆ ರಾಜೋಚಿತ ಸತ್ಕಾರವಾಗುತ್ತಿದ್ದರೂ ಕೂಡ

ಒಂದು ನಿಮಿಷವೂ ನಿಲ್ಲಲಾರರು, ಈ ಬಗ್ಗೆ ಮಹಾಕವಿ ಸರ್ವಜ್ಞನು ಕೂಡ:

ಹಂಗಿನರಮನೆಗಿಂತ ವಿಂಗಡದಾ ಗುಡಿಲೇಸು ।
ಭಂಗಬಟ್ಟುಂಬ ಬಿಸಿ ಅನ್ನಕ್ಕಿಂತ ।
ತಂಗುಳವೇ ಲೇಸು ಸರ್ವಜ್ಞ

ಎಂದು ಹೇಳಿರುವನು. ಹೀಗಿರುವಾಗ ಅಭಿಮಾನಿಗಳಾದ ಪುರುಷರು ಹಣವೇ ಸರಸ್ವವೆಂದು ಭಾವಿಸಿರುವಂಥ ಮದಾಂಧದ ಆಶ್ರಯದಲ್ಲಿ ಇರುವದು ಎಂದಿಗಾದರೂ ಸಾಧ್ಯವಿದೆಯೆ? ಇಲ್ಲವೇ ಇಲ್ಲ. ಏಕೆಂದರೆ ಅವರು ಅರಣ್ಯದೊಳಗಿದ್ದುಕೊಂಡು ಕಂದಮೂಲಗಳನ್ನು ತಿಂದು ಕಾಲಕಳೆಯಲು ಸಂತೋಷದಿಂದ ಒಪ್ಪಿಕೊಳ್ಳುತ್ತಾರೆ.

ಗಂಗಾತರಂಗ ಮಹಿಮಶಿಕರ ಶೀತರಾನಿ
ವಿಧ್ಯಾಧರಾಧ್ಯುಷಿತ ಚಾರುಶೀಲಾ ತಲಾನಿ ।
ಸ್ಥಾನಾನಿಕಿಂ ಹಿಮವತಃ ಪ್ರಲಯಂ ಗತಾನಿ
ಯತ್ಸಾವಮಾನ ಪರಪಿಂಡರತಾ ಮನುಷ್ಯಾಃ ॥೬೪॥

ಗಂಗಾಮಾತೆಯ ತರಂಗಗಳ ಶೀತಲ ಜಲಕಣಗಳಿಂದ ತಣ್ಣಗಾಗಿರುವಂಥ, ಹಾಗು ವಿದ್ಯಾಸಂಪನ್ನರು ಕುಳಿತುಕೊಳ್ಳುವಂಥ ಹಿಮಾಲಯ ಪರ್ವತ ಪ್ರದೇಶದೊಳಗಿನ ವಿಶಾಲ ಶಿಲಾತಲಗಳೇನು ನಷ್ಟವಾಗಿ ಬಿಟ್ಟವೆ? ಹೀಗಿದ್ದರೂ ಅನ್ನಕ್ಕಾಗಿ, ಸ್ಥಳಕ್ಕಾಗಿ ಅಪಮಾನವನ್ನು ಸಹಿಸಿಕೊಂಡು ಸುಮ್ಮನೆ ಇರುವಂಥ, ಜೀವನವನ್ನು ನಡೆಯಿಸುತ್ತಿರುವಂಥ ಮಾನವರೂ ಇರುವರಲ್ಲ!

ಮಾನವನ ಅಭಿರುಚಿಗಳು ಹಾಗು ಅಭಿಲಾಷೆಗಳಿಂದ ಅವರಲ್ಲಿ ಬೇರೆ ಬೇರೆ ವಿಧಗಳಾಗುತ್ತಿವೆಯೆಂದು ಆಗಲೇ ಹೇಳಿಯಾಯಿತು. ತಮ್ಮ ಅಂತಸ್ಥಿಗೆ ಧಕ್ಕೆ ಬರುವಂಥ ಸ್ಥಾನದ ರಾಜಭೋಗವನ್ನು ತ್ಯಜಿಸಲೂ ಕೆಲವರು ಸಿದ್ಧರಾಗುತ್ತಿದ್ದರೆ, ಅಂಥದನ್ನು ಸಹಿಸಿಕೊಂಡು ಆ ಹೀನವಾದ ಸ್ಥಳದ

ಲ್ಲಿಯೇ ಸುಖದಿಂದ; ಸಂತೋಷದಿಂದ ಜೀವನವನ್ನು ಸಾಗಿಸುತ್ತಿರುವವರೂ ಉಂಟು ಎಂಬುದು ಈ ಶ್ಲೋಕದ ತಾತ್ಪರ್ಯವಾಗಿರುವದು.

ಯದಾಮೇರು: ಶ್ರೀ ಮಾನ್ನಿತತತಿ ಯುಗಾಂತಾಗ್ನಿ ನಿಹಿತ:
ಸಮುದ್ರಾ: ಶುಷ್ಯಂತಿ ಪ್ರಚುರ ನಿಕರ ಗ್ರಾಹ ನಿಲಯಾ:|
ಧರಾ ಗಚ್ಛತ್ಯಂತಂ ಧರಣಿಧರ ಪಾದೈರಪಿ ಧೃತಾ
ಶರೀರೇ ಕಾವಾರ್ತಾ ಕರಿಕಲಭಕರ್ಣಾಗ್ರ ಚಪಲೇ ||೬೫||

ಓ, ಶ್ರೀಯುತರೆ! ಸುಮೇರು ಪರ್ವವು ಕೂಡ ಪ್ರಳಯದ ಅಗ್ನಿಯಿಂದ ಬೆಂದು ನೆಲಕ್ಕುರುಳಿ ಬಿಟ್ಟರೆ, ದೊಡ್ಡ ದೊಡ್ಡ ಮೀನು—ಮೊಸಳೆಗಳೇ ಮೊದಲಾದ ಜಲಚರಗಳ ಆಶ್ರಯಸ್ಥಾನವಾದ ಸಮುದ್ರವು ಒಂದು ವೇಳೆ ಒಣಗಿ ಬಿಟ್ಟರೆ, ಬತ್ತಿ ಹೋದರೆ, ಪರ್ವತಗಳೇ ಆಧಾರವುಯವಾದಂಥ ಈ ಭೂಮಿಯು ಒಂದು ವೇಳೆ ನಾಶವಾದರೆ ಇನ್ನು ಆನೆಯ ಮರಿಯ ಕಿವಿಯ ತುದಿಯಂತೆ ಚಂಚಲವಾಗಿರುವಂತಹ ಈ ಮಾನವ ಶರೀರದ ಪಾಡೇನು? ಇಂಥ ಶರೀರದ ನಂಬುಗೆಯಾದರೂ ಏನು ?

ಮಾನವ ಜೀವನವು ಮರಿಯಾನೆಯ ಕಿವಿಯ ತುದಿಯಂತೆ ಚಂಚಲವಾದುದಾಗಿದೆ. ಮರಿ ಆನೆಯ ಕರ್ಣಾಗ್ರಭಾಗವು ಒಂದು ನಿಮಿಷವೂ ಸುಮ್ಮನಿರುವದಿಲ್ಲ. ಒಂದೇಸವನೆ ಅಲ್ಲಾಡುತ್ತಲೇ ಇರುತ್ತದೆ. ಅರ್ಥಾತ್ ಅದು ತೀರ ಚಂಚಲವಾಗಿರುವದು. ಅದೇ ರೀತಿಯಾಗಿ ಮಾನವನ ಶರೀರವು ಇರುವದು. ಅಂದರೆ ಯಾವ ಸಮಯಕ್ಕೆ ಏನಾದೀತೆಂಬುದನ್ನು ಹೇಳುವದು ಯಾರಿಗೂ ಸಾಧ್ಯವಿಲ್ಲದಾಗಿದೆ.

ಏಕಾಕಿ ನಿಸ್ಪೃಹ: ಶಾಂತ: ಪಾಣಿ ಪಾತ್ರೋ ದಿಗಂಬರ:|
ಕದಾಶಂಭೋ ಭವಿಷ್ಯಾಮಿ ಕರ್ಮ ನಿರ್ಮೂಲನ ಕ್ಷಮ: ||೬೬||

ಓ, ಶಂಭುವೆ! ನಾನು ಯಾವಾಗ, ಏಕಾಕಿಯಾಗಿ, ಇಚ್ಛಾರಹಿತನಾಗಿ

ತೀರ ಪ್ರಶಾಂತ ಚಿತ್ತನಾಗಿ, ಕರದೊಳಗೆ ಪಾತ್ರೆಯನ್ನು ಧರಿಸಿದವನಾಗಿ, ಹಾಗು ಸಕಲ ಕರ್ಮಗಳನ್ನು ಕಿತ್ತು ಎಸೆಯಬಲ್ಲವನಾಗುವೆನು?

ಜಗತ್ತಿನೊಳಗಿನ ಮೋಹಗಳನ್ನು, ಬಯಕೆಗಳನ್ನು ಹರಿದೊಗೆದು ಬತ್ತಲೆಯಾಗಿ ನಿರ್ವಿಕಾರ ಚಿತ್ತದಿಂದ ಭಿಕ್ಷಾಟನೆ ಮಾಡುತ್ತ ದೇಶ ಸಂಚಾರಿಯಾಗಿ ಹೊರಡುವದು ಎಲ್ಲರಿಂದಲೂ ಸಾಧ್ಯವಾಗುವಂತಹ ಕಾರ್ಯ ವಲ್ಲವೆಂಬುದನ್ನು ಭರ್ತೃಹರಿಯು ಈ ಶ್ಲೋಕದಲ್ಲಿ ಹೇಳಿರುವನು.

ಪ್ರಾಪ್ತಾಃ ಶ್ರೀಯಃ ಸಕಲ ಕಾಮದುಧಾಸ್ತತಃ ಕಿಂ,
ದತ್ತಂ ಪದಂ ಶಿರಸಿ ವಿದ್ವಿಷತಾಂ ತತಃ ಕಿಂ|
ಸಮ್ಮಾನಿತಾಃ ಪ್ರಣಯಿನೋ ವಿಭವೈಸ್ತತಃ ಕಿಂ,
ಕಲ್ಪಂ ಸ್ಥಿತಂ ತನು ಭೃತಾಂ ತನುಭಿಸ್ತತಃ ಕಿಂ ||೬೭||

ಒಂದು ವೇಳೆ ಮಾನವನ ಸಕಲ ಇಚ್ಛೆಗಳನ್ನು ಪೂರೈಸಬಲ್ಲಂಥ ಲಕ್ಷ್ಮಿಯು ವಶಳಾದರೂ ಮಾಡತಕ್ಕದ್ದೇನು? ಯುದ್ಧರಂಗದಲ್ಲಿ ಶತೃವಿನ ತಲೆಯ ಮೇಲೆ ಕಾಲನ್ನಿರಿಸಿದರೆ ಅರ್ಥಾತ್ ಅವನನ್ನು ಗೆದ್ದರಾದರೂ ಏನು ? ಪ್ರಣಯಿಗಳಾದವರು ಹಣವನ್ನು—ಐಶ್ವರ್ಯವನ್ನು—ಮೋಹಿಸಿ ದರೇನು? ಒಂದು ವೇಳೆ ಈ ದೇಶದೊಳಗೆ ಕಲ್ಪದ ವರೆಗೆ ಜೀವಿಸಿದ್ದರೆ ಬಂದ ಭಾಗ್ಯವೇನು? ಒಟ್ಟಿನ ಮೇಲೆ ಶಾರಾಂಶವಿಷ್ಟೆ: ಈ ಸಂಸಾರದಿಂದ ನಿವೃತ್ತಿ ಹೊಂದಲೋಸುಗ ವೈರಾಗ್ಯವನ್ನು—ವಿರಕ್ತಿಯನ್ನು—ತಳೆಯದಿದ್ದರೆ ಎಲ್ಲವೂ ವ್ಯರ್ಥವೇಸರಿ.

ಈ ಜಗತ್ತಿನೊಳಗೆ ವೈರಾಗ್ಯವು ಹೆಚ್ಚಿನದಾಗಿರುವದು. ಅದನ್ನುಳಿದು ಬೇರಾವುದೂ ಶ್ರೇಷ್ಠವಾದುದಿಲ್ಲ. ಯುದ್ಧರಂಗದಲ್ಲಿ ಒಂದು ಸಲ ಶತೃವನ್ನು ಗೆಲ್ಲಬಹುದುದು. ಆದರೆ ಒಬ್ಬ ಶತೃವು ಸೋತರೆ ಮತ್ತೆ ಸಾವಿರಾರು ಶತೃ ಗಳು ಹುಟ್ಟಿಕೊಳ್ಳುವರು. ಅವರನ್ನೂ ಗೆದ್ದರೆ ಮತ್ತೆ ಸಾವಿರಪಟ್ಟು ಹೆಚ್ಚು ವರು. ವೈರಕ್ಕೆ ಅಂತವೆಂಬುದು ಇಲ್ಲವೆ ಇಲ್ಲ. ಇದೇಮಾತು ಐಶ್ವರ್ಯಕೂ

ಸರಿಹೋಗುವದು. ಅಂದರೆ, ಮಾನವನನ್ನು ಇಚ್ಛೆಯನ್ನು ಪೂರ್ಣಗೊಳಿಸಲು ಎಷ್ಟು ಹಣವಿದ್ದರೂ ಇನ್ನೂ ಬೇಕು ಎನ್ನಿಸುವದು.

ಮನಸ್ಸಿನ ಬೇಡಿಕೆಗಳು ಹೆಚ್ಚುತ್ತಲೆ ಹೋಗುವವು. ಪ್ರಣಯದ ಬಗೆಗೂ ಇದೇ ಮಾತನ್ನು ಹೇಳಬಹುದುದಾಗಿದೆ. ಆದರೆ ವಿರಕ್ತಿಯದು ಹಾಗಲ್ಲ. ಆ ದಿಸೆಯಲ್ಲಿ ಚಿತ್ತವು ಒಂದುಸಲ ಸಂತುಷ್ಟಗೊಂಡಿತೆಂದರೆ ಅವರಿಗೆ, ವಿರಕ್ತಿಯನ್ನು ತಳೆದ ಆ ಮಹಾನುಭಾವನಿಗೆ ಬೇರಾವುದೂ ಬೇಕಾಗುವದಿಲ್ಲ. ಅವನು ತಾನು ಇದ್ದ ಸ್ಥಿತಿಯಲ್ಲಿಯೇಅದು ಎಂತಹ ತೊಂದರೆದಾಯಕವಾದುದೇ ಆಗಿರಲಿ— ಜಗತ್ತಿನ ಪರಿವೆಯನ್ನು ಮಾಡದೆ ಸಂತುಷ್ಟನಾಗಿರುವನು. ಅದಕ್ಕಾಗಿಯೇ ವೈರಾಗ್ಯದ ಮಹಿಮೆಯು ಅಪಾರವಾದುದು.

ಜೀರ್ಣಾಕಂಥಾ ತತ: ಕಿಂ ಸಿತಮ ಮಲಪಟಂ ಪಟ್ಟಸೂತ್ರಂ ತತಃ ~
ಕಿಮೇಕಾ,
ಭಾರ್ಯಾ ತತಃ ಕಿಂ ಕದಶನ ಮಥವಾ ವಾಸರಂತೇ ತತಃ ಕಿಂ |
ಭಕ್ತಂ ಭುಕ್ತಂ ತತಃ ಕಿಂ ಕದಶನ ಮಥವಾ ವಾಸರಂತೇ ತತಃ ಕಿಂ,
ವ್ಯಕ್ತಂ ಜ್ಯೋತಿರ್ನವಾಂತರ್ಮಥಿತಭವ ಭಯಂ ವೈಭವಂ ವಾ
ತತ: ಕಿಮ್ ||೬೮||

ಒಂದು ವೇಳೆ ಜೀರ್ಣವಾದ—ಹರಿದು ಹೋದಂತಹ-ಕೌದಿಯನ್ನು ಹೊದೆದುಕೊಂಡರೇನು? ಆದರಿಂದ ಆಗಬೇಕಾದುದೇನು? ಇಲ್ಲವೆ ಉಜ್ವಲವಾದ ನಿರ್ಮಲ ವಸ್ತ್ರಗಳನ್ನಾಗಲಿ ಅಥವಾ ಬಹು ಮೂಲ್ಯದ ಪೀತಾಂಬರವನ್ನು ಧರಿಸಿದರಾದರೂ ಏನು? ಮನೆಯೊಳಗೆ ಪತ್ನಿಯು ಒಬ್ಬಳೇ ಇದ್ದರ ಏನು? ಇಲ್ಲವೆ ಕುದುರೆ ಆನೆಗಳೊಂದಿಗೆ ಕೋಟಿಗಟ್ಟಳೆ ಸ್ತ್ರೀಯರಿದ್ದರೇನು? ನೆಲ್ಲಕ್ಕಿಯ ಅನ್ನವನ್ನು ಉಂಡರೇನು? ಅಥವಾ ಸಾಯಂಕಾಲದ ಸಮಯದಲ್ಲಿ ಕುತ್ಸಿತ ಅನ್ನವನ್ನು ಊಟ ಮಾಡಿರೇನು? ಒಂದು ವೇಳೆ ಸಂಸಾರದ ಭಯವನ್ನು ನಷ್ಟಗೊಳಿಸುವಂತಹ ಬ್ರಹ್ಮನ ಜ್ಯೋತಿಯನ್ನು ಹೃದಯ

ದೊಳಗೆ ಧಾರಣ ಮಾಡದಿದ್ದರೆ, ಎಂತಹ ಅತುಲೈಶ್ವರ್ಯವನ್ನು ಪಡೆದಿದ್ದರೂ ಅದು ವ್ಯರ್ಥವಾಗುವದು.

ಬ್ರಹ್ಮಜ್ಞಾನದ ಜ್ಯೋತಿಯು ಹೃದಯದೊಳಗೆ ಹೊತ್ತಿಕೊಳ್ಳಬೇಕು. ಅಂದರೆ ಎಲ್ಲವೂ ಸರಿ ಹೋಗುವದು. ಅರ್ಥಾತ್ ಅಂಥ ಮನುಜನಿಗೆ ಯಾವುದರ ಕೊರತೆಯೂ ದು:ಖಕ್ಕೀಡು ಮಾಡುವದಿಲ್ಲ. ಅಂದರೆ ಅಂಥವನಿಗೆ ತನಗೆ ಬೇಕಾಗಿರುವ ವಸ್ತುಗಳು ಸಿಗಲಿ ಸಿಗದಿರಲಿ ಅವುಗಳ ಬಗೆಗೆ ಅವನು ಚಿಂತಿಸುದೇ ಇಲ್ಲ, ಸಿಕ್ಕರೆ ಊಟ ಮಾಡುತ್ತಾರೆ. ಸಿಗದಿದ್ದರೆ ಭಗವಂತನ ನಾಮಸ್ಮರಣೆಯನ್ನು ಮಾಲುತ್ತ ಹಾಗೆಯೇ ಮಲಗಿಕೊಂಡು ಬಿಡುವನು ಹೀಗಾಗಿ ಅನನು ಯಾರ ಹಂಗಿಗೂ ಒಳಗಾಗದೆ ತನ್ನ ದಿನಗಳನ್ನು ಆನಂದದಿಂದ ಕಳೆಯುವನು.

ಒಂದು ವೇಳೆ ಬ್ರಹ್ಮಜ್ಞಾನದ ಜ್ಯೋತಿಯು ಹೃದಯಧೊಳಗೆ ಹೊತ್ತಿಕೊಳ್ಳದಿದ್ದರೆ ಮಾತ್ರ ಆನನ ಗತಿ ದೇವರಿಗೇ ಪ್ರೀತಿ ಎಂದು ಹೇಳಬಹುದು. ಏಕೆಂದರೆ ಅಂಥವರಿಗೆ ಎಷ್ಟು ಐಶ್ವರ್ಯವು ಸಿಕ್ಕರೂ, ಎಷ್ಟೊಂದು ಜನ ಸುಂದರಿಯರಾದ ಪತ್ನಿಯರು ದೊರೆತರೂ, ಎಂತಹ ಮೃಷ್ಟಾನ್ನವನ್ನು ಭೋಜನ ಮಾಡಿದರೂ ಅವನಿಗೆ ತೃಪ್ತಿಯು ಇರುವದೇ ಇಲ್ಲ. ಇನ್ನು ಬೇಕು ಎಂಬ ಹಂಬಲವೇ ಆವನ ಮನದೊಳಗೆ ಮನೆ ಮಾಡಿಕೊಂಡಿರುತ್ತದೆ ಅಂಥವನು ಈ ಸಂಸಾರದಲ್ಲಿ ಇದ್ದರೂ ಅಷ್ಟೆ, ಸತ್ತರೂ ಅಷ್ಟೆ ಎಂದು ಹೇಳಬಹುದು.

ಭಕ್ತಿರ್ಭವೇ ಮರಣ ಜನ್ಮಭಯಂ ಹೃದಿಸ್ಥಂ
ಸ್ನೇಹೋ ನ ಬಂಧುಷು ನ ಮನ್ಮಥಜಾ ವಿಕಾರಾ:|
ಸಂಸರ್ಗ ದೋಷ ರಹಿತಾ ವಿಜನಾ ವನಾಂತಾ
ವೈರಾಗ್ಯ ಮಸ್ತಿ ಕಿಮತಃ ಪರಮರ್ಥನೀಯಮ್ ||೬||

ಒಂದು ವೇಳೆ ಈ ಜಗತ್ತಿನೊಳಗೆ ಯಾವನೊಬ್ಬನಿಗೆ—ದೇವ ದೇವನಾದ ಮಹಾದೇವನಲ್ಲಿ ಅಗಾಧವಾದ, ಅನುಪಮವಾದ ಭಕ್ತಿಯರಲಿ,

ಇಲ್ಲವೆ ಹೃದಯದೊಳಗೆ ಜನನ-ಮರಣಗಳ-ಅಂದರೆ ಈ ಸಂಸಾರದೊಳಗೆ ಮೇಲಿಂದ ಮೇಲೆ ಹುಟ್ಟುವ ಸಾಯುವ ಪರಂಪರೆಗಳ ಭಯವು ಆವರಿಸಿಕೊಂಡಿದ್ದರೆ, ಬಂಧು—ಬಳಗದವರೇ ಮೊದಲಾದ ಪರಿವಾರದವರಲ್ಲಿ ಸ್ನೇಹಮಯ ಸಂಪರ್ಕವು ಇರದೆ ಇದ್ದರೆ, ಹಾಗು ಸಂಸರ್ಗದೋಷದಿಂದಾಗಿ ನಿರ್ಜನವಾದ ಅರಣ್ಯದೊಳಗೆ ವಾಸ ಮಾಡಿಕೊಂಡಿದ್ದರೆ, ದೇವಗಲ್ಲಿ ಬೇಡಿ ಪಡೆಯಬಹುದಾದಂಥ ವೈರಾಗ್ಯವು ಇವುಗಳಿಗಿಂತಲೂ ಹೆಚ್ಚಿನದು ಬೇರಾವುದಿರುವದು?

ವೈರಾಗ್ಯವೆಂದರೆ ಗಗನ ಕುಸುಮವಲ್ಲ. ಅಥವಾ ಯಾರಿಂದಲೂ ನೀಗಲಾರದಂತಹ ಕಾರ್ಯವೂ ಅಲ್ಲ. ಕೊಂಚ ಮನಮುಟ್ಟಿ ಏಕ ಚಿತ್ತದಿಂದ ನಾಲ್ಕು ಜನಕ್ಕೆ ಒಳ್ಳೆಯದಾಗುವಂಥ ಕಾಯುವನ್ನು ಮಾಡಿದರಾಯಿತು. ಅಂದರೆ ಯಾವನಾದರೊಬ್ಬನಿಗೆ ಮಹಾದೇವನಲ್ಲಿ ಅನುಪಮವಾದ, ಅಸದೃಶವಾದ ಭಕ್ತಿ ಆದರಗಳು ಹುಟ್ಟಿಕೊಂಡವೆಂದರೆ ಅದಕ್ಕಿಂತ ಹೆಚ್ಚಿನ ವೈರಾಗ್ಯವು ಬೇರಾವುದೂ ಇಲ್ಲವೆನ್ನಬಹುದು. ಅದೇ ರೀತಿಯಾಗಿ, ಹುಟ್ಟು ಸಾವುಗಳ ಭಯವಿದ್ದರೆ ಅಂದರೆ ಮನುಷ್ಯನಿಗೆ ಜನನ—ಮರಣಗಳ ಚಕ್ರಗಳ ಬಗ್ಗೆ ಭಯ ವಿದ್ದುದಾದರೆ ಅದೂ ಕೂಡ ಒಂದು ಬಗೆಯ ವೈರಾಗ್ಯವೆಂದೇ ಹೇಳಬೇಕು.

ಬಂಧು— ಬಾಂಧವರಲ್ಲಿ, ಪರಿವಾರದ ಜನರಲ್ಲಿ ಇಲ್ಲದ ಆಸಕ್ತಿ ಪ್ರೀತಿಗಳನ್ನು ತೋರಿಸುವದು, ಪರಮಾರ್ಥದ ಮಾರ್ಗಕ್ಕೆ ಅಡ್ಡಿಯಾಗುವದು. ಏಕೆಂದರೆ ಪರಿವಾರದವರಲ್ಲಿ ಪ್ರೀತಿಯನ್ನು ತೋರಿಸಿದರೆ, ಅವರಿಗಾಗಿ, ಅವರ ಪ್ರೀತ್ಯಾದರಗಳನ್ನು ಕಾಯ್ದುಕೊಳ್ಳುವ ಸಲುವಾಗಿ ಇಲ್ಲದ ಜಂಜಡಗಳನ್ನು ಕಟ್ಟಿಕೊಳ್ಳಬೇಕಾಗುವದು. ತನಗೆ ಅದು ಬೇಕು, ಇದು ಬೇಕು, ಎಂಬ ಬಯಕೆಯು ಹೆಚ್ಚುತ್ತಲೇ ಹೋಗುವದು. ಅದಕ್ಕಾಗಿ ಬಂಧು-ಬಾಂಧವರೊಂದಿಗೆ ಆದಷ್ಟು ದೂರವಿರುವದು, ಸ್ನೇಹ ರಹಿತನಾಗಿರುವದು, ವೈರಾಗ್ಯದ ಲಕ್ಷಣವಾಗಿರುವದು. ಅದೇ ರೀತಿಯಾಗಿ ಸಜ್ಜನರೊಂದಿಗೆ ಯಾವುದಾದರೊಂದು ವನ ಪ್ರದೇಶಕ್ಕೆ ಹೋಗಿ ಅಲ್ಲಿಯೇ ವಾಸವಾಗಿದ್ದು ಶಿವನಾಮದಲ್ಲಿ

ದಿನಗಳೆಯುವದೇ ಮೊದಲಾದವುಗಳಲ್ಲಿ ನಿರತರಾದವರಿಗೆ ಅದಕ್ಕಿಂತ ಹೆಚ್ಚಿನ ವೈರಾಗ್ಯವು ಬೇರಾವುದೂ ಬೇಕಿಲ್ಲ.

ತಸ್ಮಾದ ನಂತ ಮಜರಂ ಪರಮಂ ವಿಕಾಸಿ
ತದ್ ಬ್ರಹ್ಮ ಚಿಂತಯ ಕಿಮೇಭಿರ ಸಿದ್ಧಿ ಕಲ್ಪೈಃ।
ಯಸ್ಯಾನುಷಗ್ಗಿಣ ಇಮೇ ಭುವನಾಧಿ ಪತ್ಯಂ
ಭೋಗಾದಯಃ ಕೃಪಣ ಲೋಕ ಮತಾ ಭವಂತಿ ||೭೦||

ಯಾವಾಗಲೂ, ಅನಂತ, ಅಜರ—ಜರಾ ಇತ್ಯಾದಿಗಳಿಂದ ರಹಿತ, ಸರ್ವೋತ್ತಮ, ಹಾಗು ಶೋಕ ರಹಿತ ಬ್ರಹ್ಮದ ಚಿಂತನೆಯನ್ನು ಮಾಡಿರಿ ಮೂರ್ಖರಾದಂಥವರನ್ನು ಇಲ್ಲದ ಭ್ರಮೆಯಲ್ಲಿ ಕೆಡವುವಂಥ ಈ ಭುವನಾಧಿ ಪತ್ಯ, ಭೋಗ ಮತ್ತು ವಿಲಾಸಾದಿಗಳು ಆ ಬ್ರಹ್ಮದ ಆಶ್ರಯದಲ್ಲಿಯೇ ಇರುವವು. ಅರ್ಥಾತ್ ಆ ಬ್ರಹ್ಮದ ಲೇಶ ಮಾತ್ರ ಆನಂದವನ್ನು ಪಡೆದಂಥ ಮಹಾನುಭಾವರೆದುರು ತ್ರಿಭುವನದ ಅಧಿಪತ್ಯವನ್ನು ವಹಿಸಿಕೊಂಡಂತಹ ಅರಸರ ಐಶ್ವರ್ಯ ಹಾಗು ಅವರ ಭೋಗವಿಲಾಸಗಳು ನಿಃಸಾರವಾಗಿ ಕಂಡು ಬರುವವು. ಅಂದಾಗ ಅದರ ಮಹಿಮೆಯು ಎಂಥದಿರಬೇಕು?

ಇಹ—ಪರಗಳಲ್ಲಿ ಪರಿಪೂರ್ಣತೆಯನ್ನು ಪಡೆಯಬೇಕು, ದೇವ ದೇವ ನಾದ ಮಹಾದೇವನ ಸಾನ್ನಿಧ್ಯವನ್ನು ಸೇರಬೇಕು, ಎನ್ನುವವರು ಅನಂತ ವಾದ, ಸರ್ವೋತ್ತಮವಾದ, ಹಾಗು ಶೋಕ ರಹಿತವಾದ ಬ್ರಹ್ಮದ ಚಿಂತನೆ ಯನ್ನು ಮಾಡತಕ್ಕದ್ದು. ದೇಹದ ಬಗೆಗಿನ ಅಹಂಕಾರವನ್ನು ತ್ಯಜಿಸತಕ್ಕದ್ದು ಹಾಗು ಇಡಿಯ ಜಗತ್ತಿನ ಅಧಿಪತ್ಯವೇ ಎದುರಿಗೆ ಬಂದರೂ ಅಂದರೆ ರಾಜ್ಯದಆಧಿಪತ್ಯವು ತಾನಾಗಿಯೇ ದೊರೆಯುತ್ತಿದ್ದರೂ ಅದನ್ನು ಕಃ ಪದಾರ್ಥವೆಂದು ಭಾವಿಸತಕ್ಕದ್ದು. ಅದೇ ರೀತಿಯಾಗಿ ಸ್ವರ್ಗದ ಅಪ್ಸರೆ ಯರೇ ಭೂಮಿಗಿಳಿದು ಬಂದು ಎದುರಿಗೆ ನಿಂತುಕೊಂಡು ಭೋಗಲಾಲಸೆ ಯನ್ನು ಪ್ರಕಟಗೊಳಿಸಿದರೂ ಅವರತ್ತ ಹೊರಳಿ ನೋಡತಕ್ಕದ್ದಲ್ಲ.

ಏಕೆಂದರೆ ಅವುಗಳೆಲ್ಲ ಮಾನವನನ್ನು ಎಲ್ಲಿಲ್ಲದ ದುಃಖಕ್ಕೀಡು ಮಾಡುವಂತಹ ಸಾಧನಗಳಾಗಿವೆ. ಅಂಥವುಗಳತ್ತ ಅಂದರೆ ರಾಜ್ಯ ಭೋಗ

ದತ್ತ, ತರುಣಿಯರೊಂದಿಗಿನ ವಿಷಯ ವಿಲಾಸದತ್ತ, ತರುಣಿಯರೊಂದಿಗಿನ ವಿಷಯ ವಿಲಾಸದತ್ತ ಒಂದು ಸಲ ಮನಸ್ಸು ಹರಿಯಿತೆಂದರೆ ಅವನ ಏಳಿಗೆಯು ಮುಕ್ತಾಯವಾಯಿತೆಂದೇ ಭಾವಿಸತಕ್ಕದ್ದು. ಇದಕ್ಕಾಗಿ ಮಾನವನು ಇಂಥವುಗಳಿಂದ ದೂರವಿರತಕ್ಕದ್ದು, ಹಾಗು ತನ್ನ ಬಲವನ್ನು ಬ್ರಹ್ಮಜ್ಞಾನದತ್ತ ಹರಿಬಿಡತಕ್ಕದ್ದು. ಒಂದು ಸಲ ಬ್ರಹ್ಮಜ್ಞಾನದ ಸವಿಯು ಹತ್ತಿತೆಂದರೆ ಅವರಿಗೆ ಜಗತ್ತಿನ ಯಾವ ಮೋಹ ಜಾಲಗಳೂ ಆಕರ್ಷಿಸಲಾರವು. ಅವರ ಚಿತ್ತವನ್ನು ಚಂಚಲಗೊಳಿಸಲಾರವು. ಆ ಜ್ಞಾನದಲ್ಲಿ ಅಷ್ಟೊಂದು ಮಹತ್ವವಿರುತ್ತದೆ.

ಪಾತಾಲ ಮಾವಿಶಸಿ ನಭೋ ವಿಲಂಘ್ಯ
ದಿಂಗ್ ಮಂಡಲಂ ಭ್ರಮಿಸಿ ಮಾನಸ ಚಾಪಲೇನ|
ಭ್ರಾಂತ್ಯಾಪಿ ಜಾತು ವಿಮಲಂ ಕಥಮಾತ್ಮನೀನಂ
ತದ್‌ಬ್ರಹ್ಮ ನ ಸ್ಮರಸಿ ನಿರ್ವೃತಿ ಮೇಷಿ ಏನ ||೭೧||

ಓ, ಮನವೆ! ನೀನು, ನಿನ್ನಲ್ಲಿಯ ಚಂಚಲತೆಯಿಂದಾಗಿ ಪಾತಾಳದಲ್ಲಿಯೂ ಪ್ರವೇಶಿಸುವೆ, ಆಕಾಶವನ್ನು ಕೂಡ ಲೀಲಾಜಾಲವಾಗಿ ಉಲ್ಲಂಘಿಸಿ ಬಿಡುವೆ. ಮತ್ತು ದಶ ದಿಕ್ಕುಗಳಲ್ಲಿಯೂ ಧಾರಾಳವಾಗಿ ಭ್ರಮಣ ಮಾಡಿ ಬರುವೆ. ಆದರೆ ನಿನಗೆ ಮೋಕ್ಷದ ದಾರಿಯನ್ನು ತೋರಿಸುವಂತಹ, ಮೋಕ್ಷ ಪದವಿಯನ್ನು ದಯಪಾಲಿಸುವಂತಹ ವಿಮಲನ್ನು ಬ್ರಹ್ಮದ ಸ್ಮರಣೆಯ ಮಾತ್ರ ಕನಸಿನಲ್ಲಿಯೂ ಮಾಡುವದಿಲ್ಲ.

ಮನವು ಅತಿ ವಿಚಿತ್ರವಾದುದು, ಅದರ ಗತಿಯಂತೂ ಇನ್ನೂ ವಿಚಿತ್ರವಾದುದು. ಅಂತೆಯೇ ಹಿಂದಿನ ಹಿರಿಯರು ಮನವೆಂಬ ಮರ್ಕಟದ ತಡೆಯಲಾರೆನು. ಎಂದು ಹೇಳಿದ್ದಾರೆ, ಇದರ ಮೇಲಿಂದ ಮನವು ಎಂತಹ ಮಂಗವೆಂಬುದರ ಅರಿವಾಗುವದು. ಅಂಥ ಮನಸ್ಸಿನ ಹಿಡಿತದೊಳಗೆ ಮಾನವನ್ನು ಸಿಲುಕಿದನೆಂದರೆ ಅವನ ದಿನಗಳು ತುಂಬಿದವೆಂದೇ ಭಾವಿಸತಕ್ಕದ್ದು. ಏಕೆಂದರೆ ಇದು ಆ ಮನವು—ನಿಜಕ್ಕೂ ಅಷ್ಟೊಂದು ಭಯಂಕರವಾಗಿರುತ್ತದೆ.

ಇದು ತನಗೆ ಬೇಗಾದ ವಸ್ತುಗಳ ಕಡೆಗೆ ಬಹು ಬೇಗ ತಲುಪುವದು.

ನಿಮಿಷ-ನಿಮಿಷಕ್ಕೆ ತನ್ನ ಗತಿಯನ್ನು ಬದಲಾಯಿಸಿತು. ಒಂದು ಸಲ ಅದು ಸುಂದರ ತರುಣಿಯರತ್ತ, ಅವರ ತುಂಬಿದ ಅಂಗಾಂಗಗಳತ್ತ ಹೋಗುವದು. ಆಗ ಅದು ಆ ಮನವು ದೂರಿನಿಂದಲೇ ಅವಳ ಅಂಗಾಂಗಗಳ ಸವಿಯನ್ನು ಸವಿಯುವದು. ಅವಳ ರೂಪವನ್ನು ನಿರೀಕ್ಷಿಸುವದು. ಹಾಗು ಅವಳನ್ನು ಕೈವಶ ಮಾಡಿಕೊಳ್ಳಬೇಕೆಂದು ಯೋಚಿಸುವದು. ಮತ್ತು ಯಾವ ರೀತಿಯಿಂದ ವಶ ಪಡಿಸಿಕೊಳ್ಳಬೇಕೆಂದು ಚಿಂತಿಸತೊಡಗುವದು.

ತಕ್ಷಣವೇ ಅದು ಐಶ್ವರ್ಯದತ್ತ ಹೊರಳುವದು. ಐಶ್ವರ್ಯದ ಬಲದಿಂದ, ತನ್ಮೂಲಕ ಜನ ಬೆಂಬಲದಿಂದ ಅರ್ಥಾತ್ ಯಾವುದೇ ರೀತಿಯಿಂದ ಅವಳ ಅಂಗ ಸುಖವನ್ನು ಪಡೆಯಲು ಪ್ರಯತ್ನಿಸಿ ಆ ದಿಶೆಯಲ್ಲಿ ಯಶವನ್ನು ಸಂಪಾದಿಸುವದು. ಅಂದರೆ ಮೋಕ್ಷ ಮಾರ್ಗಕ್ಕೆ ಅಡ್ಡ ಬರುವಂತಹ ಎಂತಹ ಕಾರ್ಯವನ್ನಾದರೂ ಮನಸ್ಸು ಅತ್ಯಂತ ಉತ್ಸುಕತೆಯಿಂದ ಮಾಡುವದು. ಆದರೆ ಶಾಶ್ವತ ಸುಖವನ್ನೀಯಬಲ್ಲ, ಮೋಕ್ಷ ಪದವಿಯನ್ನು ದೊರಕಿಸಿಕೊಡಬಲ್ಲ ಬ್ರಹ್ಮಜ್ಞಾನದತ್ತ ಮಾತ್ರ ಅದು ತಿರುಗುವುದಿಲ್ಲ. ಅದಕ್ಕಾಗಿ ಯಾವಾಗಲೂ ಮನವನ್ನು ಅಂಕಿತದೊಳಗಿರಿಸಿಕೊಳ್ಳಬೇಕು.

ರಾತ್ರಿ ಸ್ಸೈವ ಪುನ: ಸಏವ ದಿವಸೊ ಮತ್ವಾಬುಧ ಜಿಂತವೋ
ಧಾವಂತ್ಯುದ್ಯ ಮಿನಸ್ತ್ರಸ್ಥೈವ ನಭೃತತಾತ್ಕ್ರಿಯಾ:
ವ್ಯಾಪಾರೈ: ಪುನರುಕ್ತ ಭುಕ್ತ ಏಷಯೈ ರೇವಂಬಿಧೇನ ಮುನಾ
ಸಂಸಾರೇಣ ಕದಾರ್ಥಿತಾ ಕಥಮುಹೋ ಮೋಹಾನ್ನ ಲಜ್ಜಾಮಹೇ
||೭೨||

ಹಗಲು-ರಾತ್ರಿಗಳು ಒಂದೇ ಎಂದು, ಅವೇ ಎಂದು ಭಾವಿಸಿಕೊಂಡು ಅಂದರೆ ಈ ಹಗಲು ಕೂಡ ಅದೇ ಆಗಿದೆ. ಈ ರಾತ್ರಿಯೂ ಅದುವೇ ಆಗಿದೆ ಎಂದು ಭಾವಿಸಿಕೊಂಡು ಮೂರ್ಖರಾದಂಥವರು ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗವರು ಕೆಲಸಗಳತ್ತ ಧಾವಿಸುವರು. ಆದರೆ, ಓಹ್! ಮಾಡಿದ ಕಾರ್ಯಗಳನ್ನೇ ಮಾಡುತ್ತ ಭೋಗಿಸಿದಂತಹ ವಿಷಯುಗಳನ್ನೇ-ಮೇಲಿಂದ

ಮೇಲೆ ಭೋಗಿಸುತ್ತ ಸಂಸಾರದಿಂದ-ಜಗತ್ತಿನಿಂದ-ನಿಂದಿತರಾಗಿ ಮೋಹ ವಶದಿಂದ ಲಜ್ಜೆಯನ್ನು ಪ್ರಾಪ್ತಮಾಡಿಕೊಳ್ಳದಿರುವದು, ಅತ್ಯಂತ ಖೇದದ ಸಂಗತಿಯಾಗಿದೆ. ಇದರ ತಾತ್ಪರ್ಯವಿಷ್ಟೆ: ಈ ಸಂಸಾರವನ್ನು ಅನಿತ್ಯ ಹಾಗು ವಿಷಯೋಪಭೋಗಗಳ ಜಾಲವು ನಿ:ಸಂಸಾರವೆಂದು ಭಾವಿಸಿ ವಿರಕ್ತಿಯನ್ನು ಪಡೆಯುವದು ಒಳ್ಳೆಯದು.

ಈ ಮಾನವನು ವಿಷಯೋಪಭೋಗಗಳನ್ನು ಪಡೆಯುತ್ತಿರುವಾಗ ಅಂದರೆ ಸುಂದರಿಯರಾದ ತರುಣಿಯರ ಸಂಪರ್ಕದೊಳಗಿರುವಾಗ ಅವನಿಗೆ ಯಾವುದರ ಪರಿವೆಯೂ ಇರುವದಿಲ್ಲ. ಹಗಲು—ರಾತ್ರಿ ಎಂಬ ಭೇದವೂ ಇರುವದಿಲ್ಲ. ಆಗ ಅಂಥವರ ಎದುರಿಗೆ ಇರುವದೆಂದರೆ ತರುಣಿಯರು, ಸುಂದರ ತರುಣಿಯರು ಅತ್ಯಂತ ಉನ್ಮಾದಕ ಹೆಣ್ಣುಗಳು; ಸಾಕು. ಇವಿಷ್ಟನ್ನು ಬಿಟ್ಟು ಅವರಿಗೆ ಬೇರಾವುದೂ ಗೋಚರವಾಗುವದಿಲ್ಲ. ಅಲ್ಲದೆ ಬೇರೆ ಯಾವುದನ್ನು ಬಯಸುವದೂ ಇಲ್ಲ. ಚಲುವೆಯರಾದ, ಆಕರ್ಷಕ ಮೈಕಟ್ಟಿನವರಾದ ತರುಣಿಯರು ಪಕ್ಕದಲ್ಲಿದ್ದು ಬಿಟ್ಟರೆ ಜಗತ್ತು ಏನಾದುದರ ಪರಿವೆಯು ಅವರಿಗಿರುವದಿಲ್ಲ. ಯಾವಾಗಲೂ ಭೋಗವಿಲಾಸದಲ್ಲಿಯೇ ಮಗ್ನರಾಗಿ ಬಿಟ್ಟಿರುತ್ತಾರೆ. ತಲ್ಲೀನರಾಗಿ ಬಿಟ್ಟಿರುತ್ತಾರೆ.

ಆದರೆ ಆಗ ಅಂದರೆ ತರುಣಿಯರೊಂದಿಗೆ ಭೋಗವಿಲಾಸದಲ್ಲಿ ಮತ್ತರಾಗಿರುವಾಗ,ತಾವು ಎಂತಹ ಸುಖಕ್ಕೆ ಎರವಾಗುತ್ತಿದ್ದೇವೆ ಎಂಬುದರ ಅರಿವೆ ಅವರಿಗಿರುವದಿಲ್ಲ. ಅವರ ಮನವೆಲ್ಲ ತರುಣಿಯರ ಅಂಗ ಅಂಗಗಳ ಸೌಷ್ಟವವನ್ನು ಹೀರಿಕೊಳ್ಳುವದರಲ್ಲಿ ತಲ್ಲೀನವಾಗಿರುತ್ತದೆ. ಮನದ ಕೈಗೆ ಸಿಲುಕಿದವನ ಗತಿಯು ಹೀಗೆಯೇ ಆಗುವದು. ಅದಕ್ಕಾಗಿ ವಿವೇಕಶಾಲಿಯಾಗ ಬೇಕೆನ್ನುವವನು, ಮೋಕ್ಷ ಪದವಿಯನ್ನು ಪಡೆಯ ಬೇಕೆನ್ನುವವನು, ತಾನು ಮನದ ಹೇಳಿಕೆಯಂತೆ ನಡೆಯದೆ, ಮನವನ್ನೇ ತನ್ನಾಧೀನದೊಳಗೆ ಇರಿಸಿಕೊಂಡರೆ ಮೋಕ್ಷ ಪದವಿಯು ಗಗನಕುಸುಮವಾಗಲಾರದು.

ಮಹೀರಮ್ಯಾ ಶಯ್ಯಾ ವಿಪುಲ ಮುಪಧಾನಂ ಭುಜಲತಾ
ವಿತಾನಂ ಚಾಕಾಶಂ ವ್ಯಜನ ಮನುಕುಲೋ ಯಮನಿಲ:।

ಸ್ಫುರದ್ದೀಪಶ್ಚಂದ್ರೋ ವಿರತಿ ವನಿತಾ ಸಂಗ ಮುದಿತಃ
ಸುಖಂ ಶಾಂತಃ ಶೇತೇ ಮುನಿರತನು ಭೂತಿ
ರ್ನೃಪ ಇವ ||೭೩||

ವಿಶಾಲವಾದ ಭೂತಲವೇ—ಪೃಥ್ವಿಯೇ—ಹಾಸುಗೆಯಾಗಿರುವಂಥ ಬಾಹುಗಳೇ ತಲೆ ದಿಂಬಾಗಿರುವಂಥ. ವಿಸ್ತೀರ್ಣವಾದ ಆಕಾಶವೇ ಹೊದಿಕೆಯಾಗಿರುವಂಥ, ಅನುಕೂಲವಾದ ಪವನವನ್ನೇ ಬೀಸಣಿಕೆಯನ್ನಾಗಿ ಮಾಡಿಕೊಂಡಂಥ, ಚಂದ್ರಬಿಂಬವನ್ನೇ ಪ್ರಕಾಶಮಾನವಾದ ಜ್ಯೋತಿಯನ್ನಾಗಿ ಮಾಡಿಕೊಂಡಂಥ ಹಾಗು ತನ್ನಲ್ಲಿಯ ವಿರತಿಯನ್ನೇ ತರುಣಿಯೆಂದು ಭಾವಿಸಿಕೊಂಡಂಥ ಆ ಮಹಾನುಭಾವನೂ ಪ್ರಶಾಂತ ಹೃದಯನೂ ಆದ ಮುನಿಯು, ಅತುಲೈಶ್ವರ್ಯ ಸಂಪನ್ನ ಚಕ್ರವರ್ತಿಯಂತೆ ಸುಖವಾಗಿ ನಿದ್ರಿಸುವನು.

ಶಾಂತ ಹೃದಯವನ್ನು ಹಾಗು ಮನವನ್ನು ತಮ್ಮ ಆಧೀನದೊಳಗಿಸಿಕೊಂಡಿರುವಂಥ ಮಹಾ ಮುನಿಗಳಿಗೆ ಯಾವುದೇ ಬಗೆಯ ತೊಂದರೆ ಇರುವದಿಲ್ಲ. ಅವರು ಯಾವಾಗಲೂ ಸಕಲೈಶ್ವರ್ಯ ಸಂಪನ್ನನಾದ ಚಕ್ರವರ್ತಿಯಂತೆ ನಿಶ್ಚಿಂತೆಯಿಂದಿರುವದು. ಇಷ್ಟೇ ಅಲ್ಲ. ಚಕ್ರವರ್ತಿಗಿಂತಲೂ ಹೆಚ್ಚಿನ ಸುಖವನ್ನು ಆ ಮುನಿಗಳು ಅನುಭವಿಸುವರೆಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಚಕ್ರವರ್ತಿಗಳಿಗೆ ನೂರೆಂಟು ಬಗೆಯ ಚಿಂತೆಗಳಿರುತ್ತವೆ. ಅಂದರೆ ರಾಜ್ಯದ ಲೋಭ ಹೆಣ್ಣಿನ ಮೋಹ, ಶತೃಗಳ ಭಯಗಳೇ ಮುಂತಾದವುಗಳು ಯಾವಾಗಲೂ ಸುತ್ತುವರಿಯುತ್ತಿರುತ್ತವೆ. ಆದರೆ ಮುನಿವರ್ಯರಿಗೆ ಮಾತ್ರ ಈಶ ಚಿಂತನೆಯೊಂದನ್ನುಳಿದು ಬೇರಾವ ಚಿಂತೆಯೂ ಇರುವದಿಲ್ಲ.

ಏಕೆಂದರೆ ಅವರಿಗೆ ಆಹಾರ—ವಿಹಾರ, ಶಯ್ಯೆ ಹಾಗು ರತಿಗಳ ಚಿಂತೆಯೇ ಇರುವದಿಲ್ಲ. ಆಹಾರಕ್ಕಾಗಿ ಅರಣ್ಯದೊಳಗೆ ವೃಕ್ಷಗಳು ನಾನಾ ಬಗೆಯ ಫಲಗಳನ್ನು ಕೊಡುತ್ತವೆ. ಮಲಗಿಕೊಳ್ಳಲು ಇಡಿಯ ಪೃಥ್ವಿಯೇ ಇದೆ. ಬೇಕಾದಲ್ಲಿ ಬಿದ್ದುಕೊಳ್ಳಬಹುದು. ಹೊದೆದುಕೊಳ್ಳಲು ನೀಲವರ್ಣದ ಆಕಾಶವು ಧಾರಾಳವಾಗಿರುವದು. ತಲೆಯ ಬುಡದಲ್ಲಿ ದಿಂಬನ್ನಿರಿಸಿಕೊಂಡು

ಸುಖ ನಿದ್ರೆಯನ್ನು ಪಡೆಯಲು ಅವರದೇ ಬಾಹುಗಳಿರುತ್ತವೆ. ಅವುಗಳನ್ನೇ ದಿಂಬಿನಂತೆ ಉಪಯೋಗಿಸಿಕೊಳ್ಳುವರು. ರತಿ—ವಿಷಯ ಸುಖವಂತೂ ಅವರಿಗೆ ಅನವಶ್ಯಕ, ಏಕೆಂದರೆ, ಆ ಮುನಿಗಳು ವಿರಕ್ತಿಯನ್ನೇ ಸುಂದರ ತರುಣಿಯೆಂದು ಭಾವಿಸಿಕೊಂಡಿರುತ್ತಾರೆ. ರಾತ್ರಿಯ ಸಮಯದಲ್ಲಿ ಚಂದ್ರ ಬಿಂಬವೇ ಅವರಿಗೆ ಬೆಳಕನ್ನೀಯುವ ಜ್ಯೋತಿಯಾಗಿರುವದು. ಅಂದಾಗ ಇದಕ್ಕಿಂತ ಹೆಚ್ಚಿನ ಸುಖವು ಇನ್ನಾರಿಗೆ ದೊರೆಯುವದು?

ತ್ರೈಲೋಕ್ಯಾಧಿಪತಿತ್ವಮೇವ ವಿರಸಂ ಯಸ್ಮಿನ್ಮಹಾ ಶಾಸನೇ
ತಲ್ಲಬ್ಧ್ವಾಶನ ವಸ್ತ್ರ ಮಾನ ಘಟನೇ ಭೋಗೇ ರತಿಂ ಮಾ ಕೃಥಾಃ|
ಭೋಗಃ ಕೋಽಪಿ ಸ ಏಕ ಏವ ಪರಮೋ ನಿತ್ಯೋದಿತೋ ಜೃಂಭತೇ
ಯತ್ ಸ್ವಾದಾದ್ವಿರಸಾ ಭವಂತಿ ವಿಷಯಾ ಸ್ತ್ರೈಲೋಕ್ಯ
ರಾಜ್ಯಾದಯಃ ||೭೪||

ಓ, ಮನವೆ! ತ್ರಿಭುವನದ ರಾಜ್ಯದಾಡಳಿತೆ ಹಾಗು ಐಶ್ವರ್ಯೋಪ ಭೋಗಗಳನ್ನು ನಿಃಸಾರವೆಂದು ಬಗೆಯುವಂಥ; ತಿಳಿಯುವಂಥ ಬ್ರಹ್ಮಜ್ಞಾನ ವನ್ನು ಅರಿತುಕೊಂಡ ಮೇಲೆ ಬ್ರಹ್ಮಜ್ಞಾನವನ್ನು ಹಸ್ತಗತ ಮಾಡಿಕೊಂಡ ಮೇಲೆ, ಸುಗ್ರಾಸಭೋಜನ, ಬೆಲೆಯುಳ್ಳ ಬಟ್ಟೆಗಳು, ಮಾನ-ಸನ್ಮಾನ ಪಡೆಯಬೇಕೆಂಬ ಲವಲವಿಕೆ ಹಾಗು ತರುಣಿಯರೊಂದಿಗಿನ ಬಗೆಯ ಭೋಗ ಸುಖ ಮುಂತಾವುಗಳನ್ನು ಮರೆತು ಬಿಡು. ಬ್ರಹ್ಮಜ್ಞಾನವೆಂಬ ಭೋಗವು ಅತ್ಯಂತ ಶ್ರೇಷ್ಠವಾದುದು. ಅಸದೃಶವಾದುದು, ಪ್ರಕಾಶಮಾನವಾದುದು. ಆಗಿದೆ. ಅಂತೆಯೇ ಬ್ರಹ್ಮಜ್ಞಾನದ ಭೋಗವನ್ನು ಒಂದು ಸಲ ಪರೀಕ್ಷಿಸಿದ ವರಿಗೆ ವಿಷಯೋಪಭೋಗಗಳು ಹಾಗು ತ್ರೈಲೋಕ್ಯದ ಅರಸೊತ್ತಿಗೆಗಳು ಕೂಡ ಅದರೆದುರು ಸಪ್ಪೆಯಾಗಿ ಕಂಡುಬರುವವು. [ಇದರ ಮೇಲಿಂದ ಅಂದರೆ ಮೂರು ಲೋಕದ ಅಧಿಪತ್ಯವೂ ಸಪ್ಪೆಯಾಗಿ ಕಂಡುಬರಬೇಕಾದರೆ ಬ್ರಹ್ಮಜ್ಞಾನದ ಮಟ್ಟವು ಎಂಥದು ಎಂಬುದರ ಕಲ್ಪನೆಯು ಬರುವದು.]

ಕಿಂ ವೇದೈಃ ಸ್ಮೃತಿಭಿಃ ಪುರಾಣಪಠನೈಃ ಶಾಸ್ತ್ರೈ ಮಹಾವಿಸ್ತರೈಃ
ಸ್ವರ್ಗಗ್ರಾಮ ಕುಟೀನಿವಾಸಫಲದೈಃ ಕರ್ಮಕ್ರಿಯಾ ವಿಭ್ರಮೈಃ |

ಮುಕ್ತ್ಯೈಕಂ ಭವಬಂಧ ದುಃಖ ರಚನಾ ವಿಧ್ವಂಸ ಕೌಲಾನಲಂ
ಸ್ವಾತ್ಮಾನಂದಪದ ಪ್ರವೇಶಕಲನಂ ಶೇಷಾವಣಿಗ್‌ವೃತ್ತಯಃ ||೭೫||

ವೇದ, ಸ್ಮೃತಿ, ಪುರಾಣ ಹಾಗು ದೊಡ್ಡ ದೊಡ್ಡ ಶಾಸ್ತ್ರಗಳನ್ನು ಎಷ್ಟು ಓದಿದರೇನು ? ಸ್ವರ್ಗ ಸಮಾನವಾದ ಗ್ರಾಮದ ಕುಟೀರದೊಳಗಿನ ನಿವಾಸದ ಫಲವನ್ನು ಕೊಡುವಂಥ ಕರ್ಮ ಹಾಗು ಕ್ರಿಯೆಗಳ ವಿಲಾಸ ದಿಂದೇನು? ಸಂಸಾರದ ಬಂಧನ ರೂಪಿ ದುಃಖ ರಚನೆಯ ನಿಮಿತ್ತದಿಂದ ಅರ್ಥಾತ್ ದುಃಖದಿಂದ ಉತ್ಪನ್ನವಾದ ಪ್ರಳಯಾಗ್ನಿಯ ಸಮಾನವಾದ ಬ್ರಹ್ಮಾನಂದ ಪದದ ಪ್ರವೇಶವನ್ನು ಬಿಟ್ಟು; ಹೊರ್ತುಪಡಿಸಿ ಅರ್ಥಾತ್ ಬ್ರಹ್ಮಾನಂದ ಪ್ರದೇಶವನ್ನು ಬಿಟ್ಟು ಉಳಿದೆಲ್ಲವೂ ಲೆಕ್ಕಾಚಾರವುಳ್ಳದ್ದಾಗಿದೆ. ಅಂದರೆ ಅದೊಂದು ಕೊಡಕೊಳ್ಳುವ ವ್ಯವಹಾರ—ವಣಿಕ್‌ವೃತ್ತಿ ಬಣಜಿಗ ವೃತ್ತಿ-ವಾಗಿರುವದು. ಅರ್ಥಾತ್ ಇವೆಲ್ಲ ಕರ್ಮಗಳನ್ನು, ಕ್ರಿಯೆಗಳನ್ನು ಮನುಷ್ಯನು—ಯಾವುದೊಂದು—ಫಲದ ಪ್ರತಿಫಲದ, ಅಪೇಕ್ಷೆಯಿಂದಲೇ ಮಾಡುವನು, ಆದರೆ ಬ್ರಹ್ಮಜ್ಞಾನ ಪ್ರಾಪ್ತಿಯು—ಅದನ್ನು ಹಸ್ತಗತ ಮಾಡಿಕೊಳುವ—ಉದ್ಯೋಗದೊಳಗೆ—ವಶಪಡಿಸಿಕೊಳ್ಳುವ ಅರ್ಥಾತ್ ಸಾಧನೆಯ ಸಮಯದಲ್ಲಿ-ಮಾತ್ರ ದೊರೆಯುವ ಫಲವು ಬೇರೆ ತರಹದ್ದೇ ಆಗಿರುವದು.

ಆಯು ಕಲ್ಲೋಲ ಲೋಲಂ ಕತಿಪಯ ದಿವಸ ಸ್ಥಾಯಿನಿ
ಯೌವನ ಶ್ರೀ-
ರಥಾಃ ಸಂಕಲ್ಪಲ್ಪಾ ಧನ ಸಮಯತಡಿ ದ್ವಿಭ್ರಾಮಂ ಭೋಗಪೂರಾಃ|
ಕಂಠಶ್ಲೇಷೋಪ ಗೂಢಂ ತದಪಿ ಚನ ಚಿರಂ ಯತ್ಪ್ರಿಯಾಭಿಃ
ಪ್ರಣೀತಂ|
ಬ್ರಹ್ಮಣ್ಯಾಸಕ್ತ ಚಿತ್ತಾ ಭವತ ಭವ ಭಯಾಂ ಭೋಧಿಪಾದಂ
ತರೀತುಂ ||೭೬||

ಮಾನವನ ಆಯುಷ್ಯವು ತೆರೆಗಳಂತೆ-ತರಂಗಗಳಂತೆ-ಅತಿ ಚಂಚಲ ವಾದುದಾಗಿರುವದು. ನವಯೌವ್ವನದ ಶೋಭೆಯು—ಆಕರ್ಷಣೆಯು—

ಕೂಡ ತೀರ ಅಲ್ಪಾವಧಿಯುದಾಗಿರುವದು. ಅಂದರೆ ಕೆಲವೇ ಸಮಯದ ವರೆಗೆ ಇರುವಂತಹದಾಗಿರುವದು. ಹಣವು—ಐಶ್ವರ್ಯವು—ಮನಸ್ಸಿನ ಸಂಕಲ್ಪದಂತೆ, ಕ್ಷಣಿಕವಾಗಿರುವದು. ಭೋಗದ ಪ್ರವಾಹವು-ವಿಷಯೋಪ ಭೋಗಗಳ ಕ್ಷಿಲಾಲಸೆಯು-ಮಳೆಗಾಲದ—ವರ್ಷಕಾಲದ— ಕೋಲ್ಮಿಂಚಿ ನಂತೆ ಅತಿ ಚಂಚಲವಾದುದಾಗಿರುವದು. ಅಲ್ಲದೆ ತಮ್ಮ ತಮ್ಮ ಪ್ರಿಯತಮೆ ಯರೊಂದಿಗೆ ಆನಂದದಿಂದ ಆಲಂಗಿಸುವಂಥ, ಅವರೊಂದಿಗೆ ಸರಸ—ಸಲ್ಲಾ ಪಗಳಿಂದ ಪಡೆಯುವಂಥ ಸುಖವು ಕೂಡ ಬಹುಸಮಯದ ವರೆಗೆ ಉಳಿಯು ಲಾರದು. ಅರ್ಥಾತ್ ಅಂಥ ಸುಖವು ಕೂಡ ಕ್ಷಣಿಕವಾದಂಥದಾಗಿದೆ. ಅದಕ್ಕಾಗಿ ಸಂಸಾರವೆಂಬ ಭಯರೂಪದ ಸಮುದ್ರವನ್ನು ದಾಟುವದಕ್ಕಾಗಿ —ಸಂಸಾರ ಸಾಗರದಿಂದ ಪಾರಾಗುವದಕ್ಕಾಗಿ—ಚಿತ್ತವನ್ನು ಬಹ್ಮದತ್ತ ಲೀನಗೊಳಿಸಿರಿ.

ಬ್ರಹ್ಮಾಂಡಂ ಮಂಡಲೀ ಮಾತ್ರಂ ನ ಲೋಭಾಯ ಮನಸ್ವಿನಃ
ಶಫರೀ ಸ್ಫುರಿತೇ ನಾಬ್ಧೇಃ ಕ್ಷುಬ್ಧತಾ ನ ಜಾಯತೇ ||೭೫||

ಈ ಬ್ರಹ್ಮಾಂಡ ಮಂಡಲವು ಅರ್ಥಾತ್ ಈ ಜಗತ್ತು ಮನಸ್ವಿ ಗಳನ್ನು-ಆತ್ಮ ವಿಚಾರಿಗಳಾದ ಯೋಗಿಗಳನ್ನು ಸಂತೃಪ್ತಗೊಳಿಸುವದಕ್ಕಾಗಿ ಇಲ್ಲ. ಏಕೆಂದರೆ ಮೀನವು ಹಾರಾಡುವದರಿಂದ, ಜಿಗಿದಾಡುವದರಿಂದ, ಸಮುದ್ರದೊಳಗೆ ಕ್ಷೋಭೆಯು ಉಂಟಾಗುವದಿಲ್ಲ. ಅರ್ಥಾತ್ ಮೀನುಗಳ ಹಾರಾಟದಿಂದ ಸಮುದ್ರದ ಅಸ್ತಿತ್ವಕ್ಕೆ ಯಾವುದೇ ಬಗೆಯ ಧಕ್ಕೆಯು ತಟ್ಟಲಾರದು. ತಾತ್ಪರ್ಯವಿಷ್ಟೆ : ಗಂಭೀರ ಮನಸ್ಸಿನ, ಮನವನ್ನು ತಮ್ಮ ಅಧೀನದೊಳಗಿರುವಂಥವರ ಎದುರು ತ್ರಿಭುವನದೊಳಗಿನ ಸುಖಗಳು ತೀರ ತುಚ್ಛವಾದವುಗಳಾಗಿವೆ.

ಮನವನ್ನು ತಮ್ಮ ಅಧೀನದೊಳಗಿರಿಸಿಕೊಂಡಿರುವಂಥ ಮಹಾ ಪುರುಷರಿಗೆ ಯೋಗಿ ವರೇಣ್ಯರಿಗೆ ಜಗತ್ತಿನ ಪರಿವೆಯಾಗಲಿ ಇಲ್ಲವೆ ಜಗತ್ತಿನ ಐಶ್ವರ್ಯೋಪಭೋಗಗಳ ಪರಿವೆಯೋ ಇರುವದಿಲ್ಲ. ಇಷ್ಟೇ ಅಲ್ಲ. ಅವರು ಐಹಿಕ ಸುಖಗಳನ್ನು ಕಃ ಪದಾರ್ಥವೆಂದು ತುಚ್ಛೀಕರಿಸಿ ಬಿಡುವರು

ಅವರೆದುರು ಜಗತ್ತಿನವರು ಎಷ್ಟೇ ಹಾರಾಡಿದರೂ ಅವರು " ಅಸಂಖ್ಯಾತ ಮೀನುಗಳು ಎಷ್ಟೊಂದು ಜಿಗಿದಾಡಿದರೂ ಸಮುದ್ರವು ಪ್ರಶಾಂತವಾಗಿಂ ಗಂಭೀರವಾಗಿ ಇರುವಂತೆ" ಯೋಗಿಗಳು ಕೂಡ ತಮ್ಮಷ್ಟಕ್ಕೆ ತಾವು ಇದ್ದು ಬಿಡುವರು.

ಯದಾಸೀದ ಜ್ಞಾನಂ ಸ್ಮರತಿ ರಸಂಸ್ಕಾರಜನಿತಂ
ತದಾ ದೃಷ್ಟಂ ನಾರೀಮಯಮಿದಮಶೇಷ ಜಗದಪಿ।
ಇದಾನಿ ಮಸ್ಮಾಕಂ ಪಟುತರ ವಿವೇಕಾಂಜಿನ ಜುಷಾಂ
ಸಮಿಭೂತಾ ದೃಷ್ಟಿಸ್ ತ್ರಿಭುವನ ಮಪಿ ಬ್ರಹ್ಮತನುತೇ ॥೭೮॥

ಕಾಮದೇವನ ಅಂಧಕಾರ ಜನಿತವಾದ-ಅಂಧಕಾರದಿಂದ ಕೂಡಿರುವಂಥ-ಅಜ್ಞಾನದ ಕಾರಣದಿಂದಾಗಿ ನಮಗೆ ಇಡಿಯ ಜಗತ್ತೇ-ತ್ರಿಭುವನವೇ ಸ್ತ್ರೀಮಯವಾಗಿ ಕಾಣಿಸುತ್ತಿತ್ತು. ಆದರೆ ಈಗ ವಿವೇಕ ರೂಪದ ಅಂಜನವನ್ನು ಹಚ್ಚಿಕೊಂಡ ನಂತರ ನಮ್ಮ ದೃಷ್ಟಿಗಳು ಸ್ವಚ್ಛವಾಗಿ ಬಿಟ್ಟಿರುವವು. ಅದರಿಂದಾಗಿ ಜಗತ್ತಿನ ಏನೆಲ್ಲವೂ ಇದ್ದುದು ಇದ್ದಂತೆ ಕಂಡು ಬರತೊಡಗಿದೆ.

ಮಾನವನು ಅವಿವೇಕಿಯಾಗಿರುವಾಗ ಅರ್ಥಾತ್ ಅವನು ಕಾಮದ ಕೈಯೊಳಗೆ ಸಿಲುಕಿದಾಗ ಅವನಿಗೆ ಹೆಣ್ಣಿನ್ನುಳಿದು ಬೇರೆ ಯಾವುದರ ಪರಿವೆಯೂ ಇರುವದಿಲ್ಲ. ಅಂಥವನಿಗೆ ಅಂದರೆ ಕಾಮಜ್ವರ ಪೀಡಿತನಿಗ ಇಡಿಯ ಜಗತ್ತೇ ಸ್ತ್ರೀಮಯವಾಗಿ ಕಾಣಿಸುವದು. ಬೇರೆ ಏನೂ ಅವರ ದೃಷ್ಟಿಗೆ ಬೀಳುವದಿಲ್ಲ. ಆದರೆ ಏರಿದಂಥ ಜ್ವರವು ಇಳಿದು ವಿವೇಕ—ಯೋಗ್ಯಾಯೋಗ್ಯ—ವೆಂಬ ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡ ನಂತರ ಮಾತ್ರ ಅವನಿಗೆ ಈ ಜಗತ್ತಿನೊಳಗೆ ಒಳ್ಳೆಯದು ಯಾವುದು? ಕೆಟ್ಟದ್ದು ಯಾವದು? ಎಂಬುದರ ಕಲ್ಪನೆಯು ಬರುವದು.

ರಮ್ಯಾಶ್ಚಂದ್ರ ಮರೀಚ ಯಸ್ತ್ರಣವತಿ ರಮ್ಯಾ ವನಾಂತ ಸ್ಥಲೀ
ರಮ್ಯಂ ಸಾಧು ಸಮಾಗಮೋದ್ ಭವಸುಖಂ ಕಾವ್ಯೇಷು ರಮ್ಯಾಃ ಕಥಾಃ।

ಕೋಪೋಪಾಹಿತ ವಾಷ್ಪ ಬಿಂದು ತರಲಂ ರಮ್ಯಂ ಪ್ರಿಯಾಯಾ
ಮುಖಂ
ಸರ್ವಂ ರಮ್ಯಮನಿತ್ಯ ತಾಮುಪಗತೇ ಚಿತ್ತೇನ ಕಿಂಚಿತ್ಪುನ: ॥೭೯॥

ಚಂದ್ರನ ಶೀತಲ ಕಿರಣಗಳು ರಮ್ಯವಾಗಿವೆ ;ಆಹ್ಲಾದಕಾರಕಗಳಾಗಿವೆ. ಹಸಿರು ಹುಲ್ಲಿನಿಂದ ಕೂಡಿದಂಥ ವನ ಪ್ರದೇಶವು ರಮ್ಯವಾಗಿದೆ, ರಮಣೀಯವಾಗಿದೆ; ಸಾಧುಗಳ—ಯೋಗಿವರೇಣ್ಯರ—ಸಮಾಗಮದಿಂದ ಉತ್ಪನ್ನವಾಗುವಂಥ—ಉತ್ಪನ್ನವಾದ—ಸುಖವೂ ರಮ್ಯವಾದುದಾಗಿದೆ; ಕಾವ್ಯಗಳ ಕಥನವೂ ರಮಣೀಯವಾಗಿದೆ; ಕೋಪದಿಂದಾಗಿ ಪ್ರಿಯತಮೆಯ ಕಣ್ಣುಗಳಿಂದ ಹೊರಬರುವ ಅಶ್ರುಗಳಿಂದ ಅವಳ ಮುಖವು ಸುಂದರವಾಗಿ, ಆಕರ್ಷಕವಾಗಿ ಕಾಣುತ್ತದೆ. ಅರ್ಥಾತ್ ಇವುಗಳೆಲ್ಲ—ಈ ವರೆಗೆ ಹೇಳಿದಂಥವುಗಳೆಲ್ಲ—ರಮ್ಯವಾಗಿವೆ, ರಮಣೀಯವಾಗಿವೆ. ಎಂಥವರ ಮನವನ್ನು ಆಕರ್ಷಿಸುವಂಥವುಗಳಾಗಿವೆ, ಚೇತೋಹಾರಿಯಾಗಿವೆ. ಆಕರ್ಷಣೀಯವಾಗಿವೆ, ಎಂಥವರ ಮನವನ್ನು, ಸೆರೆಹಿಡಿಯಬಲ್ಲಂಥವುಗಳಾಗಿವೆ. ಆದರೆ ಈ ಸಂಸಾರವು ಅನಿತ್ಯವಾದುದಾಗಿದೆ ಎಂಬ ಜ್ಞಾನವು ಮನದೊಳಗೆ ಉತ್ಪನ್ನವಾಗುತ್ತಲೆ ಅವೆಲ್ಲ—ಮೇಲೆ ಹೇಳಲಾಗಿರುವಂಥ—ಸುಖಗಳು ನಿಃಸಾರವಾಗಿ ಕಂಡುಬರುವವು.

ಭಿಕ್ಷಾಶೀ ಜನಮಧ್ಯ ಸಂಗ ರಹಿತ: ಸ್ವಾಯತ್ತ ಚೇಷ್ಟಿ: ಸದಾ
ದಾನಾದಾನ ವಿರಕ್ತ ಮಾರ್ಗ ನಿರತ: ಕ್ವಶ್ಚಿತ್ತಪಸ್ವಿ ಸ್ಥಿತ:।
ರಥ್ಯಾಕೀರ್ಣ ವಿಶೀಣ ವಿಶೀರ್ಣ ವಸನೈ ರಾಸ್ಯೂತ ಕಂಥಾಧರೋ
ನಿರ್ಮಾನೋ ನಿರಹಂಕೃತಿ: ಶಮಸುಖಾ ಭೋಗೈ ಕವದ್ಧ
ಸ್ಪೃ: ॥೮೦॥

ಭಿಕ್ಷೆಬೇಡಿ ಉದರ ನಿರ್ವಹಣೆ ಮಾಡುವಂಥವರು, ಅಂದರೆ ಹೊಟ್ಟೆ ಹೊರೆದುಕೊಳ್ಳಲು ಭಿಕ್ಷಾಟನವನ್ನೇ ಅವಲಂಬಿಸಿದಂಥವರು ಅರ್ಥಾತ್ ಜನತೆಯೊಂದಿಗೆ ಪ್ರೀತಿಯಿಂದಿರದೆ ಅವರಿಂದ ನಿರ್ಲಿಪ್ತರಾಗಿರುವಂಥ ಅಂದರೆ ಯಾರಿಗಾದರೂ ಏನನ್ನಾದರೂ, ಕೊಡುವಂಥ ಇಲ್ಲವೆ ಯಾರಿಂದಲಾದರೂ

ಏನನ್ನಾದರೂ ಪಡೆದುಕೊಳ್ಳುವಂಥ ವ್ಯವಹಾರಗಳಿಂದ ದೂರವಿರುವಂಥ ಯಾವಾಗಲೂ ವಿರಕ್ತ ಮಾರ್ಗದಿಂದಲೇ ಮುಂದುವರಿಯುತ್ತಿರುವಂಥ, ಅಂದರೆ ವಿರಕ್ತಿ ಮಾರ್ಗದಲ್ಲಿ ಮುನ್ನಡೆಯುತ್ತಿರುವಂಥ, ಹರಕಲು ಬಟ್ಟೆಗಳನ್ನೇ ಅವಲಂಬಿಸಿರುವಂಥ, ಮಾನ ಮತ್ತು ಅಹಂಕಾರಗಳಿಂದ ಬಹಳ ದೂರವಿರುವಂಥ ಹಾಗು ಯಾವಾಗಲೂ ಬ್ರಹ್ಮಾನಂದದ ಭೋಗದಲ್ಲಿಯೇ ಉತ್ಕಟೇಚ್ಛೆಯನ್ನು ತೋರುವಂಥ ತಪಸ್ವಿಗಳು ಬಹಳ ಕಡಿಮೆ ಇರುವರು.

ಮಾತರ್ಮೇದಿನಿ ತಾತ ಮಾರುತ ಸಖೇತೇಜಃ ಸುಬಂಧೋಜಲಂ:
ಭ್ರಾತರ್ವ್ಯೋಮ ನಿಬದ್ಧ ಏಕ ಭವತಾಮೇಷ ಪ್ರಣಾಮಾಂಜಲಿಃ!
ಯುಷ್ಮತ್ಸಂಗ ವಶೋಪಜಾತ ಸುಕೃತೋದ್ರೇಕ ಸ್ಫುರನ್ನಿರ್ಮಲ-
ಜ್ಞಾನಾಪಾಸ್ತ ಸಮಸ್ತ ಮೋಹಮಹಿಮಾ ಲೀಯೇ ಪರಬ್ರಹ್ಮಣಿ
||೮೧||

ಹೇ, ತಾ[illegible]ದ ಪೃಥ್ವಿಯೇ! ಓ, ತಾತನಾದ ವಾಯುವೆ! ಗೆಳೆಯನಾದ ತೇಜಸ್ಸೆ! ಓ, ಸುಬಂಧುವಾದ ಜಲವೆ! ಹಾಗು ಸೋದರವಾದ ಓ, ಆಕಾಶವೇ! ನಾನು ಕೈಗಳನ್ನು ಜೋಡಿಸಿ ನಿಮಗೆ ಪ್ರಣಾಮಾಂಜಲಿಗಳನ್ನು ಅರ್ಪಿಸುವೆನು.—ಏಕೆಂದರೆ-ನಿಮ್ಮೆಲ್ಲರ ಸಹವಾಸದಿಂದ—ಸಂಪರ್ಕದಿಂದ——ಉತ್ಪನ್ನವಾಗಿರುವಂಥ ಪುಣ್ಯದ ಅಧಿಕತೆಯಿಂದಾಗಿ ಪ್ರಕಾಶಮಾನವಾದ—ಬೆಳಗುತ್ತಿರುವ—ಜ್ಞಾನದ ಮುಖಾಂತರ ಸಮಸ್ತ ಮೋಹದ ಮಹಿಮೆಯು ದೂರವಾಗಿ ಬಿಟ್ಟಿತು. ಅರ್ಥಾತ್ ನಿಮ್ಮಂತಹ ಹಿರಿಯರ ಸಹವಾಸದ ಬಲದಿಂದ ಗಳಿಸಿದಂಥ ಜಾಜ್ವಲ್ಯಮಾನವಾದ, ದೇದಿಪ್ಯಮಾನವಾದ ಪುಣ್ಯದಿಂದ ನನ್ನಲ್ಲಿಯ ಮೋಹದ ಪರದೆಯು ಹರಿದು ಹೋಯಿತು. ಅಂತೆಯೇ—ಈಗ ನಾನು ಬ್ರಹ್ಮದಲ್ಲಿ ಲೀನವಾಗುತ್ತಿದ್ದೇನೆ. [ಅಂದರೆ ಈ ಜಗತ್ತಿನ ಆಕರ್ಷಣೆಗಳಿಗೆ ಮಾರುಹೋಗಿದ್ದ ನಾನು ಪೃಥ್ವಿ, ವಾಯು, ಜಲ, ತೇಜ ಹಾಗು ಆಕಾಶಗಳ ಸಂಪರ್ಕದಿಂದ—ಆವರಿಸಿದ ಮೋಹವನ್ನು ಕಿತ್ತೆಸೆದು ಬ್ರಹ್ಮದಲ್ಲಿ ತಾದಾತ್ಮ್ಯ ಹೊಂದುತ್ತಿದ್ದೇನೆಂದರ್ಥ]

ಯಾವತ್ ಸ್ವಸ್ಥಮಿದಂ ಕಲೇವರ ಗೃಹಂ ಯಾವಚ್ಚ ದೂರೇ ಜರಾ

ಯಾವಚ್ಚೇಂದ್ರಿಯ ಶಕ್ತಿಂ ಪ್ರತಿಹತಾ ಯಾವತ್ ಕ್ಷಯೋ ನಾಯುಷಃ।
ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್,
ಪ್ರೋದ್ದೀಪ್ತೇ ಭವನೇ ಚ ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ॥೮೨॥

ಕಳೇ ಬರದ ಮನೆಯು—ಶರೀರವು-ಎಲ್ಲಿಯ ವರೆಗೆ ಸ್ವಾಸ್ಥ್ಯದಿಂದಿರುವದೋ, ನಿರೋಗಿಯಾಗಿರುವದೋ, ಅಲ್ಲಿಯ ವರೆಗೆ ಮಾತ್ರ ವೃದ್ಧಾಪ್ಯವು ದೂರವಾಗಿರುವದು. ಇಂದ್ರಿಯಗಳಲ್ಲಿ ಶಕ್ತಿಯು ಎಲ್ಲಿಯ ವರೆಗೆ ತುಂಬಿಕೊಂಡಿರುವದೋ, ಹಾಗು ಎಲ್ಲಿಯ ವರೆಗೆ ಆಯುಷ್ಯವು ಕ್ಷೀಣವಾಗಿರುವದಿಲ್ಲವೋ ಅಲ್ಲಿಯ ವರೆಗೆ ಅಂದರೆ ಇಂದ್ರಿಯಗಳಲ್ಲಿ ಶಕ್ತಿ ಇರುವಾಗ, ಬುದ್ಧಿರಾದಂಥವರು ತಮಗೆ ಕಲ್ಯಾಣಕಾರಕವಾಗುವಂತಹ; ಒಳ್ಳೆಯದಾಗುವಂತಹ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡತಕ್ಕದ್ದು. ಏಕೆಂದರೆ ಮನೆಗೆ ಬೆಂಕಿ ಹತ್ತಿರುವಾಗ ಭಾವಿತೋಡಲು ಪ್ರಯತ್ನಿಸುವದು; ವ್ಯರ್ಥವಾದುದಾಗಿರುವದು. ಅರ್ಥಾತ್ ದೇಹದೊಳಗಿನ—ದೇಹದ—ಇಂದ್ರಿಯಗಳು ಶಿಥಿಲವಾದಾಗ ಅವುಗಳಿಂದ ಒಳ್ಳೆಯ ಕಾರ್ಯಗಳು ಆಗುವದು ಸಾಧ್ಯವಿರುವದಿಲ್ಲ. (ಅದಕ್ಕಾಗಿ ದೇಹದಲ್ಲಿ ಶಕ್ತಿ ಇರುವ ವರೆಗೆ, ದೇಹವು ನಿರೋಗಿಯಾಗಿದ್ದು ಸದೃಢವಾಗಿರುವಂಥ ಸಮಯದಲ್ಲಿಯೇ ಆದಷ್ಟು ಒಳ್ಳೆಯ ಕಾರ್ಯಗಳನ್ನು ಮಾಡತಕ್ಕದ್ದು.)

ನಾಭ್ಯಸ್ತಾ ಭುವಿ ವಾದಿ ವೃಂದದಮನೀ ವಿದ್ಯಾವಿನೀತೋಚಿತಾ
ಖಂಗಾಗ್ರೈಃ ಕರಿ ಕುಂಭ ಪೀಟದಲನೈರ್ನಾಕಂ ನ ನೀತಂ ಯಶಃ!
ಕಾಂತಾ ಕೋಮಲ ಪಲ್ಲವಾಧರ ರಸಃ ಪೀತೋ ನ ಚಂದ್ರೋದಯೇ
ತಾರುಣ್ಯಂ ಗತ ಮೇವ ನಿಷ್ಫಲ ಮಹೋ ಶೂನ್ಯಾಲಯೇ ದೀಪವತ್ ॥೮೩॥

ನಾವು ವಿನೀತರಾಗಿರುವಂಥ, ವಿನಮ್ರರಾಗಿರುವಂಥ ಜನರನ್ನು ಪ್ರಸನ್ನಗೊಳಿಸಿ—ಯೋಗ್ಯವಾದ ಹಾಗು ಮಾತು ಮಾತಿಗೆ-ವಾದಿಸುವಂಥ

ವರನ್ನು ಸೋಲಿಸುವಂಥ ವಿದ್ಯೆಯನ್ನು ಕಲಿಯಬಲ್ಲ. ಖಂಗದ ಅಗ್ರಭಾಗದಿಂದ ಆನೆಗಳ ಕುಂಭ ಹಾಗು ಪೃಷ್ಠಗಳನ್ನು ವಿದೀರ್ಣಗೊಳಿಸಿ ಸ್ವರ್ಗದವರೆಗೆ ನಮ್ಮ ಯಶಸ್ಸನ್ನು ತಲುಪಿಸಲಿಲ್ಲ. ಹಾಗು ಬೆಳದಿಂಗಳಿನ ರಾತ್ರಿಯಲ್ಲಿ ಪ್ರಿಯತಮೆಯ ಚಿಗುರೆಲೆಗಳಂತಿರುವ ತುಟಿಗಳಲ್ಲಿಯ ರಸವನ್ನು ಪಾನ ಮಾಡಲಿಲ್ಲ. ಆದರೂ ನಮ್ಮ ಯೌವನವು ಜನರಿಲ್ಲದ ಮನೆಯೊಳಗಿನ ಜ್ಯೋತಿಯಂತೆ ವ್ಯರ್ಥವಾಯಿತು. (ಈ ಜಗತ್ತಿನೊಳಗೆ ಹುಟ್ಟಿ ಬಂದ ನಂತರ ನಾನು ಯಾವುದೇ ದೊಡ್ಡ ಕಾರ್ಯವನ್ನು ಮಾಡಲಿಲ್ಲ. ಅಂದರೆ ಪಂಡಿತರನ್ನು ವಾದ-ವಿವಾದಗಳಲ್ಲಿ ಸೋಲಿಸುವಂಥ ವಿದ್ಯೆಯನ್ನು ವಿದ್ವಾಂಸರಿಂದ ಪಡೆಯಲಿಲ್ಲ. ಹಾಗು ಯಾವುದೊಂದು ಶೌರ್ಯದ ಕಾರ್ಯವನ್ನು ಮಾಡಲಿಲ್ಲ. ಇಷ್ಟೇ ಅಲ್ಲ. ಪ್ರಿಯತಮೆಯ ಜೊತೆಗೂ ಸಮಯ ಕಳೆಯಲಿಲ್ಲ. ಆದರೂ ನನ್ನ ಯೌವನವು ನಿರರ್ಥಕವಾಯಿತು. ಎಂಬುದು ಈ ಶ್ಲೋಕನ ತಾತ್ಪರ್ಯ)

ಜ್ಞಾನಂ ಸತ್ತಾಂ ಮದಾದಿ ನಾಶನಂ
  ಕೇಷಾಂಚಿದೇ ತನ್ಮದ ಮಾನ ಕಾರಣಮ್
ಸ್ಥಾನಂ ವಿವಿಕ್ತಂ ಯಮಿನಾಂ ಪಿಮುಕ್ತಯೇ
  ಕಾಮಾ ತುರಾಣಾಮಪಿ ಕಾಮ ಕಾರಣಮ್ ||೭೪||

ಜ್ಞಾನವು ಶ್ರೇಷ್ಠ ಪುರುಷರ ಮಾನ ಹಾಗು ಮದ—ಮೋಹಗಳನ್ನು ನಾಶ ಮಾಡುತ್ತವೆ—ಮತ್ತು ಅದೇ ಜ್ಞಾನವು—ದುಷ್ಟರಾದಂಥವರ ಮದ, ಮಾನಗಳನ್ನು ಹೆಚ್ಚಿಸುವದು:— ಅದು ಹೇಗೆಂದರೆ- ಏಕಾಂತ ಸ್ಥಾನವು ಯೋಗಿಗಳು ಮುಕ್ತಿಯನ್ನು ಪಡೆಯಲು ಕಾರಣವಾಗಿದ್ದಂತೆ ಅದೇ ಏಕಾಂತ ಸ್ಥಳವು ಕಾಮುಕರಿಗೆ ಕಾಮೋದ್ರೇಕವನ್ನುಂಟು ಮಾಡುವ ಸ್ಥಳವೂ ಆಗಿರುವದು.

ಜಗತ್ತು ಅತಿ ವಿಚಿತ್ರವಾಗಿರುವದು. ಅಂದರೆ ಜ್ಞಾನವು ಒಳ್ಳೆಯದೆಂದು ಎಲ್ಲರೂ ಹೇಳುವದುಂಟು. ಆದರೆ ಆ ಜ್ಞಾನವು ಓರ್ವ ದುಷ್ಟನ

ಬಳಿ ಇದ್ದರೆ ಅವನ ಗರ್ವವನ್ನು ಹೆಚ್ಚಿಸಿ ಬಿಡುವದು. ಆದರೆ ಓರ್ವ ಒಳ್ಳೆಯವನ ಬಳಿ ಇದ್ದರೆ ಅವನಿಗೆ ಅವಮಾನವಾಗುವಂತಹ ಸಮಯದಲ್ಲಿ ತಾಳ್ಮೆಯನ್ನು, ಕೊಡುವದು. ಅದೇ ರೀತಿಯಾಗಿ ಏಕಾಂತ ಒಳ್ಳೆಯದೆಂದು ಹೇಳುತ್ತಾರೆ. ಆ ಏಕಾಂತದಿಂದ ಯೋಗಿಗಳು ಮುಕ್ತಿಯನ್ನು ಪಡೆಯು ತ್ತಾರೆ. ಆದರೆ ಅದೇ ಏಕಾಂತವು ಓರ್ವ ಕಾಮುಕನಿಗೆ ಲಭಿಸಿದರೆ ಅವನ ಲ್ಲಿಯ ಕಾಮೋದ್ರೇಕವು ನಿಮಿಷ ನಿಮಿಷಕ್ಕೂ ಹೆಚ್ಚಾಗುವದು.

ಜೀರ್ಣಾ ಏವ ಮನೋರಥಾಃ ಸ್ವಹೃದಯೇ ಯಾತಂ ಜರಾ ಯೌವ್ವನಂ
ಹಂತಾಂಗೇಷು ಗುಣಾಶ್ಚ ವಧ್ಯ ಫಲತಾಂ ಯಾತಾ ಗುಣಜ್ಞೈರ್ವಿನಾ।
ಕಿಂ ಯುಕ್ತಂ ಸಹಸಾಭ್ಯುಪೈತಿ ಬಲವಾನ್ಕಾಲಃ ಕೃತಾಂತೋಽಕ್ಷಮೀ,
ಹಾ ಜ್ಞಾತಂ ಮದನಾಂತ ಕಾಂಘ್ರಿಯುಗಲಂ ಮುಕ್ತ್ವಾಸ್ತಿ ನಾನ್ಯಾ
ಗತಿಃ ॥೭೨॥

ಓಹ್! ಮನೋರಥಗಳು ತಮ್ಮ ಹೃದಯದಲ್ಲಿಯೇ ಜೀರ್ಣವಾಗಿ ಬಿಟ್ಟವು. ಅರ್ಥಾತ್ ಯೌವನವು ಇಲ್ಲವಾಗಿ ವೃದ್ಧಾಪ್ಯ ಕಾಣಿಸಿಕೊಳ್ಳ ತೊಡಗಿತು, ಬಂದೂ ಬಿಟ್ಟಿತು. ಗುಣಜ್ಞರಿಲ್ಲದೆ—ಗುಣಗ್ರಾಹಿಗಳಿಲ್ಲದೆ ಒಳ್ಳೆಯ—ಗುಣಗಳೂ ಅಂಗದೊಳಗೇ ಉಳಿದುಕೊಂಡು ನಿಷ್ಫಲವಾಗಿ ಬಿಟ್ಟವು. ಈಗ ಕ್ಷಮಾರಹಿತನೂ, ಬಲಶಾಲಿಯೂ ಹಾಗು ಸರ್ವರನ್ನು ನಾಶ ಗೊಳಿಸುವಂಥವನೂ ಆದಂಥ ಕಾಲನು-ಮೃತ್ಯುವು-ಸನಿಹಕ್ಕೆ ಬರುತ್ತಿದ್ದಾನೆ- ಅಂದಾಗ—ಈಗ ಯೋಗ್ಯವಾದುದನ್ನು ಮಾಡಲು- ಎಲ್ಲಿ ಸಾಧ್ಯವಿದೆ ? ಅಥವ ಈಗ ಏನು ಮಾಡುವದು ಉಚಿತವು ? ಇಂಥ ವಿಷಮ ಪರಿಸ್ಥಿತಿಯಲ್ಲಿ ಬುದ್ಧಿವಂತರಾದವರಿಗೆ ಮದನಾಂತಕನಾದ ಸದಾಶಿವನ ಚರಣಕಮಲ ಗಳನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ [ಅಂದರೆ ಮನೋಕಾಮನೆಯು ಮುಕ್ತಾಯವಾಗದೆ ಯೌವ್ವನವು ಇಲ್ಲವಾಗಿ, ಮೃತ್ಯುವೂ ಸಮೀಪಿಸ ತೊಡ ಗಿದರೆ ಅಂಥ ಸಮಯದಲ್ಲಿ ಶಿವನ ಪಾದಗಳ ಹೊರತು ಬೇರೆಗತಿಯೇ ಇಲ್ಲ ವೆಂದರ್ಥ]

ತೃಷಾಶುಷ್ಯತ್ಯಾಸ್ಯೇ ಪಿಬತಿ ಸಲಿಲಂ ಸ್ವಾದು ಸರಭಿ
ಕ್ಷುಧಾರ್ತ: ಸಂಶಾಲೀನ್ಕವಲಯತಿ ಶಾಕಾದಿ ವಲಿತಾನ್।
ಪ್ರದೀಪ್ತೇ ಕಾಮಾಗ್ನೌ ಸುದೃಢತರ ಮಾಶ್ಲಿಷ್ಯತಿ ವಧುಂ
ಪ್ರತೀಕಾರಂ ವ್ಯಾಧೇಃ ಸುಖಮಿತಿ ವಿಪರ್ಯಸ್ಯತಿ ಜನ: ॥೮೬॥

ಪುರುಷನು ತನ್ನ ಕಂಠವು ಒಣಗಿ ಹೋಯಿತೆಂದರೆ ಶೀತಲ, ಸ್ವಾದಿಷ್ಟ ಸುಗಂಧಿತ ಜಲವನ್ನು ಕುಡಿಯುತ್ತಾನೆ. ಹಸಿವೆಯಿಂದ ಬಳಲಿಕೆಯಾಗ ತೊಡಗಿದರೆ ಅನ್ನ ಹಾಗು ಕಾಯಿಪಲ್ಯಗಳಿಂದ ಅದನ್ನು—ಹಸಿವೆಯನ್ನು—ಹಿಂಗಿಸಿಕೊಳ್ಳುತ್ತಾನೆ. ಕಾಮಾಗ್ನಿಯು ಪ್ರಜ್ವಲಿತವಾಗಿ ಪರಿತಪಿಸತೊಡಗಿದ ನೆಂದರೆ ತರುಣಿಯನ್ನು ಬಲವಾಗಿ—ದೃಢವಾಗಿ—ಆಲಂಗಿಸುವನು. ಈ ಪ್ರಕಾರದ ಭಿನ್ನ ಭಿನ್ನ ವ್ಯಾಧಿಗಳ ಪ್ರತಿಯೊಂದು ಔಷಧಿಯನ್ನು ಪುರುಷನು ವಿಪರ್ಯಾಸವಾಗಿ ಅರ್ಥಮಾಡಿಕೊಳ್ಳುತ್ತಾನೆ. ಅರ್ಥಾತ್ ಅವುಗಳೆಲ್ಲ ತನಗೆ ಸುಖವನ್ನೀಯತಕ್ಕವುಗಳೆಂದೇ ಭಾವಿಸುತ್ತಾನೆ.

ಪುರುಷನ ರೀತಿಯು ವಿಚಿತ್ರವಾದುದಾಗಿರುವದು. ತನಗೆ ದುರ್ಮಾರ್ಗಕ್ಕೆ ಒಯ್ಯುವಂಥವುಗಳನ್ನು, ತನ್ನನ್ನು ಸರ್ವನಾಶಮಾಡುವಂಥವುಗಳನ್ನೇ ಅವನು ಪ್ರೀತಿಸುತ್ತಾನೆ. ಹಾಗು ಅವುಗಳೇ ತನಗೆ ನಿಜವಾದ ಸುಖವನ್ನೀಯುವಂಥವುಗಳೆಂದು ಭಾವಿಸುವನು. ಅಂದಾಗ ಪುರುಷನು ಎಷ್ಟೊಂದು ಮೂರ್ಖನಿರುವನೆಂಬುದು ವ್ಯಕ್ತವಾಗುವದು.

ಸ್ನಾತ್ವಾಗಾಂಗೈ: ಪಯೋಭಿಃ ಶುಚಿಕುಸುಮ ಫಲೈರರ್ಚಯಿತ್ವಾ
ವಿಭೋ ತ್ವಾ
ಧ್ಯೇಯೇ ಧ್ಯಾನಂ ನಿಯೋಜ್ಯ ಕ್ಷಿತಿಧರ ಕುಹರಗ್ರಾವ ಪರ್ಯಂಕ-
-ಮೂಲೇ ।
ಆತ್ಮಾರಾಮ: ಫಲಾಶಿ ಗುರುವಚನರತ ಸ್ತ್ವತ್-ಪ್ರಸಾದಾತ್ಸ್ಮರಾರೇ
ದುಃಖಾನ್ಮೋಕ್ಷೆ ಕದಾಹಂತವ ಚರಣರತೋ ಧ್ಯಾನಮಾರ್ಗೈಕ
ಕನಿಷ್ಠ ॥೮೭॥

ಓ, ಕಾಮದೇವನ ವೈರಿಯಾದ ಶಿವನೆ! ಹೇ ಪ್ರಭುವೇ! ಪವಿತ್ರವಾದ ಗಂಗಾ ಜಲದಿಂದ ಸ್ನಾನಮಾಡಿ, ಅಷ್ಟೇ ಪವಿತ್ರವಾದ ಫಲ-ಪುಷ್ಪಗಳಿಂದ ನಿನ್ನ ಪೂಜೆಯನ್ನು ಮಾಡಿ, ಪರ್ವತ ಪ್ರದೇಶದ ಕಂದರಗಳಲ್ಲಿ, ಪರ್ವತಾಗ್ರದಲ್ಲಿ—ಪರ್ವತದ ತುದಿಗಳಲ್ಲಿ—ಅಂದರೆ ಧ್ಯಾನಮಾಡಲು ಯೋಗ್ಯವಾದ ಸ್ಥಳದಲ್ಲಿ ಕುಳಿತುಕೊಂಡು, ನಿನ್ನ ಧ್ಯಾನದಲ್ಲಿಯೇ ನಿರತನಾಗಿ, ಗುರುವಿನ ವಚನವನ್ನು ಮನ್ನಿಸಿ ಆತ್ಮಾರಾಮದಲ್ಲಿ ತಾದಾತ್ಮ್ಯಹೊಂದಿ ಯಾವಾಗಲೂ—ನಿನ್ನ ಚರಣಕಮಲಗಳನ್ನೇ ನಂಬಿ, ನಿನ್ನ ಧ್ಯಾನದಲ್ಲಿಯೇ ಮಗ್ನನಾಗಿರುವಂಥ ನಾನು ಈ ಸಂಸಾರದ—ದುಃಖಗಳಿಂದ ಯಾವಾಗ ಮುಕ್ತನಾಗುವೆನು ? [ಶುಚಿರ್ಭೂತನಾಗಿ ಪರ್ವತಾಗ್ರ ಪ್ರದೇಶದಲ್ಲಿ ಕುಳಿತು ಕೊಂಡು ಏಕಚಿತ್ತದಿಂದ ನಿನ್ನನ್ನೇ ನೆನೆಯುತ್ತಿರುವ ನನಗೆ ಈ ಸಂಸಾರದ ಜಂಜಡದಿಂದ ಯಾವಾಗ ಬಿಡುಗಡೆಯಾಗುವದು? ಎಂದರ್ಥ]

ಶಯ್ಯಾ ಶೈಲ ಶಿಲಾ ಗೃಹೇ ಗಿರಿಗುಹಾ ವಸ್ತ್ರ ತರುಣಾಂ ತ್ವಚ:
ಸಾರಂಗಾ: ಸುಹೃದೋ ನನು ಕ್ಷಿತಿ ರುಹಾಂ ವೃತ್ತಿಃ ಫಲೈ:
ಕೋಮಲೈಃ|
ಏಷಾಂ ನೈರ್ಝರಣಾಂಬು ಪಾನ ಮುಚಿತಂ ರತ್ಯೈಚ ವಿದ್ಯಾಂಗನಾ:
ಮನ್ಯನ್ತೇ ಪರಮೇಶ್ವರಾ: ಶಿರಸಿ ಯೈರ್ಬದ್ಧೋ ನ ಸೇವಾಂಜಲಿ:
||೮೦||

ಶಿಲೆಯೇ ಹಾಸುಗೆಯಾಗಿರುವಂಥವನನ್ನು ಅರ್ಥಾತ್ ಮಲಗಿಕೊಳ್ಳಲು ಯಾವಾಗಲೂ ಶಿಲಾಶಯ್ಯೆಯನ್ನೇ ಅವಲಂಬಿಸಿರುವಂಥವನನ್ನು ಪರ್ವತ ಪ್ರದೇಶದೊಳಗಿನ ಕಂದರಗಳನ್ನು ತನ್ನ ಮನೆಯೆಂದು ಭಾವಿಸಿಕೊಂಡಂಥವನನ್ನು. ವೃಕ್ಷದ ತೊಗಟೆಯೇ-ವಲ್ಕಲಗಳೇ-ವಸ್ತ್ರಗಳನ್ನಾಗಿ ಮಾಡಿಕೊಂಡವನನ್ನು, ಹರಿಣವನ್ನು ಗೆಳೆಯನನ್ನಾಗಿ ಮಾಡಿಕೊಂಡವನನ್ನು, ವೃಕ್ಷಗಳು ಕೊಡುವಂಥ ಮಧುರಫಲಗಳನ್ನು ಸೇವಿಸಿ ಹಸಿವೆಯನ್ನು ಹಿಂಗಿಸಿಕೊಳ್ಳು ವವನನ್ನು; ಝರಿಯೊಳಗಿನ ನೀರು ಕುಡಿದು ಬಾಯಾರಿಕೆ ಕಳೆದುಕೊಳ್ಳು ವವನನ್ನು, ವಿದ್ಯಾರೂಪದ ತರುಣಿಯೊಂದಿಗೆ ಪ್ರೇಮ ಸಂಪರ್ಕವಿರಿಸಿಕೊಂ

ಪಂಥವನ್ನು, ಹಾಗು ಯಾವಾಗಲೂ ಎರಡನೆಯವರ ಸೇವಾ ಕಾರ್ಯದಲ್ಲಿ ತತ್ಪರನಾಗಿರುವಂಥ ಪುರುಷನು ಪರಮೇಶ್ವರನ ಸರಿಸಮಾನನೆಂದು ಭಾವಿಸುತ್ತೇನೆ. (ಗಿರಿ ಕಂದರಗಳಲ್ಲಿ ವಾಸಿಸಿ, ಕಲ್ಲಿನ ಹಾಸಿಗೆಯ ಮೇಲೆ ಮಲ್ಲಗಿ, ಕಂದ ಮೂಲಾದಿಗಳನ್ನು ಸೇವಿಸಿ ಯಾವಾಗಲೂ ಎರಡನೇಯವರ ಸೇವೆ ಮಾಡುವವನು ಈಶ್ವರ ಸಮಾನನೆಂದರ್ಥ.)

ಸತ್ಯಮೇವ ತ್ರಿಲೋಕೀ ಸರತಿ ಹರಿ ಶಿರಶ್ಚುಂಬಿ ನೀವಚ್ಛವಾಯಾಂ,
ಸದ್ ವೃತ್ತಿಂ ಕಲ್ಪ ಯಂತ್ಯಾಂ ತಟವಿಟಪಭ ವೈರ್ವಲ್ಕಲೈ: ಸತ್
ಫಲೈಶ್ಚ।
ಕೋಯಂ ವಿದ್ವಾನ್ವಿಪತ್ತಿ ಜ್ವರ ಜಲಿ ತರುಜಾತಿವದು:
—ಶ್ವಾಕಿ—ನಾವು್
ವಕ್ತ್ರಂ ವೀಕ್ಷೇತ ದು:ಸ್ಥೇ ಯದಿ ಹಿನ ಬಿಭ್ರಯಾತ್ಸ್ವೇ
ಕುಟುಂಬೇನು ಪಂಪಾಂ ||೮೯||

ಯಾವುದರ ಕಟಿ ವಸ್ತ್ರವು ಮಹಾದೇವನ ಮಸ್ತಕವನ್ನು ಚುಂಬಿಸುವದೋ ಹಾಗು ದಂಡೆಯ ಮೇಲಿನ ವೃಕ್ಷಗಳು ತೊಟ್ಟುಕೊಳ್ಳಲು ವಲ್ಕಲಗಳನ್ನು ಹಾಗು ತಿನ್ನಲು ಫಲಗಳನ್ನು ಕೊಡುವದೋ ಅಂಥ ತ್ರೈಲೋಕ್ಯ ಸರಿತೆ ಸಂಗೆಯು—ಗಂಗಾನದಿಯು—ಪ್ರತ್ಯಕ್ಷ ಇರುತ್ತಿರುವಾಗ—ಅಲ್ಲದೆ ಅದು, ಆ ಗಂಗೆಯು ಸದ್ ವೃತ್ತಿಯ ಪ್ರೇರಣೆಯನ್ನೀಯುತ್ತಿರುವಾಗ—ಯಾವ ಬುದ್ಧಿವಂತ ಪುರುಷನು ವಿಪತ್ತುಗಳ ರೂಪದ ಜ್ವರ ಗ್ರಸ್ತರಾಗಿ ಉದ್ವಿಗ್ನದ ಶ್ವಾಸ ಬಿಡುತ್ತಿರುವ ಸ್ತ್ರೀಯರ ಮುಖವನ್ನು ನೋಡಬಹುದು. ಮತ್ತು ತನ್ನ ಪರಿವಾರದ ಮೇಲೆ ದಯಾದೃಷ್ಟಿಯನ್ನಿರಿಸದೆ ಇರಬಹುದು? (ನಾವು ಕುಟುಂಬವನ್ನು ಬೆಳೆಯಿಸುವ ದೃಷ್ಟಿಯಿಂದ ಜಂಜಡದಲ್ಲಿ ಬೀಳುತ್ತೇವೆ. ಅದಿಲ್ಲವಿದ್ದರೆ ಗಂಗಾತಟದಲ್ಲಿಯೇ ಎಲ್ಲವೂ ಸಿಕ್ಕುವದೆಂದರ್ಥ)

ಉದ್ಯಾನೇಷು ವಿಚಿತ್ರ ಭೋಜನ ವಿಧಿ ಸ್ತ್ರೀ ವ್ರಾತಿ ತೀವ್ರಂ ತಪ:
ಕೌಪೀನಾವರಣಂ ಸುವಸ್ತ್ರಮಭಿತೋ ಭಿಕ್ಷಾಟನಂ ಮಂಡನಂ।
ಆಸನ್ನಂ ಮರಣಂ ಚ ಮಂಗಲ ಸಮಂ ಯಸ್ಯಾಂ ಸಮುತ್ಪದ್ಯತೇ
ತಾಂ ಕಾಶೀಂ ಪರಿಹತ್ಯ ಹಂತ ವಿಬುಧೈರನ್ಯತ್ರ ಕಿಂ ಸ್ಥೀಯತೇ||೯೦||

ಓ, ಪಂಡಿತರೆ! ಭೂಕೈಲಾಸವೆನ್ನಿಸಿದ ಮಹಾ ಕ್ಷೇತ್ರ ಕಾಶಿಯನ್ನು ತ್ಯಾಗ ಮಾಡಿ ಉಳಿದ ಕಡೆಯಲ್ಲಿ ಏತಕ್ಕೆ ವಾಸ ಮಾಡುವಿರಿ? ಇಲ್ಲಿಯ-ಕಾಶಿಯ-ಉಪವನಗಳಲ್ಲಿ ನಾನಾ ಪ್ರಕಾರದ ಆಡುಗೆಯನ್ನು ಮಾಡಿ ಊಟ ಮಾಡುವದೇ ತೀರ ಹೆಚ್ಚಿನ, ಉನ್ನತಮಯವಾದ ವ್ರತವಾಗಿರುವದು. ಅಲ್ಲಿ ಲಂಗೋಟಿಯನ್ನು ಧರಿಸುವದೇ ಅತ್ಯುತ್ತಮ ವಸ್ತ್ರವಾಗಿರುವದು. ಹಾಗು ಭಿಕ್ಷೆ ಬೇಡುವದೇ ಅತ್ಯಂತ ಭೂಷಣವೆನ್ನಿಸುವದು. ಮತ್ತು ಅಲ್ಲಿ ಮರಣ ಹೊಂದುವದೇ ಪರಮ ಸೌಭಾಗ್ಯವೆನ್ನಿಸುವದು. ಹಾಗು ಅದು ಅತ್ಯಂತ ಮಂಗಲವನ್ನುಂಟು ಮಾಡುವಂಥದಾಗಿರುವದು.

ಭೂ ಕೈಲಾಸವೆನ್ನಿಸಿದಂಥ ಮಹಾ ಕ್ಷೇತ್ರ ಕಾಶಿಯೇ ಇಲ್ಲಿರುವಾಗ ಬೇರೆ ಸ್ಥಾನಗಳಲ್ಲಿ ಹೋಗಿ ವಾಸಿಸುವದರಲ್ಲಿ ಏನೂ ಅರ್ಥವಿಲ್ಲ. ಅಲ್ಲಿ—ಕಾಶಿಯಲ್ಲಿ—ಲಂಗೋಟಿಯನ್ನು ಧರಿಸಿ, ಭಿಕ್ಷಾಟನೆಯಿಂದ ಉಪಜೀವಿಸುವದು ಶ್ರೇಯಸ್ಕರವಾದುದು. ಹಾಗು ಅಲ್ಲಿಯೇ ಸಾವು ಬಂದರಂತೂ ಇನ್ನೂ ಮಂಗಳಕರವಾದುದಾಗಿದೆ.

ನಾಥಂ ತೇ ಸಮಯೋ ರಹಸ್ಯ ಮಧುನಾ ನಿದ್ರಾತಿ ನಾಥೋಯದಿ
ಸ್ಥಿತ್ವಾದ್ರ ಕ್ಷ್ಯತಿ ಕುಪ್ಯತಿ ಪ್ರಭುಂತಿ ದ್ವಾರೇಷು ಏಷಾಂ ವಚಃ।
ಚೇತಸ್ತಾನಪಹಾಯ ಯಾಹಿ ಭವನಂ ದೇವಸ್ಯ ವಿಶ್ವೇಶಿತು—
ನಿಂದೌವಾರಿಕ ನಿರ್ದಯೋಕ್ತ್ಯ ಪರುಷಂ ನಿಃಸೀಮ ಶರ್ಮ
ಪ್ರದಮ್ ॥೯೧॥

ಓ ಮನವೆ! ಭಿಕ್ಷುಕನು ಭಿಕ್ಷಾರ್ಥಿಯಾಗಿ ಓರ್ವ ಶ್ರೀಮಂತನ ದ್ವಾರದಲ್ಲಿ ನಿಂತಿರುವಾಗ ಆ ಮನೆಯ ದ್ವಾರಪಾಲಕನು "ಇದು ಭಿಕ್ಷೆ ಬೇಡುವ ಸಮಯವಲ್ಲ, ಪ್ರಭುಗಳು ಏಕಾಂತದಲ್ಲಿದ್ದಾರೆ, ಶ್ರೀಮಂತರು ಯಾವುದೋ ಗಹನ ವಿಚಾರದಲ್ಲಿ ಮಗ್ನರಾಗಿದ್ದಾರೆ. ಈಗ ಅವರು ಮಲಗಿಕೊಂಡಿರುವರು. ಎದ್ದ ಕೂಡಲೇ ನಿನ್ನನ್ನು ನೋಡಿದರೆ ಅವರು ಬಹಳ ಸಿಟ್ಟಿಗೇಳುವರು. ಆದಕ್ಕಾಗಿ ಬೇಗನೇ ಇಲ್ಲಿಂದ ಹೊರಡು" ಎಂದು ಹೇಳುವವನ ಮನೆಯು ಇದ್ದರೂ ಅಷ್ಟೆ, ಇಂಬಿದ್ದರೂ ಅಷ್ಟೆ. ಅದರ ಬದಲು ವಿಶ್ವೇಶ್ವರನ ಚರಣ

ಗಳಿಗೆ ಮೊರೆ ಹೋಗುವದು ಒಳಿತು. ಏಕೆಂದರೆ ಅವನ ವಿಶ್ವೇಶ್ವರನ; ದ್ವಾರದಲ್ಲಿ ಮುಂದಕ್ಕೆ ಹೋಗು ಎಂದು ಹೇಳುವವರು ಯಾರು ಇರುವದಿಲ್ಲ. ಹಾಗು ಅವನ ದ್ವಾರದಲ್ಲಿ ನಿಂತಾಗ ಇಲ್ಲಿ ಏತಕ್ಕೆ ನಿಂತಿರುವಿಯೆಂದು ಜಡಿಯುವವರು ಕೂಡ ಯಾರೂ ಇರುವದಿಲ್ಲ. ಅಂತೆಯೇ ವಿಶ್ವೇಶ್ವರನ ದ್ವಾರವು ಮಂಗಳಕರವಾಗಿದೆ.

ಪ್ರಿಯ ಸಖ ವಿಪದ್‌ದಂಡ ವ್ರಾತ ಪ್ರತಾಪ ಪರಂಪರಾ-
ಪರಿಚಯ ಚಲೇ ಚಿಂತಾ ಚಕ್ರೇ ನಿಧಾಯ ವಿಧಿಃಖಲ|
ಮೃದಮಿಪ ಬಲಾತ್ಪಿಂಡೀ ಕೃತ್ಯ ಪ್ರಗಲ್ಭ ಕುಲಾಲವದ್
ಭ್ರಮಯತಿ ಮನೋನೋ ಜಾನೀಮಃ ಕಿ ಮತ್ರ
ವಿಧಾಸ್ಯತಿ ||೬೨||

ಓ, ಪ್ರಿಯಸಖನಾದ ಬುದ್ಧಿಯೆ! ವಿಧಾತನು ಬಹು ಬುದ್ಧಿವಂತನು. ಏಕೆಂದರೆ ಅವನು ಒಳ್ಳೇ ಚತುರನಾದ ಕುಂಬಾರನಂತೆ ಚಿಂತಾರೂಪದ-ಚಿಂತೆಯೆಂಬ-ಚಕ್ರದ ಮೇಲೆ ಆಪತ್ತುಗಳ ರೂಪದ ಬಡಿಗೆಯ—ದಂಡದ—ಪರಂಪರೆಯಿಂದ ಅತ್ಯಂತ ಚಂಚಲವಾಗಿರುವ ಹಾಗು ಮಣ್ಣಿನ ಪಿಂಡದೋಪಾದಿಯಲ್ಲಿ ನಮ್ಮ ಮನವನ್ನು ಒಂದೇಸವನೆ ತಿರುಗಿಸುತ್ತಿದ್ದಾನೆ. ಅವನು-ವಿಧಾತನು—ಇನ್ನೂ ಏನೇನು ಮಾಡುವನೋ ಏನೋ? ಅದು ಮಾತ್ರ ಗೊತ್ತಿಲ್ಲ.

ಕುಂಬಾರನು ತನ್ನ ತಿಗರಿಯನ್ನು ತನ್ನ ಕೈಕೋಲಿನ ಸಹಾಯದಿಂದ ತಿರುಗಿಸಿ ಪಾತ್ರೆಗಳನ್ನು ತಯಾರಿಸುವ ಸಮಯದಲ್ಲಿ ಮಣ್ಣಿನ ಮುದ್ದೆಗೆ ನಾನಾ ಬಗೆಯ ತಾಡನಗಳನ್ನು ಮಾಡುವನು. ಈ ರೀತಿಯಾಗಿ ಆ ಮಣ್ಣು ಕುಂಬಾರನ ಕೈಯ ಪೆಟ್ಟುಗಳನ್ನು ಸಹಿಸಬೇಕಾಗುತ್ತದೆ. ವಿಧಾತನು ಕೂಡ ಆ ಕುಂಬಾರನಂತೆಯೇ ಇರುತ್ತಾನೆ. ಆದಕ್ಕಾಗಿಯೇ ಅವನು ನಾನಾ ಬಗೆಯ ಕೀಟಲೆಗಳನ್ನೀಯುತ್ತಾನೆ. ಮುಂದೆಯೂ ಕೊಡುವನು.

ಮಹೇಶ್ವರೇ ವಾ ಜಗತಾ ಮಧೀಶ್ವಸರೇ ಜನಾರ್ದನೇ ವಾ
ಜಗದಾಂತರಾತ್ಮಾನಿ।
ತಯೋರ್ದ ಭೇದಪ್ರತಿ ಪತ್ತಿರಸ್ತಿ ಮೇ ತಥಾಪಿ ಭಕ್ತಿಸ್ತರು—
ಣೇಂದು ಶೇಖರೇ ॥೯೩॥

ಜಗದೀಶ್ವರನಾದ ಶಿವನಿಗೂ ಮತ್ತು ಜನಾರ್ದನನಾದ ನಾರಾಯಣ ನಿಗೂ ಜಗದಂತರಾತ್ಮಭೇದವು ಕಂಡುಬರುವದಿಲ್ಲ—ಆದರೂ ಜಟಾಮುಕುಟ ದೊಳಗೆ ನವೀನ ಚಂದ್ರನನ್ನು ಧರಿಸಿದಂತಹ ಶಿವನಲ್ಲಿಯೇ ನಮ್ಮ ಅಪಾರ ಪ್ರೀತಿಯಿರುವದು.

ಮಹೇಶ್ವರ ಹಾಗು ವಿಷ್ಣು ಇವರೀರ್ವರಲ್ಲಿ ಒಬ್ಬರು ಜಗದ್ದೀಶರಾಗಿ ದ್ದಾರೆ. ಇನ್ನೊಬ್ಬರು ಜಗತ್ತಿನ ಅಂತರಾತ್ಮರಾಗಿರುವರು ನಿಜ. ಹೀಗಿರುವಾಗ ಅವರೀರ್ವರಲ್ಲಿ ಯಾವುದೇ ಬಗೆಯ ಭೇದವಿಲ್ಲವೆಂಬುದೂ ನಿಜ. ಅಂದರೆ ಅವರೀರ್ವರಲ್ಲಿ ಯಾರು ಹೆಚ್ಚು ಎಂಬುದರ ವಿವಾದವು ಅನವಶ್ಯಕ ಎಂದರ್ಥ. ಹೀಗಿದ್ದರೂ ಜಟಾಮುಕುಟದೊಳಗೆ ಬಾಲ ಚಂದ್ರನನ್ನು ಧರಿಸಿದಂಥ ಶಿವನನ್ನೇ ಹೆಚ್ಚು ಪ್ರೀತಿಸುತ್ತೇನೆ ಎಂದು ಭರ್ತೃಹರಿಯು ಹೇಳಿರುವನು. ಈ ಮಾತನ್ನು ಗಮನಿಸಿದಾಗ "ನಿನ್ನ ನಂಬಿ ಯಾರು ಬದುಕಿದರು ಹರಿಯೇ?" ಎಂಬ ಮಾತು ನೆನಪಾಗುವದು ಸಹಜವಾಗಿದೆ.

ರೇ ಕಂದರ್ಪಕರಂ ಕದರ್ಥಯಸಿ ಕಿಂ ಕೋದಂಡ ಟಂಕಾರವೈ
ರೇರೇ ಕೋಕಿಲ ಕೋಮಲೈಃ ಕಲರವೈ ಕ್ಷಿಂ ತ್ವಂ ವೃಥಾ ಜಲ್ಪಾಸಿ।
ಮುಗ್ಧೇ ಸ್ನಿಗ್ಧ ವಿದಗ್ಧ ಕ್ಷೇಪಮಧುರೈರ್ಲೋಲೈಃ ಕಟಾಕ್ಷೈರಲಂ
ಚೇತಶ್ಚುಂಬಿತ ಚಂದ್ರ ಚೂಡ ಚರಣಧ್ಯಾನಾ ಮೃತೇ ವರ್ತತೇ॥೯೪॥

ಓ, ಕಾಮದೇವನೆ! ನೀನು ನಿನ್ನ ಧನುಷ್ಯದ ಠೇಂಕಾರದಿಂದ–ನಿನ್ನ-ಕೈಗಳಿಗೇತಕ್ಕೆ ಕಷ್ಟವನ್ನು ಕೊಡುವೆ.? ಅರ್ಥಾತ್ ನೀನು ನಮ್ಮ ಮೇಲೆ ಏತಕ್ಕೆ ಪುಷ್ಪಬಾಣಗಳನ್ನು ಪ್ರಯೋಗಿಸುವೆ ? ಓ, ಕೋಗಿಲೆಯೆ! ನೀನು ನಿನ್ನ ಕೋಮಲವಾಣಿಯಿಂದ ವೃಥಾ ಏತಕ್ಕೆ 'ಶಂಖವಾದ್ಯ' ಮಾಡುವೆ? ಹೇ ಮುಗ್ಧೆ! ನೀನು ನಿನ್ನ ಪ್ರಿಯವಾದ, ಚತುರ, ಸುಂದರ, ಮಧುರ ಹಾಗು

ಚಂಚಲವಾದ ಕಟಾಕ್ಷವನ್ನು—ಓರೆನೋಟವನ್ನು—ಬೀರದಿರು. ಏಕೆಂದರೆ ನನ್ನ ಚಿತ್ತವು ಚಂದ್ರಶೇಖರನ—ಮಹಾದೇವನ—ಚರಣಗಳ ಧ್ಯಾನ ರೂಪದ ಅಮೃತದ ಸೇವನೆಯಲ್ಲಿ ಮಗ್ನವಾಗಿರುವದು.

ಮಾನವನ ಚಿತ್ತವು ಒಂದು ಸಲ ದೇವ ದೇವನಾದ ಮಹಾದೇವನ ಚರಣಗಳ ಧ್ಯಾನದಲ್ಲಿ ಮಗ್ನವಾಯಿತೆಂದರೆ-ತಲ್ಲೀನವಾಯಿತೆಂದರೆ—ಅವನ ಮೇಲೆ ಕಾಮನ ಹೂಬಾಣಗಳಾಗಲಿ, ಕೋಗಿಲೆಯ ಮಧುರ ಸ್ವರವಾಗಲಿ ಹಾಗು ಸುಂದರ ತರುಣಿಯರ ಓರೆ ನೋಟವಾಗಲಿ ಯಾವುದೇ ಬಗೆಯ ಪರಿಣಾಮವನ್ನುಂಟು ಮಾಡುವದಿಲ್ಲ.

ಕೌಪೀನಂ ಶತಖಂಡ ಜರ್ಜರತರಂ ಕಂಥಾ ಪುನಸ್ತಾದೃಶೀ
ನೈಶ್ಚಿಂತ್ಯಂ ಸುಖಸಾಧ್ಯ ಭೈಕ್ಷ್ಯ ಮಶನಂ ನಿದ್ರಾ ಸ್ಮಶಾನೇರನೇ।
ಮಿತ್ರಾಮಿತ್ರ ಸಮಾನತಾತಿ ವಿಮಲಾ ಚಿಂತಾಥ ಶೂನ್ಯಾಲಯೇ
ಧ್ವಸ್ತಶೇಷಮದ ಪ್ರಮಾದ ಮುದಿತೋ ಯೋಗಿಸುಖಂ ತುಷ್ಠತಿ॥೯೫॥

ಯೋಗಿಗಳು ಧರಸಿರುವ ಕೌಪೀನವು ನೂರಾರು ಕಡೆಗೆ ಹರಿದು ಜೀರ್ಣ ವಾಗಿಬಿಟ್ಟಿದೆ. ಕಂತೆಯು ಕೂಡ ನಿಶ್ಚಿಂತವಾಗಿರುವದು. ಅವರಿಗೆ ಭಿಕ್ಷಾನ್ನವು ಸುಲಭ ಸಾಧ್ಯವಿದೆ. ಅವರ ಮಲಗುವ ಸ್ಥಳವು ಸ್ಮಶಾನ ಹಾಗು ವನ ಪ್ರದೇಶ ಗಳಾಗಿವೆ. ಅಲ್ಲದೆ ಅವರು ಮಿತ್ರರು ಹಾಗು ಶತೃಗಳಲ್ಲಿ ಒಂದೇ ಬಗೆಯ ಭಾವನೆಗಳನ್ನಿರಿಸುವರು-ಅಂತೆಯೆ-ಅವರು ನಿರ್ಜನ ಸ್ಥಳದಲ್ಲಿ ಕುಳಿತು ಕೊಂಡು ಸಮಾಧಿಸ್ಥರಾಗುವರು. ಈ ರೀತಿಯಾಗಿ ಯೋಗಿಗಳು ಸುಖರೂಪ ವಾಗಿರುವರು.

ಯೋಗಿಗಳಿಗೆ ಈಶ ಚಿಂತನೆಯೊಂದನ್ನುಳಿದು ಬೇರಾವ ಬಗೆಯ ಚಿಂತೆಯೂ ಇರುವದಿಲ್ಲ. ನಿಜಕ್ಕೂ ಅವರಿಗೆ ಅನ್ನ—ಬಟ್ಟೆ-ನಿದ್ರೆಗಳ ಚಿಂತೆ ಯಂತೂ ಅವರಿಗೆ ಇರುವುದೇ ಇಲ್ಲ. ಏಕೆಂದರೆ ಅವರಿಗೆ ಭಿಕ್ಷೆ ಬೇಡಿದಾಗ ಅನ್ನವು ಸಿಕ್ಕುವದು. ವಸನವು ಅಂದರೆ ತೊಟ್ಟುಕೊಳ್ಳುವ ಬಟ್ಟೆಯು ಎಷ್ಟೊಂದು ಜೀರ್ಣವಾಗಿದ್ದರೂ ಅತ್ತ ಕಡೆಗೆ ಲಕ್ಷವೀಯು ವದಿಲ್ಲ. ನಿದ್ರೆಗಾಗಿ ಅವರಿಗೆ ಮನೆಯೇ ಬೇಕೆಂದಿಲ್ಲ. ಅರಣ್ಯ ಪ್ರದೇ

ಆಗಬಹುದು. ಸ್ಮಶಾನವಾದರೂ ಆಗಬಹುದು. ಹೀಗಾಗಿ ಅವರು ಸುಖ ಪುರುಷರಾಗಿದ್ದಾರೆ.

ಭೋಗಾ ಭಂಗುರ ವೃತ್ತಯೋ ಬಹುವಿಧಾಸ್ತೈರೇವ ಚಾಯಂ ಭವ-
ಸ್ತತ್ಕಸ್ಯೇಹ ಕೃತಂ ಪರಿಂಭ್ರಮತ ರೇ ಲೋಕಾಃ ಕೃತಂ ಚೇಷ್ಟಿತೈ।
ಆಶಾಪಾಶ ಶತೋಪಶಾಂತಿ ವಿಶತಂ ಚೇತ: ಸಮಾಧೀಯತಾಂ
ಕಾಮೋಚ್ಛೇತ್ತ್ರಪದೇ ಸ್ವಧಾಮನಿ ಯದಿ ಶ್ರದ್ಧೇಯ ಮಸ್ಮದ್ವಚ:॥೯೬॥

ಓ, ಮಾನವರೆ! ಈ ಜಗತ್ತಿನೊಳಗಿರುವಂಥ ನಾನಾ ಪ್ರಕಾರದ ಭೋಗಗಳಿಗೆ ಜನನ-ಮರಣಗಳೇ ಕಾರಣವಾಗಿರುವವು. ಇದನ್ನು ಅರಿತು ಕೊಂಡ—ತಿಳಿದುಕೊಂಡ—ನಂತರವೂ ನೀವು ಇಲ್ಲಿ ಏತಕ್ಕೆ ಭ್ರಮಣ ಮಾಡುತ್ತಿರುವಿರಿ? ಇಂಥ—ಈ ಬಗೆಯ—ಭೋಗ ಚೇಷ್ಟೆಗಳಿಂದ ಆಗುವ ಲಾಭವಾದರೂ ಏನು? ಒಂದು ವೇಳೆ ನಮ್ಮ ಮಾತಿನ ಮೇಲೆ ನಿಮಗೆ ಶ್ರದ್ಧೆ ಇದ್ದರೆ, ಆಸ್ಥೆ ಇದ್ದರೆ, ನೂರಾರು ಬಗೆಯ ಆಶಾಪಾಶಗಳನ್ನು ಹರಿದೊಗೆ ಯಿರಿ. ಹಾಗು ನಿರ್ಮಲ ಚಿತ್ತರಾಗಿ ಸ್ವಯಂ ಪ್ರಕಾಶಮಾನನೂ ಕಾಮ ನಾಶನೂ ಆದಂಥ ಮಹಾದೇವನಲ್ಲಿ ಚಿತ್ತವನ್ನು ಲೀನಗೊಳಿಸಿರಿ.

ಈ ಜಗತ್ತಿನ ಜಂಜಡದಿಂದ ಪಾರಾಗಬೇಕೆನ್ನುವವರು, ಮೋಹಪಾಶ ಗಳನ್ನು ಹರಿದೊಗೆಯಬೇಕು. ಅಂದರೆ ಐಶ್ವರ್ಯದ ಲೋಭ; ತರುಣಿಯರ ವ್ಯಾಮೋಹ, ಇದು ನನ್ನದು ಅದು ನನ್ನದು ಎಂಬ ಆಶೆಬುರುಕತನವು ಇಲ್ಲ ವಾಗಬೇಕು. ಹಾಗು ಅವರು ತಮ್ಮ ಚಿತ್ತವನ್ನು ದೇವ ದೇವನಾದ ಮಹಾ ದೇವನ ಚರಣ ಕಮಲಗಳ ಧ್ಯಾನದಲ್ಲಿ ತಲ್ಲೀನಗೊಳಿಸಬೇಕು.

ಧನ್ಯಾನಾಂ ಗಿರಿಕಂದರೇ ನಿವಸತಾಂ ಜ್ಯೋತಿಃ ಪರಂ ಧ್ಯಾಯತಾ—
ಮಾನಂದಾಶ್ರುಜಲಂ ಪಿಬಂತಿ ಶಕುನಾ ನಿಃ ಶಂಕಮಂಕೇಶಯಾ:।
ಅಸ್ಮಾಕಂ ತು ಮನೋರಥೋ ಪರಚಿತ ಪ್ರಾಸಾದ ವಾಪೀತಟ-
ಕ್ರೀಡಾ ಕಾನನ ಕೇಲಿ ಕೌತುಕ ಜುಷಾಮಾಯಾ: ಪರಂ ಕ್ಷೀಯತೇ

ಪರ್ವತ ಪ್ರದೇಶದಲ್ಲಿರುವಂಥ ಗುಹೆಗಳಲ್ಲಿ ವಾಸಮಾಡುವ ಪುರುಷರು ನಿಜಕ್ಕೂ ಧನ್ಯರು. ಹಾಗು ಪರಬ್ರಹ್ಮ ಜ್ಯೋತಿಯ ಧ್ಯಾನವನ್ನು ಮಾಡುವವರು, ಮತ್ತು ಯಾವ ಮಹಿಮನ ಆನಂದಾಶ್ರುಗಳನ್ನು ಪಕ್ಷಿಗಳ ಸಮೂಹವು ಅವನ ಮಡಿಲೊಳಗೆ ಕುಳಿತುಕೊಂಡು ನಿರ್ಭಯದಿಂದ ಅವುಗಳನ್ನು -ಅಶ್ರುಜಲವನ್ನು-ಕುಡಿಯುವವೋ,ಅಂಥ ಪುರುಷನು ಧನ್ಯನು. ಮತ್ತು ನಮ್ಮ ಆಯುಷ್ಯವು ಮನೋರಥವನ್ನು ಈಡೇರಿಸಿಕೊಳ್ಳುವದರಲ್ಲಿಯೇ ಕ್ಷೀಣವಾಗಿ ನಶಿಸಿ-ಹೋಗುತ್ತಿದೆ. ತಾತ್ಪರ್ಯವಿಷ್ಟೇ: ನಮ್ಮ ಜನ್ಮವು ನಾನಾ ಪ್ರಕಾರದ ಕೆಲಸಕ್ಕೆ ಬಾರದ—ನಿಷ್ಪ್ರಯೋಜಕವಾದಂಥ-ಕಲ್ಪನೆಗಳಲ್ಲಿ ವ್ಯಯವಾಗತೊಡಗಿದೆಯೇ ವಿನಾ ಯಾವುದೂ ಕೈಗೂಡುವದಿಲ್ಲ. (ಮಾನವನು ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕಾದರೆ ಇಲ್ಲದ ಕಲ್ಪನೆಗಳನ್ನು ತಲೆಯೊಳಗೆ ತುಂಬಿಕೊಳ್ಳಬಾರದು. ಅರ್ಥಾತ್ ಗಾಳಿ ಗೋಪುರಗಳನ್ನು ಕಟ್ಟಕೂಡದು. ಅಂದರೆ ಇಲ್ಲದ ವ್ಯಾಮೋಹವನ್ನು ಹಚ್ಚಿಕೊಂಡು ಕೊರಗುವದರಲ್ಲಿ ಏನೂ ಉಪಯೋಗವಿಲ್ಲವೆಂದರ್ಥ.)

ಆಕ್ರಾಂತಂ ಮರಣೇನ ಜನ್ಮ ಜರಸಾ ವಿದ್ಯುಚ್ಚಲಂ ಯೌವನಂ
ಸಂತೋಷೋ ಧನಲಿಪ್ಸಯಾ ಶಮಸುಖಂ ಪ್ರೌಢಾಂಗನಾವಿಭ್ರಮೈಃ ।
ಲೋಕೈರ್ಮತ್ಸರಿಭಿರ್ಗುಣಾ ವನಭುವೋ ವ್ಯಾಲೈರ್ನೃಪಾ ದುರ್ಜ-
—ನೈರಸ್ಥೈರ್ಯೇಣ ವಿಭೂತಯೋಽಪ್ಯುಪಹತಾ ಗ್ರಸ್ತಂ ನ ಕಿಂ—
—ಕೇನವಾ ॥ ೯೮ ॥

ಈ ಜಗತ್ತಿನೊಳಗೆ ಜನ್ಮವು ಮೃತ್ಯುವಿನಿಂದ ಆಕ್ರಾಂತವಾಗಿದೆ. ಅರ್ಥಾತ್ ಮೃತ್ಯುವಿನಿಂದ ಆಕ್ರಮಿತವಾಗಿದೆ. ಅದೇ ರೀತಿಯಾಗಿ ವಿದ್ಯುತ್ತಿನಂತಿರುವ ಚಂಚಲ ಯೌವ್ವನವು ವೃದ್ಧಾಪ್ಯದಿಂದ, ಸಂತೋಷವು ಐಶ್ವರ್ಯದ ಆಕಾಂಕ್ಷೆಯಿಂದ, ಶಾಂತಿಯ ಸುಖವು ಸುಂದರ ಸ್ತ್ರೀಯರ ವಿಲಾಸಗಳಿಂದ; ಸದ್ಗುಣವು ಮತ್ಸರದಿಂದೊಡಗೂಡಿದ ಜನರಿಂದ, ಅರಣ್ಯ ಪ್ರದೇಶವು ವಿಷಪೂರಿತ ಹಾವುಗಳಿಂದ, ಅರಸರು ದುರ್ಜನರಿಂದ, ಹಾಗು ಐಶ್ವರ್ಯವು ಚಂಚಲತೆ—ಅಸ್ಥಿರತೆಯಿಂದ—ಆಚ್ಛಾದಿತವಾಗಿರುವದು.—ಈ ರೀತಿಯಾಗಿ

ಎಲ್ಲವಕ್ಕೂ ಯಾವುದಾದರೊಂದು ಕೊರತೆಯು, ವಿನಾಶದ ಕಾರಣವು ಇದ್ದೇ ಇರುವದು. (ಈ ಜಗತ್ತಿನೊಳಗಿನ ವಸ್ತುಗಳೆಲ್ಲ ಒಂದಿಲ್ಲೊಂದು ದಿನ ನಾಶ ವಾಗತಕ್ಕಂಥವುಗಳೇ ಆಗಿವೆ. ಅದಕ್ಕಾಗಿ ಅಂಥವುಗಳನ್ನು ನಂಬ ಕೂಡದು ಅರ್ಥಾತ್ ಅವುಗಳು ಕೊನೆಯವರೆಗೂ ಇರತಕ್ಕವುಗಳೆಂದು ನಂಬಿಕೊಂಡು ಇರಕೂಡದು ಹಾಗು ನಿತ್ಯ ಸುಖವನ್ನೀಯುವ ಶಿವನ ಆರಾಧನೆಯಲ್ಲಿ ಲೀನ ರಾಗಿರಬೇಕು.)

ಆಧಿವ್ಯಾಧಿಶತೈರ್ಜನಸ್ಯ ವಿವಿಧೈರಾರೋಗ್ಯ ಮುನ್ಮೂಲ್ಯತೇ
ಲಕ್ಷ್ಮೀರ್ಯತ್ರ ಪತಂತಿ ತತ್ರ ವಿವೃತದ್ವಾರಾ ಇವ ವ್ಯಾಪದಃ ।
ಜಾತಂ ಜಾತಮವಶ್ಯ ಮಾಶು ವಿವಶಂ ಮೃತ್ಯುಃ ಕರೋತ್ಯಾತ್ಮಸಾ—
ತ್ತತ್ಕಿಂ ನಾಮ ನಿರಂಕುಶೇನ ವಿಧಿನಾ ಯನ್ನಿರ್ಮಿತಂ ಸುಸ್ಥಿತಮ್
೯೯

ಪುರುಷನ ಆರೋಗ್ಯವು—ಸ್ವಾಸ್ಥ್ಯವು— ನಾ ನಾ ಪ್ರಕಾರದ ಶಾರೀರಿಕ ಹಾಗು ಮಾನಸಿಕ ವ್ಯಾಧಿಗಳನ್ನು ನಿರ್ಮೂಲನಗೊಳಿಸುವದು. ಅರ್ಥಾತ್ ಅವುಗಳನ್ನು ಬೇರು ಸಹಿತ ಕಿತ್ತಿಸೆಯುವದು. ಲಕ್ಷ್ಮಿಯು ವಾಸಿಸುವಂಥ ಸ್ಥಳದಲ್ಲಿ ಆಪತ್ತು ತಂತಾನೆ ಪ್ರಕಟವಾಗುವದು. ಅಂದರೆ ಐಶ್ವರ್ಯವಂತರು ಆಪತ್ತಿಗಾಗಿ—ಸಂಕಟಕ್ಕಾಗಿ—ಹುಡುಕುತ್ತ ಹೋಗಬೇಕಾಗಿಲ್ಲ. ಅದುವೇ ಇವರ—ಶ್ರೀಮಂತರ—ಮನೆಯನ್ನು ಹುಡುಕುತ್ತ ಬರುವದು. ಹಾಗು ಹುಟ್ಟಿದವನನ್ನು ಮೃತ್ಯುವು ಒತ್ತಾಯದಿಂದ ತನ್ನ ವಶದೊಳಗೆ-ಬಲಪೂರ್ವಕ ವಾಗಿ—ತೆಗೆದುಕೊಳ್ಳುವದು, ಹೀಗಿರುವಾಗ ಅಂದರೆ ಇಲ್ಲಿ ಈ ಬಗೆಯ ವ್ಯವ ಹಾರವು ನಡೆಯುತ್ತಿರುವಾಗ ನಿರಂಕುಶ ಮತಿಯಾದ ವಿಧಿಯು ಯಾವ ವಸ್ತುವಿನಲ್ಲಿ ಸ್ಥಿರತೆಯನ್ನು ದಯಪಾಲಿಸಿರುತ್ತದೆ ? ಅರ್ಥಾತ್ ಈ ಜಗತ್ತಿ ನೊಳಗಿನ ಯಾವ ವಸ್ತುಗಳು ಸ್ಥಿರವಾದಂಥವುಗಳಾಗಿವೆ ? (ಈ ಸಂಸಾರ ದೊಳಗಿನ ಯಾವ ವಸ್ತುಗಳೂ—ಮಾನವರು ಕೂಡ—ಸ್ಥಿರವಾದವುಗಳಲ್ಲ ವೆಂದು ಭರ್ತೃಹರಿಯು ಈ ಶ್ಲೋಕದಲ್ಲಿ ಹೇಳಿರುವನು.)

ಕೃಚ್ಛ್ರೇಣಾ ಭೇದ್ಯ ಮಧ್ಯೇ ನಿಯಮಿತ ತನುಭಿಃ ಸ್ಥೀಯತೇ
ಗರ್ಭವಾಸೇ
ಕಾಂತಾ ವಿಶ್ಲೇಷ ದುಃಖ ವ್ಯತಿಕರ ವಿಷಮೋ ಯೌವನೇ
ಚೋಪಭೋಗ:।
ನಾರೀಣಾಮಪ್ಯವಜ್ಞಾ ವಿಲಸಿತ ನಿಯತಂ ವೃದ್ಧಭಾವೋಪ್ಯಸಾಧುಃ
ಸಂಸಾರೇ ಕೇ ಮನುಷ್ಯಾ ವದತ ಯದಿ ಸುಖಂ ಸ್ವಲ್ಪ ಮಪ್ಯಸ್ತಿ—
ಕಿಂಚಿತ್ ॥೧೦೦॥

ನಮಗೆ—ಮಾನವರಾದ ನಮ್ಮೆಲ್ಲರಿಗೆ-ಶರೀರದಿಂದ ಬಿಗಿಯಲ್ಪಟ್ಟ, ಅಪವಿತ್ರನಾದ ಗರ್ಭದೊಳಗೆ ಬಹು ಕಠಿಣತೆಯಿಂದ, ಕಷ್ಟದಿಂದ ಇರಬೇಕಾ ಕಾಗುತ್ತದೆ. ಯೌವ್ವನದ ಉಪಭೋಗವು ಸ್ತ್ರೀಯರ ವಿಯೋಗ ರೂಪದ ದು:ಖದಿಂದಾಗಿ ಅತಿ ವಿಷಮವಾಗಿರುವದು. ಹಾಗು ವೃದ್ಧಾವಸ್ಥೆಯಲ್ಲಿ ನಮಗೆ ಸ್ತ್ರೀಯರ ನಿರಾದರದಿಂದಾಗಿ ಶೋಕದಿಂದ ತಲೆ ತಗ್ಗಿಸಬೇಕಾಗು ವಂಥ ಪ್ರಸಂಗವು ಬರುವದು. ಜೊತೆಗೆ ದು:ಖಿಸುವ ಪ್ರಸಂಗವೂ ಬರುವದು ಅದಕ್ಕಾಗಿ—ಓ, ಮಾನವರೆ! ಈ ಜಗತ್ತಿನೊಳಗೆ ಸಾಸುವೆ ಕಾಳಿನಷ್ಟಾದರೂ ಸುಖವಿದೆಯೆಂಬುದು ಕಂಡು ಬಂದರೆ—ದಯವಿಟ್ಟು—ನನಗೆ ಹೇಳಿರಿ. ಅಂದರೆ ಇಲ್ಲವೇ ಇಲ್ಲವೆಂದರ್ಥ, (ಮಾನವನಿಗೆ ಯೌವ್ವನದಲ್ಲಿಯೂ ವೃದ್ಧಾಪ್ಯದಲ್ಲಿಯೂ ಸುಖವಿಲ್ಲ. ಏಕೆಂದರೆ ಯೌವ್ವನ ಕಾಲದಲ್ಲಿ ತರುಣಿಯರ ವಿಯೋಗದಿಂದ ನಾನಾ ಬಗೆಯಿಂದ ಪರಿತಪಿಸುತ್ತಿದ್ದರೆ ವೃದ್ಧಾಪ್ಯದಲ್ಲಿ ಅವರಿಂದ—ಸ್ತ್ರೀಯರಿಂದ-ಅವಮಾನಿತರಾಗಬೇಕಾಗುತ್ತದೆ. ಹೀಗಾಗಿ ಅವನಿಗೆ ಸುಖವೆಂಬುದು ಇಲ್ಲವೇ ಇಲ್ಲ.)

ಆಯುರ್ವರ್ಷ ಶತಂ ನೃಣಾಂ ಪರಿಮಿತಂ ರಾತ್ರೌ ತದರ್ಧಂ ಗತಂ
ತಸ್ಯಾರ್ಧಸ್ಯ ಪರಸ್ಯ ಚಾರ್ಧಮ ಪರಂ ಬಾಲತ್ವ ವೃದ್ಧತ್ವಯೋ।
ಶೇಷಂ ವ್ಯಾಧಿ ವಿಯೋಗ ದುಃಖ ಸಹಿತಂ ಸೇವಾದಿಭಿರ್ನೀಯತೇ
ಜೀವೇ ವಾರಿ ತರಂಗ ಚಂಚಲ ನರೇ ಸೌಖ್ಯಂ ಕೃತಃ
ಪ್ರಾಣಿನಾಂ ॥೧೦೧॥

ಮಾನವನ ಆಯುಷ್ಯವು—ಸಾಧಾರಣವಾಗಿ—ಒಂದು ನೂರು ವರ್ಷಗಳೆಂದು ಪರಿಗಣಿಸಲಾಗುತ್ತಿದೆ. ಆದರಲ್ಲಿ ಅವನ ಅರ್ಧ ಆಯುಷ್ಯವು ಅಂದರೆ ಐವತ್ತು ವರ್ಷಗಳು ರಾತ್ರಿಯ ಸಮಯದಲ್ಲಿ ಮಲಗಿಕೊಂಡಲ್ಲಿಯೇ ಕಳೆದು ಹೋಗುವವು. ಇನ್ನುಳಿದ ಅರ್ಧದಲ್ಲಿ ಅರ್ಧ ಅಂದರೆ ಉಳಿದ ಐವತ್ತು ವರ್ಷಗಳಲ್ಲಿ ಅರ್ಧವೆಂದರೆ ಇಪ್ಪತ್ತೈದು ವರ್ಷಗಳು. ಬಾಲ್ಯ ಹಾಗು ವೃದ್ಧಾಪ್ಯಗಳಲ್ಲಿ ಕಳೆದು ಹೋಗುವವು. ಅನಂತರ ಇನ್ನುಳಿದ ಇಪ್ಪತ್ತೈದು ವರ್ಷಗಳು ವ್ಯಾಧಿ ಅಂದರೆ ಬೇನೆ-ಬೇಸರಿಕೆಗಳು, ವಿಯೋಗ ಹಾಗು ದುಃಖ ಸಹಿತವಾದ ಸೇವಾಭಾವನೆಯಲ್ಲಿ ಕಳೆದು ಹೋಗುವವು. ಅಂದಾಗ—ಅಂದರೆ ಮೇಲಿನ ಲೆಖ್ಖದ ಪ್ರಕಾರ ಮಾನವನ ಜೀವಿತವನ್ನು ಸೂಕ್ಷ್ಮವಾಗಿ, ಕೂಲಂಕಷವಾಗಿ ಪರಿಶೀಲಿಸಿದಾಗ— ನೀರಿನ ತೆರೆಗಳಂತೆ—ತರಂಗಗಳಂತೆ—ಚಂಚಲವಾಗಿರುವಂಥ ಈ ಜೀವನದಲ್ಲಿ—ಸಂಸಾರದಲ್ಲಿ—ಮಾನವನಿಗೆ ಸುಖವು ಎಲ್ಲಿಂದ ದೊರೆಯಬೇಕು, ಎಂಬುದನ್ನು ನೀವೇ—ಚನ್ನಾಗಿ ವಿಚಾರಮಾಡಿ ಹೇಳಿರಿ! ಅಂದರೆ ಮಾನವನಿಗೆ ಸುಖವು ಸಿಗುವದಿಲ್ಲವೆಂದರ್ಥ.

ಬ್ರಹ್ಮಜ್ಞಾನಿ ವಿವೇಕಿ ನಿರ್ಮಲಧಿಯಃ ಕುರ್ವಂತ್ಯಹೋ ದುಷ್ಕರಂ
ಯನ್ಮುಂಚಂತ್ಯುಪಭೋಗ ಭಾಂಜ್ಯಪಿ ದನಾನ್ಯೇಕಾಂತತೋ
ನಿಃಸ್ಪೃಹಾಃ ।
ನ ಪ್ರಾಪ್ತಾನಿ ಪುರಾನ ಸಂಪ್ರತಿ ನಚ ಪ್ರಾಪ್ತೌದೃಢ ಪ್ರತ್ಯಯೋ
ವಾಂಛಾ ಮಾತ್ರ ಪರಿಗ್ರಹಣ್ಯಪಿ ಪರಂ ತ್ಯಕ್ತುಂ ನ ಶಕ್ತಾವಯಂ
॥೧೦೨॥

ಬ್ರಹ್ಮಜ್ಞಾನದ ವಿವೇಕದಿಂದ ಯಾವ ಪುರುಷನ ಬುದ್ಧಿಯು ನಿರ್ಮಲವಾಗಿರುವದೋ ಅವನು ಎಂತಹ ಕಠಿಣ ಕಾರ್ಯವನ್ನಾದರೂ ಮಾಡಬಲ್ಲನು. ಇಷ್ಟೇ ಅಲ್ಲ ಅವನು ನಿಸ್ಪೃಹನಾಗಿ ಅಂದರೆ ಯಾವುದೇ ಬಗೆಯ ಇಚ್ಛೆ—ಮಮತೆಗಳಿಗೊಳಗಾಗದೆ, ಉಪಭೋಗ-ಧನವನ್ನು ಪರಿತ್ಯಾಗ ಮಾಡುತ್ತಾನೆ. ಅಂದರೆ ಉಪಭೋಗಕ್ಕಾಗಿ ಹಣದಿಂದ ನಿರ್ಲಿಪ್ತನಾಗಿರುವನು. ಆದರೆ ನಮಗೆ ಆ ವಸ್ತುಗಳು ಈ ವರೆವಿಗಂತೂ ಪ್ರಾಪ್ತವಾಗಿಲ್ಲ.

ಸಧ್ಯಕ್ಕೂ ಇಲ್ಲ. ಮುಂದೆಯೂ ದೊರೆಯಲಾರದೆಂಬ ನಂಬುಗೆಯಿದೆ.— ಆದರೂ ನಾವು—ಇಚ್ಛಾ ಮಾತ್ರದಿಂದ ಅವುಗಳ—ಆ ವಸ್ತುಗಳ—ಗ್ರಹಣ ಮಾಡುತ್ತೇವೆಯಾದರೂ ಅವುಗಳನ್ನು ತ್ಯಾಗ ಮಾಡುವದು ನಮ್ಮಿಂದ ಸಾಧ್ಯವಿಲ್ಲ.

ಮಾನವನ ಬುದ್ಧಿಯು ಬ್ರಹ್ಮಜ್ಞಾನದ ವಿವೇಕದಿಂದ ನಿರ್ಮಲವಾಗಿ ರಬೇಕು. ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಅಂದರೆ ಅವನು ಎಂಥ ಕಷ್ಟದ ಕೆಲಸವನ್ನು ಪ್ರಾರಂಭಿಸಿದರೂ ಅದನ್ನು ಎದೆಗೊಟ್ಟು ಮಾಡಿ ಮುಗಿಸುವನು. ಅದಿಲ್ಲದವನು ಚಂಚಲಚಿತ್ತನಾಗಿ ಯಾವುದನ್ನೂ ಪೂರ್ಣ ಗೊಳಿಸಲಾರದಂಥವನಾಗುವನು ಎಂಬುದು ಈ ಶ್ಲೋಕದ ತಾತ್ಪರ್ಯ.

ವ್ಯಾಘ್ರೀವ ತಿಷ್ಠತಿ ಜರಾ ಪರಿತರ್ಜಯಂತಿ
ರೋಗಾಶ್ಚ ಶತ್ರವ ಇವ ಪ್ರಹರಂತಿ ದೇಹಮ್ ।
ಆಯುಃ ಪರಿಶ್ರವತಿ ಭಿನ್ನಾಘಟಾದಿ ವಾಂಭೋ
ಲೋಕಸ್ತಥಾ ಪ್ಯಹಿತ ಮಾಚರ ತೀತಿ ಚಿತ್ರಂ ॥೧೦೩॥

ವೃದ್ಧಾವಸ್ಥೆಯು ವ್ಯಾಘಿಣಿಯಂತೆ ಹೆದರಿಸುತ್ತ ಎದುರಿಗೆ ನಿಂತು ಕೊಂಡಿದೆ. ರೋಗಗಳು—ಕೂಡ—ಶತೃಗಳಂತೆ ದೇಹಕ್ಕೆ ನಾನಾ ಬಗೆಯ ತೊಂದರೆ-ಪೀಡೆ-ಗಳನ್ನು ಕೊಡುತ್ತಿವೆ. ಹಾಗು ಆಯುಷ್ಯವು ಕೂಡ ಒಡೆದ ಕೊಡದೊಳಗಿನ ನೀರಿನೋಪಾದಿಯಲ್ಲಿ ಒಂದೇ ಸವನೆ ಬರಿದಾಗುತ್ತಲೇ-ಕ್ಷಯಿಸುತ್ತಲೇ—ಇದೆ. ಹೀಗಿದ್ದರೂ ಕೂಡ ಮಾನವರು ತಮಗೆ ಅಹಿತ ವಾಗುವಂತಹ ಕಾರ್ಯವನ್ನು ಒಳ್ಳೇ ಆಸ್ಥೆಯಿಂದ ಮಾಡುತ್ತಿರುವದು. ನಿಜಕ್ಕೂ ಆಶ್ಚರ್ಯಕರವಾಗಿದೆ.

ಮಾನವನಿಗೆ ಯೌವನವು ಶಾಶ್ವತವಲ್ಲ. ವೃದ್ಧಾಪ್ಯವು ಅವನಿಗೆ ವ್ಯಾಘ್ರಿಣಿಯಂತೆ ಯಾವಾಗಲೂ ಹೆದರಿಸುತ್ತಲೇ ಇರುತ್ತದೆ. ರೋಗಗಳಂತೂ ಒಂದರ ಹಿಂದೊಂದರಂತೆ ಬೆನ್ನುಹತ್ತಿರುತ್ತವೆ. ಆಯುಷ್ಯವು ಕೂಡ ಅವನಿಗೆ ಅರಿಯದಂತೆಯೇ ದಿನ—ದಿನಕ್ಕೆ ಕಡಿಮೆಯಾಗುತ್ತಲೇ ಹೋಗುವದು.

ಹೀಗಿದ್ದರೂ ಕೂಡ ಅವರು—ಮಾನವರು—ತಮಗೆ ಯಾವಾಗಲೂ ಅಹಿತವನ್ನೇ ಬಯಸುವಂಥ ಕಾರ್ಯವನ್ನು ಮಾಡುತ್ತಿರುವದು ಸೋಜಿಗದ ಸಂಗತಿಯಾಗಿದೆ.

ಗಾತ್ರಂ ಸಂಕುಚಿತಂ ಗತಿರ್ವಿಗಲಿತಾ ಭ್ರಷ್ಟಾ ಚ ದಂತಾವಲಿ—
ದೃಷ್ಟಿರ್ನಶ್ಯತಿ ವರ್ಧತೇ ಬಧಿರತಾ ವಕ್ತ್ರಂ ಚ ಲಾಲಾಯತೇ|
ವಾಕ್ಯಂ ನಾದ್ರಿಯತೆ ಚ ಬಾಂಧವಜನೋ ಭಾರ್ಯಾನ ಶುಶ್ರೂಷತೇ
ಹಾ ಕಷ್ಟಂ ಪುರುಷಸ್ಯ ಜೀರ್ಣವಯಸಃ
ಪುತ್ರೋಪ್ಯಾಮಿತ್ರಾಯತೇ ||೧೦೪||

ವೃದ್ಧ ಪುರುಷರ ಶರೀರವು—ದೇಹವು—ಆಕುಂಚನಗೊಳ್ಳುತ್ತಲೆ ಹೋಗುವದು. ಅಂದರೆ ಶಿಥಿಲವಾಗುತ್ತ ನಡೆಯುವದು. ಗತಿಯು ವಿಗಲಿತವಾಗುತ್ತ ಹೋಗುವದು. ಹಲ್ಲುಗಳು ಸಡಿಲಾಗಿ ಉದುರತೊಡಗುವವು. ಕಿವುಡುತನವು ದಿನದಿನಕ್ಕೆ ಹೆಚ್ಚುತ್ತ ಹೋಗುವದು. ಮುಖದ ಮೇಲಿನ ಕಳೆಯು ಮಾಯವಾಗಿ ನಿಸ್ತೇಜವಾಗತೊಡಗುವದು.—ಅಂಥ ಸಮಯದಲ್ಲಿ ಭಾಂಧವ ವರ್ಗವು ಕೂಡ ಅವರನ್ನು ಆದರದಿಂದ ಕಾಣುವದಿಲ್ಲ. ಸ್ತ್ರೀಯರು ಕೈಹಿಡಿದ ಹೆಂಡತಿಯು—ಮನಮುಟ್ಟಿ ಸೇವೆ ಮಾಡುವದಿಲ್ಲ. ಓಹ್! ಈ ಸಮಯವು—ವೃದ್ಧಾಪ್ಯವು—ಎಷ್ಟೊಂದು ತೊಂದರೆಯನ್ನೀಯುವಂಥದಾಗಿದೆ! ಈ ಕಾಲದಲ್ಲಿ ಪುತ್ರರು ಕೂಡ ಶತೃಗಳಾಗಿ ಬಿಡುವರು. ಅರ್ಥಾತ್ ಎಲ್ಲವೂ, ಎಲ್ಲ ದಿಶೆಯಲ್ಲೂ ವಿಪರೀತ ಪರಿಸ್ಥಿತಿಯು ಕಂಡು ಬರುವದು. (ಮಾನವನಿಗೆ ವೃದ್ಧಾಪ್ಯವು ಒಂದು ಶಾಪವಿದ್ದಂತೆ; ಏಕೆಂದರೆ ಆ ಸಮಯದಲ್ಲಿ ಅವನಿಗೆ ಎಲ್ಲರೂ ವಿರೋಧಿಗಳಾಗುವರು. ಇನ್ನುಳಿದವರದಂತೂ ದೂರದ ಮಾತು. ಸ್ವತಃ ಅವನ ಶರೀರವೇ ಅವನಿಗೆ ವಿರೋಧಿಯಾಗುವದು ಎಂದರ್ಥ)

ಕ್ಷಣಂ ಬಾಲೋ ಭೂತ್ವಾ ಕ್ಷಣಮಪಿ ಯುವಾ ಕಾಮರಸಿಕಃ
ಕ್ಷಣಂ ವಿತ್ತೈರ್ಹೀನಃ ಕ್ಷಣಮಪಿ ಚ ಸಂಪೂರ್ಣವಿಭವಃ|
ಜರಾಜೀರ್ಣೈರ್ನಟ ಇವ ವಲೀ ಮಂಡಿತ ತನು—

ನರಃ ಸಂಸಾರಾಂತೇ ವಿಶತಿ ಯಮಧಾನೀ
ಜವನಿಕಾಂ ||೧೦೫||

ಮಾನವನು ಒಂದು ಕ್ಷಣದಲ್ಲಿ ಚಿಕ್ಕಮಗುವಿನಂತಾಗುತ್ತಾನೆ. ಹಾಗು ಮತ್ತೊಂದು ಕ್ಷಣದಲ್ಲಿ ಕಾಮರಸಿಕ—ಕಾಮೇಚ್ಛೆಯನ್ನು ಪ್ರಕಟಗೊಳಿಸು ವಂಥ-ತರುಣನಾಗಿ ಬಿಡುವನು. ಅದೇ ರೀತಿಯಾಗಿ ಒಂದುಕ್ಷಣದಲ್ಲಿ ದಟ್ಟ ದರಿದ್ರನಾದರೆ ಮತ್ತೊಂದು ಕ್ಷಣದಲ್ಲಿ ಸಕಲೈಶ್ವರ್ಯ ಸಂಪನ್ನನಾಗುವನು. ಮಗದೊಂದು ಗಳಿಗೆಯಲ್ಲಿ ಜರಾ-ಜೀರ್ಣವಾದ-ವೃದ್ಧಾಪ್ಯದಿಂದ ಕ್ಷೀಣಹೊಂ ದಿದ, ದುರ್ಬಲವಾದ-ಅಂಗಾಂಗಗಳನ್ನುನೋಡಿ ಮತ್ತೆ ಒಳ್ಳೆಯ ನಟನಂತೆ ರೂಪವನ್ನು ಪರಿವರ್ತಿಸಿಕೊಳ್ಳುತ್ತ ಈ ಸಂಸಾರ ರೂಪದ ನಾಟಕ ರಂಗದಲ್ಲಿ ಯಮರಾಜನ ನಗರ ರೂಪದ ಜವನಿಕೆ-ಪರದೆ, ತೆರೆ-ಯಲ್ಲಿ ಪ್ರವೇಶಿಸುವನು. (ಮಾನವನ ಜೀವನವು ವಿಚಿತ್ರವಾಗಿರುತ್ತದೆ, ನಿಜ. ಆದರೆ ಮಾನವನೂ ಕೂಡ ಅಷ್ಟೇ ವಿಚಿತ್ರನಾಗಿರುತ್ತಾನೆ. ಏಕೆಂದರೆ ಅವನು ಒಂದು ನಿಮಿಷದಲ್ಲಿ ದ್ದಂತೆ ಮತ್ತೊಂದು ನಿಮಿಷದಲ್ಲಿರುವದಿಲ್ಲ. ಬೇರೆಯೇ ಆಗಿರುತ್ತಾನೆ. ಹೀಗೆ ಅವನು ಜೀವನವೆಂಬ ನಾಟಕ ರಂಗದಲ್ಲಿ ಒಳ್ಳೆಯ ನಟರಂತೆ ಪ್ರವೇಶಿಸುವನು ಎಂದರ್ಥ)

ಅಹೌ ವಾ ಹಾರೇ ವಾ ಬಲವತಿ ರಿಪೌ ವಾ ಸುಹೃದಿ ವಾ
ಮಣೌ ವಾ ಲೋಷ್ಟೇ ವಾ ಕುಸುಮಶಯನೇ ವಾ
ದೃಷದಿ ವಾ|
ತೃಣೇವಾ ಸ್ತ್ರೈಣೇ ವಾ ಮಮ ಸಮದೃಶೋ ಯಾಂತಿ ದಿವಸಾ:
ಕ್ವಚಿತ್ಪುಣ್ಯೇ ರಣ್ಯೇ ಶಿವಶಿವ ಶಿವೇತಿ ಪ್ರಲಹತಃ ||೧೦೬||

ಇನ್ನು ಮುಂದೆ ನಮ್ಮ ದಿನಗಳು ಯಾವುದಾದರೊಂದು ಪವಿತ್ರ ವನ ದೊಳಗೆ ಶಿವ ಶಿವಾ ಎಂದು ಶಿವನಾಮವನ್ನು ಜಪಿಸುವದರಲ್ಲಿಯೇ ಕಳೆಯು ವವು.—ಹಾಗೆ ದಿನಗಳನ್ನು ಸುಖ ರೂಪದವಾಗಿ ಕಳೆಯಲಿಕ್ಕೂ ಒಂದು

ಸಮಯಬೇಕು. ಅಂಥ ಸಮಯವು ಈ ರೀತಿಯಾಗಿರಬೇಕು.—ವಿಷ ಪೂರಿತ ವಾದ ಹಾವನ್ನು ಹಾಗು ಪುಷ್ಪ-ಮುತ್ತಿನ—ಹಾರವನ್ನು; ಬಲಶಾಲಿಯಾದ ವೈರಿಯನ್ನು ಹಾಗು ಆಪ್ತ ಸ್ನೇಹಿತನನ್ನು, ಬಹು ಮೂಲ್ಯದ ಮಣಿಯನ್ನು ಇಲ್ಲವೆ ಪಾಷಾಣವನ್ನು; ಹೂವಿನ ಹಾಸುಗೆ ಇಲ್ಲವೆ ಪರ್ವತ ಪ್ರದೇಶದೊಳ ಗಿನ ಶಿಲಾಶಯ್ಯೆಯನ್ನು ಹಾಗು ಹುಲ್ಲು ಕಡ್ಡಿಯನ್ನು ಅಥವ ಸ್ತ್ರೀಯರ ಸಮೂಹವನ್ನು ಒಂದೇ ಎಂದು —ಅವುಗಳಲ್ಲಿ ಯಾವುದೇ ಬಗೆಯ ಭೇದವಿಲ್ಲವೆಂದು— ತಿಳಿಯಬೇಕು. ಆಗ ಮಾತ್ರ—ಮೇಲೆ ಹೇಳಲಾಗಿರು ವಂತೆ ಸಮಯವು ಕಳೆಯುವದು. (ಮಾನವನು ಶಿವನ ಚಿಂತನೆಯಲ್ಲಿಯೇ ಕಾಲಕಳೆಯುತ್ತ ಸುಖದಿಂದಿರಬೇಕಾಗಿದ್ದರೆ ಅವನು ವ್ಯಾಮೋಹದ ಜಂಜಡ ವನ್ನು ಬೇರು ಸಹಿತ ಕಿತ್ತೊಗೆಯಬೇಕು ಎಂಬುದು ಈ ಶ್ಲೋಕದ ತಾತ್ಪರ್ಯ)

ಧೈರ್ಯಂ ಯಸ್ಯ ಪಿತಾ ಕ್ಷಮಾ ಚ ಜನನೀ ಶಾಂತಿಶ್ಚಿರಂಗೇಹಿನೀ
ಸತ್ಯಂ ಮಿತ್ರಮಿದಂ ದಯಾ ಚ ಭಗಿನೀ ಭ್ರಾತಾ ಮತಃ ಸಂಯಮಃ|
ಶಯ್ಯಾ ಭೂಮಿತಲಂ ದಿಶೋಽಪಿ ವಸನಂ ಜ್ಞಾನಾ ಮೃತಂ
ಭೋಜನಂ
ಹ್ಯೇತೇ ಯಸ್ಯ ಕುಟುಂಬಿನೋ ವದ ಸಖೇ ಕಸ್ಮಾದ್ಭಯಮ್
—ಯೋಗಿನಃ ||೧೦೭||

ಹೇ, ಸಖಿ! ನೀನೇ ಹೇಳು ನೋಡೋಣ! ಧೈರ್ಯವೇ ತಂದೆಯಾಗಿ ರುವಂಥ; ಕ್ಷಮೆಯೇ ತಾಯಿಯಾಗಿರುವಂಥ, ಶಾಂತಿಯೇ ಭಾರ್ಯೆಯಾಗಿರು ವಂಥ, ಸತ್ಯವೇ ಗೆಳೆಯನಾಗಿರುವಂಥ, ದಯೆಯೇ ಸೋದರಿಯಾಗಿರುವಂಥ ಮನಸ್ಸಿನ ಸಂಯಮವು ಸೋದರನಾಗಿರುವಂಥ, ಇಡಿಯ ಪೃಥ್ವಿಯೇ ಶಯ್ಯೆಯಾಗಿರುವಂಥ, ದಿಶೆಗಳೇ ವಸನಗಳಾಗಿರುವಂಥ ಹಾಗು ಜ್ಞಾನವೆಂಬ ಅಮೃತವೇ ಭೋಜನ ವಾಗಿರುವಂಥ ಈ ಬಗೆಯ ಪರಿವಾರವನ್ನು ಪಡೆದ ಯೋಗಿಗೆ ಯಾವುದರ ಭಯವಿದೆ? ಯಾವ ಭಯವೂ ಇಲ್ಲವೆಂದರ್ಥ.

ಶ್ರೀಮದ್ ಭರ್ತೃಹರಿ ವಿರಚಿತ ವೈರಾಗ್ಯ ಶತಕ ಮುಗಿಯಿತು



# ವಿವಿಧ ವಿಷಯದ ಶ್ಲೋಕಗಳು

ಅಕಿಂಚನಸ್ಯ ದಾಂತಸ್ಯ ಸಮಚೇತಸಃ
ಸದಾ ಸಂತುಷ್ಟಮನಸಃ ಸರ್ವಾಃ ಸುಖಮಯಾ ದಿಶ ||೧||

ದರಿದ್ರ, ಸಂಯಮಿ, ಸಮಯಕ್ಕೆ ಸರಿಯಾಗಿ ಮಾತನಾಡುವಂಥ ಹಾಗೂ ಯಾವಾಗಲೂ ಸಂತೋಷದಿಂದಿರುವಂಥ ಪುರುಷನಿಗೆ ಎಲ್ಲ ಕಡೆಗೂ ಸಂತೋಷವೇ ಕಂಡುಬರುವದು, ಅರ್ಥಾತ್ ಅಂಥ ಪುರುಷನು ಎಲ್ಲಕಡೆಗೂ ಎಲ್ಲ ಪದಾರ್ಥಗಳಿಂದಲೂ ಸುಖವನ್ನು ಪಡೆಯುವನು.

ಅನಾವರ್ತೀ ಕಾಲೋ ವ್ರಜತಿ ಸ ವೃಥಾ ತನ್ನ ಗಣಿತಂ
ದಶಾಸ್ತಾಸ್ತಾ: ಸೋಡಾ ವ್ಯಸನಶತ ಸಂಪಾತ ವಿಧುರ:।
ಕಿಯದ್ವಾ ವಕ್ಷ್ಯಾಮ್ಯಃ ಕಿಮಿವ ಏತ ನಾತ್ಮಸ್ಯ ಪ್ರಕೃತಂ
ತ್ವಯೋ ದಾನಿಂ ತಾವತ್ಪು ನರಪಿ ತದೇವ ವ್ಯವಸಿತಂ ||೨||

ಹೋದ ಸಮಯವು ಮತ್ತೆ ಮರಳಿ ಬರುವದಿಲ್ಲ. ನಿನಗರಿಯದಂತೆಯೆ ಬಹಳಷ್ಟು ವ್ಯರ್ಥವಾಗಿರುವದು. ನಿನಗೆ ಸಂಕಟವನ್ನು ತಂದೊದ್ದುವಂಥ ಕಾರ್ಯದಲ್ಲಿಯೇ ಮತ್ತೆ ಮತ್ತೆ ತಲ್ಲೀನನಾಗುವವನಿಗೆ ಏನೆನ್ನಬೇಕೋ ತಿಳಿಯದಾಗಿದೆ.

ಅಭಿಮತ ಮಹಾಮಾನ ಗ್ರಂಥಿ ಪ್ರಭೇದ ಪಟೀಯಸಿ
ಗುರುತರ ಗುಣ ಗ್ರಾಮಾಂಭೋಜ ಸ್ಫುಟೋಜ್ವಲ ಚಂದ್ರಿಕಾ।
ವಿಪುಲವಿುಸಲ್ಲಜ್ಞಾ ವಲ್ಲೀವಿದಾರ ಕುಠಾರಿಕಾ
ಜಠರ ಪೀಟರೀ ದುಷ್ಪೂರೇಯಂ ಕರೋತಿ ವಿಡಂಬನಂ ||೩||

ಈ ಉದರವೆಂಬ ಕಡಾವಿಗೆ-ಕೊಪ್ಪರಿಗೆ-ಯು ತುಂಬಬೇಕಾದರೆ ಬಹು ಕಷ್ಟ ಪಡಬೇಕಾಗುತ್ತದೆ. ಅದಕ್ಕಾಗಿ—ಉದರ ನಿರ್ವಹಣಕ್ಕಾಗಿ-ಅವನು

ತಾನು ಶೇಖರಿಸಿಟ್ಟಿದ್ದ ಅಭಿಮಾನವನ್ನೆಲ್ಲ ವೆಚ್ಚಮಾಡುವಲ್ಲಿ ಇದು—ಈ ಉದರವು-ಬಹು ಚತುರವಿರುವದು. ಅರ್ಥಾತ್ ತಾತ್ಪರ್ಯವಿಷ್ಟೆ: ಉದರ ನಿರ್ವಹಣೆಗಾಗಿ ಮಾನವನು ಎಂತಹ ನೀಚ ಕಾರ್ಯವನ್ನಾದರೂ ಮಾಡಲೇ ಬೇಕಾಗುವದು. ಮಾಡುತ್ತಾನೆ.

ಅಶ್ನೀಮಹೀ ವಯಂ ಭಿಕ್ಷಾಮಾಶಾವಾಸೋ ವಸೀಮಹಿ।
ಶಯೀಮಹೀ ಪೃಷ್ಠೇ ಕುರ್ವೀಮಹಿ ಕಿ ಮೀಶ್ವರೈ: ॥೪॥

ನಾವು ಭಿಕ್ಷೆಯನ್ನು ಬೇಡಿ ಹೊಟ್ಟೆಹೊರೆದು ಕೊಳ್ಳುತ್ತೇವೆ. ದಿಶೆಗಳನ್ನೇ ವಸನಗಳಂತೆ ಉಪಯೋಗಿಸುತ್ತೇವೆ. ಅರ್ಥಾತ್ ನಗ್ನರಾಗಿರುತ್ತೇವೆ. ಭೂ ತಲದಲ್ಲಿ—ನೆಲದ ಮೇಲೆ—ಮಲಗಿಕೊಳ್ಳುತ್ತೇವೆ.-ಹೀಗಿರುವಾಗ-ನಮಗೆ ಐಶ್ವರ್ಯವಂತರಾದ ಪುರುಷರ ಹಂಗೇನಿದೆ ?ಏನೂ ಇಲ್ಲವೆಂದರ್ಥ.

ಉತ್ತಿಷ್ಠ ಕ್ಷಣಮೇಕ ಮುದ್ವಹ ಗುರಂ ದಾರಿದ್ರ್ಯಯಭಾರಂ ಸಖೇ
ಶ್ರಾಂತಸ್ತಾವದಹಂ ಚಿರಂ ಮರಣಜಂ ಸೇವೇತ್ವದೀಯಂ ಸುಖ।
ಇತ್ಯುಕ್ತೋ ಧನವರ್ಜಿತೇನ ಸಹಸಾ ಗತ್ವಾ ಸ್ಮಶಾನೆ ಶವೋ
ದಾರಿದ್ರ್ಯಾನ್ಮರಣಂ ವರಂ ಪರಮಿತಿ ಜ್ಞಾತ್ವೈವ
ತೂಷ್ಣೀ ಸ್ಥಿತ: ॥೨॥

ಓ ಗೆಳೆಯಾ, ಎದ್ದೇಳು! ಒಂದೇ ಒಂದು ನಿಮಿಷದ ವರೆಗೆ ನನ್ನ ದಾರಿದ್ರ್ಯದ ಭಾರವನ್ನು ದಯವಿಟ್ಟು ಹೊತ್ತುಕೊ. ನಾನು ಬಹಳ ದಣಿದಿದ್ದೇನೆ ನೀನು ಮೃತ್ಯುವನ್ನಪ್ಪಿದ ನಂತರ ಪಡೆದ ಸುಖವನ್ನು—ಸತ್ತ ನಂತರ ಪಡೆದ ಶಾಂತಿಯನ್ನು—ನಾನೂ ಕೊಂಚ ಪಡೆಯಲಿಚ್ಛಿಸುತ್ತೇನೆ, ಎಂದು ಧನಹೀನ ಪುರುಷನೊಬ್ಬನು ಸ್ಮಶಾನಕ್ಕೆ ಹೋಗಿ ಹೆಣಕ್ಕೆ ಹೇಳಲು ಅದು-ಆ ಹೆಣವು—ದಾರಿದ್ರ್ಯಕ್ಕಿಂತ ಸತ್ತು ಹೋಗುವುದೇ ಲೇಸು ಎಂದುಕೊಂಡು ಬಿಟ್ಟಿತು.

ಏಕೊ ರಾಗಿಷು ರಾಜತೇ ಪ್ರಿಯತಮಾ ದೇಹಾರ್ಧದಾರಿ ಹರೋ
ನೀರೋಗೇಷು ಜನೋ ವಿಮುಕ್ತ ಲಲನಾ ಸಂಗೋ ನಯಸ್ಮಾತ್ಪರ:।

ದುರ್ವಾರಸ್ಮರವಾಣ ಪನ್ನಗ ವಿಷಯ ವಾವಿಧ್ಧ ಮುಗ್ಧೋ ಜನಃ
ಶೇಷ: ಕಾಮ ವಿಡಂಬಿತಾನ್ನ ವಿಷಯಾ ನ್ಭೋಕ್ತುಂ ನಭೋಕ್ತು
ಕ್ಷಮ: ||೬||

ಕೇವಲ ಶಿವನೊಬ್ಬನೇ ಅನ್ಯ ಸ್ತ್ರೀಯರ ಸಂಗವನ್ನು ತ್ಯಜಿಸಿದ್ದಾನೆ. ಅರ್ಥಾತ್ ಅವನು—ಶಿವನು —ತನ್ನ ಪತ್ನಿಯನ್ನು ಬಿಟ್ಟು ಬೇರಾವ ಸ್ತ್ರೀಯರನ್ನೂ ಬಯಸಿಲ್ಲ. ಅಲ್ಲದೆ ಅವನು ತನ್ನ ಪ್ರಿಯತಮೆಯ—ಪಾರ್ವತಿಯ-ಅರ್ಧ ಶರೀರವನ್ನೂ, ಧಾರಣ ಮಾಡಿರುವನು—ಅಂತೆಯೆ ಅವನು—ಅನುರಾಗಿಗಳಿಗೆ ಪ್ರಿಯನಾಗಿರುವನು. ತಪಸ್ವಿಗಳು, ಯೋಗಿಗಳು ಕೂಡ ಇನ್ನುಳಿದವರಿಗಿಂತ ಅವನ ಮೇಲೆಯೇ—ಶಿವನ ಮೇಲೆಯೇ-ಹೆಚ್ಚಿನ ಶ್ರದ್ಧೆಯನ್ನಿಟ್ಟಿರುತ್ತಾರೆ. ಇನ್ನುಳಿದವರು ಮಾತ್ರ—ಅಂದರೆ ಶಿವನನ್ನು ಪೂಜಿಸಲಾರದಂಥವರು—ದುರ್ವಿಚಾರಿಯಾದ ಕಾಮದೇವನ ಬಾಣ ರೂಪದ ಸರ್ಪದಿಂದ ಕಚ್ಚಲ್ಪಟ್ಟು-ಕಚ್ಚಿಸಿಕೊಂಡು—ವಿಷಯ ಸುಖದಲ್ಲಿ ಲೀನರಾಗಿ, ಅದರಲ್ಲಿಯೇ ಮಗ್ನರಾಗಿ ಬಿಡುವರು.-ಹೀಗಾಗಿ ಅವರು—ಕಾಮನಿಂದ ವಿಡಂಬಿತರಾಗಿ, ಲಂಪಟರಾಗಿ ವಿಷಯ ಸುಖವನ್ನೂ ತ್ಯಾಗಮಾಡುವದಿಲ್ಲ. ಹಾಗೂ ಅದನ್ನು ಉಪಯೋಗಿಸುವದೂ ಇಲ್ಲ.

ಎಲೌ ಹಸಂತಿ ನ ರುದಂತಿ ಚ ಕಾರ್ಯ ಹೇತೋ-
ರ್ವಿಶ್ವಾಸ ಸನುಂತಿ ಚ ಪರಂ ನ ಚ ವಿಶ್ವಸಂತಿ ।
ತಸ್ಮಾನ್ನರೇಣ ಕುಲಶೀಲ ಸಮನ್ವಿ ತೇನ ಕಾರ್ಯಾ:
ಸ್ಮಶಾನ ಘಟಿಕಾ ಇವರ್ಜನೀಯಾ ||೭||

ಈ ಸ್ತ್ರೀಯರು ತಮ್ಮ ಅಭಿಪ್ರಾಯದಿಂದಲೇ ಅಳುವದುಂಟು. ಹಾಗು ನಗುವನೂ ಉಂಟು. ಅವರು ಎರಡನೆಯವರಲ್ಲಿ ತಮ್ಮ ಬಗ್ಗೆ ವಿಶ್ವಾಸ ಹುಟ್ಟಿಸಲು ಪ್ರಯತ್ನಿಸುತ್ತಾರೆ. ಆದರೆ ತಾವು ಮಾತ್ರ ಯಾರ ಮೇಲೂ ವಿಶ್ವಾಸವನ್ನಿರಿಸುವದಿಲ್ಲ ಅದಕ್ಕಾಗಿ ಒಳ್ಳೆಯವರು, ಕುಲೀನ ಪುರುಷರು ಸ್ಮಶಾನವಂತೆ ಸ್ತ್ರೀಯರನ್ನೂ ತ್ಯಾಗಮಾಡತಕ್ಕದ್ದು.

ಕದಾವಾರಾಣಸ್ಯಾಮ ಮರತಟಿ ನೀರೋಧಸಿವಸನ್, ವಸಾನಃ
ಕೌಪೀನಂ ಶಿರಸಿ ನಿದಧಾನೋಂಜಲಿ ಪುಟಂ।
ಅಯೋ ಗೌರೀನಾಥ ತ್ರಿಪುರಹರ ಶಂಭೋ ತ್ರಿನಯನ!
ಪ್ರಸೀದೇತ್ಯಾ ಕ್ರೋಶನ್ನಿಮಿಷ ಮಿವ ನೇಷ್ಯಾಮಿ ದಿವಸಾನ್ ||೮||

ನಾನು ಕಾಶಿಯೊಳಗೆ ಗಂಗೆಯ ತೀರದಲ್ಲಿ ಕೌಪೀನ ಧಾರಿಯಾಗಿ ಕುಳಿತುಕೊಂಡು ತಲೆಯ ಮೇಲೆ ಕೈಗಳನ್ನಿರಿಸಿಕೊಂಡು ಅರ್ಥಾತ್ ಎರಡೂ ಕರಗಳನ್ನು ಜೋಡಿಸಿ "ಓ ಗೌರೀನಾಥನೆ! ಓ, ತ್ರಿಪುರ ಹರನೇ ಶಂಭೋ! ತ್ರಿನಯನೇ! ನನಗೆ ಪ್ರಸನ್ನನಾಗು! ಎಂದು ಮಹಾದೇವನನ್ನು ಪ್ರಾರ್ಥಿಸುತ್ತ ಸಮಯವನ್ನು ಯಾವಾಗ ಕಳೆಯಬಹುದು?

ಕಾರ್ಕಶ್ಯಂ ಸ್ತಯೋರ್ದೃಶೋಸ್ತರಲತಾಲೀಕಂ ಮುಖೇ ಶ್ಲಾಘತೇ
ಕೌಟಿಲ್ಯಂ ಕಚ ಸಂಚಯೇ ಚ ವಚನೇ ಮಾಂಧ್ಯಂ ತ್ರಿಕೇ ಸ್ಥೂಲತಾ।
ಭೀರುತಂ ಹೃದಯೇ ಸದೈವ ಕಥಿತಂ ಮಾಯಾ-ಪ್ರಿಯೋಗಃ ಪ್ರಿಯೆ
ದಾಸಾಂ ದೋಷಗುಣಾ ಗುಣೋ ಮೃಗದೃ ಶಾಂತಾ:ಸ್ಯುಃ ಪಶೂನಾಂ
ಪ್ರಿಯಾಃ ||೯||

ಪಶು ಸಮಾನರಾದಂಥವರೇ ಹರಿಣಾಕ್ಷಿಯರಾದ ತರುಣಿಯರು ಸದ್ಗುಣಗಳೆಂದು ಭಾವಿಸುವರು' ಅವರ ಸ್ತನಗಳ ಕಠೋರತೆಯನ್ನು, ಓರೆ ನೋಟವನ್ನು, ಚಂಚಲತೆಯನ್ನು ಹಾಗು ಮುಖದ ಅಸತ್ಯವನ್ನು ಸುಮ್ಮನೇ ಹೊಗಳುತ್ತಾರೆ. ಕೇಶಗಳ ಕುಟಿಲತೆ, ವಾಣಿಯ ಮಂದತೆ ಹಾಗು ಕಟಿ ಪ್ರದೇಶದ ಸ್ಥೂಲತೆಯು ಇವರಿಗೆ—ಪಶು ಸಮಾನರಾದಂಥವರಿಗೆ—ಮಾನನೀಯವಾದವುಗಳಾಗಿವೆ. ಹಾಗು ಅವರ ಹೃದಯದ ಹೇಡಿತನ ಮತ್ತು ತಮ್ಮ ಪ್ರಿಯರ ಬಗೆಗಿನ ಕಪಟದ ಪ್ರಯೋಗವನ್ನು ಸದಾ ಹೊಗಳುವರು.

ಕ್ವಚಿದ್ವೀಣಾವಾದಃ ಕ್ವಚಿದಪಿ ಚ ಹಾಹೇತಿ ರುದಿತಂ,
ಕ್ವಚಿದ್ವಿದ್ವದ್ ಗೋಷ್ಠಿ ಕ್ವಚಿದಪಿ ಸುರಾಮತ್ತ ಕಲಹಃ।
ಕ್ವಚಿದ್ರಾಮಾ ರಮ್ಯಾಃ ಕ್ವಚಿದಪಿ ಗಲತ್ಕುಷ್ಠವ ಪುಷೋ
ನ ಜಾನೇ ಸಂಸಾರಃ ಕಿಮಮೃತ ಮಯಃ ಕಿಂ ವಿಷಮಯಃ ||೧೦||

ಕೆಲವು ಕಡೆಗೆ ವೀಣಾವಾದನ ನಡೆದಿದೆ. ಮತ್ತೆ ಕೆಲವು ಕಡೆಗೆ ಹಾಹಾಕಾರಯುಕ್ತ ಅಳುವು ನಡೆದಿದೆ. ಹಾಗು ಮತ್ತೊಂದಡೆ ಪಂಡಿತರ ಸಂವಾದ ನಡೆದಿದೆ. ಇನ್ನು ಕೆಲವೆಡೆಗಳಲ್ಲಂತೂ ಸುರಾಪಾನದಿಂದ ಉನ್ಮತ್ತರಾದಂಥವರ ಕಲಹವು ನಡೆದಿರುವದು. ಮತ್ತೆ ಕೆಲವಡೆಗಳಲ್ಲಿ ಸುಂದರ ಸ್ತ್ರೀಯರು ಹಾಗು ಕುಷ್ಠ ರೋಗಿಗಳು ಇರುವರು. ಇವುಗಳನ್ನೆಲ್ಲ ಪರಿಶೀಲಿಸಿದಾಗ—ಈ ಸಂಸಾರವು ಅಮೃತಮಯವಾದುದೋ. ಇಲ್ಲವೆ ವಿಷಮಯವಾದುದೋ ಎಂಬುದನ್ನು ಹೇಳುವದೇ ಅಸಾಧ್ಯವಾಗಿದೆ.

ಗಾತ್ರೈರ್ಗಿರಾ ಚ ವಿಕಲಶ್ಚಟುಮೀಶ್ವರಾಣಾಂ
ಕುರ್ವನ್ನಯಂ ಪ್ರಹಸನಸ್ಯ ನಟಃ ಕೃತೋಽಸಿ ।
ತಂ ತ್ವಾಂ ಪುನಃ ಪಲಿತಕರ್ಣಕಭಾಜಮೇನಂ
ನಾಟ್ಯೇ ನಕೇನ ನಟಯಿಷ್ಯತಿ ದೀರ್ಘಮಾಯುಃ ॥೧೧॥

ನೀವು ನಿಮ್ಮ ಅಂಕು—ಡೊಂಕಾದ ಶರೀರದಿಂದ ಹಾಗು ತೊದಲಿಸುತ್ತಿರುವ ವಾಣಿಯಿಂದಾಗಿ ಶ್ರೀಮಂತರ ಪ್ರಹಸನಕ್ಕೆ ಕಾರಣರಾಗಿರುವಿರಿ. —ಹೀಗಿರುವಾಗ—ದೀರ್ಘ ಆಯುಷ್ಯವು ನಿಮ್ಮ ಕೂದಲುಗಳು ಬೆಳ್ಳಗಾಗುವದರೊಳಗಾಗಿ ಏನೇನು ಮಾಡಿಸುವದೋ ಏನೊ ! ಅರ್ಥಾತ್ ತಾರುಣ್ಯದಲ್ಲಿಯೇ ನೀವು ಧನಿಕರ ವ್ಯರ್ಥ ಪ್ರಶಂಸೆ ಮಾಡುತ್ತಿರುವಿರೆಂದಾಗ ವೃದ್ಧಾಪ್ಯದಲ್ಲಿ ಏನು ಮಾಡುವಿರೋ ಏನೊ ?

ಚಲಾಲಕ್ಷ್ಮೀಶ್ಚಲಾಃ ಪ್ರಾಣಾಶ್ಚಲಂ ಜೀವಿತ ಯೌವನಂ
ಚಲಾಚಲೇ ಚ ಸಂಸಾರೇ ಧರ್ಮ ಏಕೋ ಹಿ ನಿಶ್ಚಲಃ ॥೧೨॥

ಈ ಚಲ ಸಂಸಾರದಲ್ಲಿ ಲಕ್ಷ್ಮಿ, ಪ್ರಾಣ, ಜೀವನ, ಹಾಗು ಯೌವನ ಇವುಗಳೆಲ್ಲ ಚಲಿತವಾದಂಥವುಗಳೇ ಆಗಿವೆ. ಅಂದರೆ ಯಾವಾಗಲೂ ಒಂದೇ ಸ್ಥಳದಲ್ಲಿ ಇರದಂಥವುಗಳಾಗಿವೆ. ಆದರೆ ಕೇವಲ ಧರ್ಮವೊಂದೇ ನಿಶ್ಚಲವಾಗಿದ್ದು ಅದು ಯಾವಾಗಲೂ ಇರುತ್ತಿದ್ದು ಅದಕ್ಕೆ ನಾಶವೆಂಬುದು ಇಲ್ಲವೇ ಇಲ್ಲ.

ದದತು ದದತು ಗಾಲಿಂ ಗಾಲಿಮಂತೊ ಭವಂತೊ
ವಯಮಪಿ ತಥ್ಭಾವಾದ್ ಗಾಲಿದಾನೇ ಸಮರ್ಥಃ ।
ಜಗತಿ ವಿದಿತ ಮೇತದ್ದೀಯತೇ ವಿದ್ಯಮಾನಂ
ನಹಿ ಶಶಕ ವಿಷಾಣಂ ಕೋಪಿ ಕಸ್ಮೈದದಾತಿ ||೧೩||

ನೀವೆಲ್ಲ ಬಯ್ಯುವಂಥವರಾಗಿರುವಿರಿ. ಅದಕ್ಕಾಗಿ ನಿಮ್ಮ ಮನಸ್ಸಿಗೆ ಬಂದಷ್ಟು ಬಯ್ಯಿರಿ. ನಮಗೆ ಬಯ್ಗುಳಗಳು ಬರುವದೇ ಇಲ್ಲ. ಅದಕ್ಕಾಗಿ ನಾವು ಬಯ್ಯಲು ಅಸಮರ್ಥರಾಗಿದ್ದೇವೆ. ಯಾವನ ಬಳಿ ಏನು ಇರುವುದೋ ಅದನ್ನೇ ಅವನು ಇತರರಿಗೆ ಕೊಡಬಲ್ಲನೆಂಬುದು ಜಗತ್ತಿಗೇ ಗೊತ್ತಿರುವ ವಿಷಯವಾಗಿರುವದು. ಸಾರಂಗದ ಕೊಂಬು ಪಾಪ, ಇತರರಿಗೆ ಏನನ್ನು ಕೊಡಬಲ್ಲದು?

ಪ್ರಶಾಂತ ಶಾಸ್ತ್ರಾರ್ಥ ವಿಚಾರ ಚಾಪಲಂ
ನಿವೃತ್ತ ನಾನಾರಸ ಕಾವ್ಯ ಕೌತುಕಮ್।
ನಿರಸ್ತನಿಃ ಶೇಷ ವಿಕಲ್ಪ ವಿಸ್ತರಮ್।
ಪ್ರವೇಷ್ಟು ಮನ್ವಿಚ್ಛತಿ ಶಂಕರಂ ಮನಃ ||೧೪||

ಶಾಂತ ಶಾಸ್ತ್ರಾರ್ಥದ ವಿಚಾರಗಳಲ್ಲಿ ತಲ್ಲೀನವಾಗಿರುವ ಅರ್ಥಾತ್ ಬ್ರಹ್ಮ ಜ್ಞಾನದ ಚಿಂತನೆಯನ್ನು ಮಾಡುತ್ತ ಈ ಮನವು ನಾನಾ ಬಗೆಯ ರಸಗಳಿಂದ ತುಂಬಿದ ಕಾವ್ಯ ಕೌತುಕವನ್ನು ಬಿಟ್ಟು, ಅವುಗಳಿಂದ ಉತ್ಪನ್ನ ವಾಗುವಂತಹ ಸಂದೇಹಗಳನ್ನು ಮಾಡಿ ಶಂಕರನಲ್ಲಿಗೆ ಹೋಗುವ ಇಚ್ಛೆ ಯನ್ನು ಪ್ರಕಟಿಸುವದು.

ಭಿಕ್ಷಾ ಕಾಮದುಧಾ ಧೇನುಃ ಕಂಥಾ ಶೀತ ನಿವಾರಣೀ।
ಅಚಲಾ ತೂ ಶಿವೇ ಭಕ್ತಿರ್ವಿಭವೈ: ಕಿಮ್ ಪ್ರಯೋಜನಂ ||೧೫||

ಭಿಕ್ಷೆಯೇ ಕಾಮಧೇನುವಾಗಿರುವಾಗ ಅರ್ಥಾತ್ ಭಿಕ್ಷೆಯಿಂದಲೇ ತೃಪ್ತಿಯಾಗುತ್ತಿರುವಾಗ, ಕಂಥೆಯು ಚಳಿಯನ್ನು ನಿವಾರಿಸುತ್ತಿರುವಾಗ

ಹಾಗು ಶಿವನಲ್ಲಿ ಅಚಲ ಭಕ್ತಿಯನ್ನಿರಿಸಿದಾಗ ಈ ವಿಭವದಿಂದ ಪ್ರಯೋಜನ ವಾದರೂ ಏನು?

ಸಿಂಹೋ ಬಲೀ ದ್ವಿರದ ಶೂಕರ ಮಾಂಸ ಭೋಜೀ,
ಸಂವತ್ಸರೇಣ ರತಿ ಮೇತಿ ಕಿಲೈಕವಾರಂ।
ಪಾರಾವತಃ ಖರಶಿಲಾಕಣ ಮಾತ್ರ ಭೋಜಿ,
ಕಾಮೀ ಭವತ್ಯನು ದಿನಂ ವದ ಕೋತ್ರ ಹೇತುಃ ॥೧೬॥

ಬಲಶಾಲಿಯಾದ ಸಿಂಹವು ಆನೆ ಮತ್ತು ಹಂದಿಯ ಮಾಂಸವನ್ನು ತಿನ್ನುತ್ತದೆಂಬುದು ಪ್ರಸಿದ್ಧವಿದೆ. ಆದರೂ ಅದು–ಆ ಸಿಂಹವು—ವರ್ಷಕ್ಕೊಂದು ಸಲ ರತಿ ಕಾರ್ಯವನ್ನು ಜರುಗಿಸುತ್ತದೆ. ಆದರೆ ಚಿಕ್ಕ ಚಿಕ್ಕ ಕಲ್ಲಿನ ತುಂಡುಗಳನ್ನು ತಿನ್ನುವ ಪಾರಿವಾಳವು ಪ್ರತಿ ದಿನವೂ ಕಾಮ ಸುಖವನ್ನು ಪಡೆಯುವದು. ಇದು ಹೀಗಾಗಲು ಕಾರಣವೇನೆಂಬುದನ್ನು ಹೇಳಬಲ್ಲಿರಾ?

ಕಮಠ ಕುಲಾಚಲ ದಿಗ್ಗಜ ಫಣಿಪತಿ ವಿಧೃತಾಪಿ ಚಲತಿ ವಸುಧೆಯಂ।
ಪ್ರತಿ ಪನ್ನಮ ಮಲ ಮನಸಾಂ ನ ಚಲತಿ ಪುಂಸಾಂ ಯುಗಾಂತೇಪಿ ॥೧೭॥

ಈ ವಸುಧೆಯು ಕೂರ್ಮದಿಂದ,–ಏಳು–ಕುಲ ಪರ್ವತಗಳಿಂದ,—ಎಂಟು—ದಿಗ್ಗಜಗಳಿಂದ ಹಾಗು ಆದಿಶೇಷ–ನಾಗ–ನಿಂದ ಹೊಂದಿಕೊಂಡಿರುವದರಿಂದಲೇ ನಡೆಯುತ್ತಿದೆ. ಆದರೆ ಶುದ್ಧ ಅಂತಃಕರುಣದ ಪುರುಷರ ವ್ಯವಸಾಯವು ಯುಗ—ಯುಗಾಂತರದಲ್ಲಿಯೂ ವಿಚಲಿತವಾಗಲಾರದು ಅರ್ಥಾತ್ ಸ್ಥಿರವಾಗಿಯೇ ಇರುವದು.

ಪರಿಚರಿತವ್ಯಾಃ ಸಂತೋ ಯದ್ಯಪಿ ನ ಕಥಯಂತಿ ಸದುಪದೇಶಮ್।
ಯಾಸ್ತ್ವೇಷಾಂ ಸ್ವೈರಕಥಾಸ್ತಾ ಏವ ಭವಂತಿ ಶಾಸ್ತ್ರಾಣಿ ॥೧೮॥

ಸಜ್ಜನರಾದ ಪುರುಷರು ಒಂದು ವೇಳೆ ಯಾವುದಾದರೊಂದು ವಿಷಯದ ಬಗೆಗೆ ಉಪದೇಶ ಮಾಡದಿದ್ದರೂ ಅವರ ಸೇವೆಯನ್ನು ಮನಮುಟ್ಟಿ ಮಾಡತಕ್ಕದ್ದು. ಏಕೆಂದರೆ ಅವರ ಎಂತಹ ಮಾತುಗಳೂ ಶಾಸ್ತ್ರೋಕ್ತಿಗಳಂತೆ ಪೂಜನೀಯಪಾಗಿರುಪವು. (ಅಂದರೆ ಅವರು ಯಾವ ಮಾತನ್ನಾಡಿದರೂ ಅದು ಅಂಗೀಕರಿಸಲು ಯೋಗ್ಯವಾದಂಥದಾಗಿರುವದು.)

ಪ್ರಾಯಃ ಕಂದುಕ ಪಾತೇನೋತ್ಪತ ತ್ಯಾರ್ಯಃ ಪತನ್ನಪಿ।
ತಥಾ ತ್ವನಾರ್ಯಃ ಪತತಿ ಮೃತ್ಪಿಂಡ ಪತನಂ ಯಥಾ ॥೧೯॥

ಸತ್ಪುರುಷರ ಪತನವು ಅರ್ಥಾತ್ ಅವರು ಬೀಳುವದು. ಬಹುಶಃ ಚಂಡಿನಂತಿರುವದು. ಅರ್ಥಾತ್ ಆಪತ್ತಿನೊಳಗೆ ಸಿಲುಕಿದ ನಂತರವೂ—ಸಿಲುಕಿದಾಗಲೂ—ಮುಂದೆ ಅಲ್ಪಾವಧಿಯಲ್ಲಿಯೇ ಸುಖಾವಸ್ಥೆಯನ್ನು ಹೊಂದುವರು. ಅರ್ಥಾತ್ ಸುಖವನ್ನು ಪಡೆಯುವರು. ಆದರೆ ಅನಾರ್ಯರ ಪತನವು ಕೆಳಗೆ ಬಿದ್ದಲ್ಲಿಯೇ ನಾಶವಾಗಿ ಹೋಗುವಂತಹ ಮಣ್ಣಿನ ಹೆಂಡೆಯಂತಿರುವದು.

ಯದಿ ನಾಮ ದೈವ ಗತ್ಯಾ ಜಗದ ಸರೋಜಂ ಕದಾ—
—ಚಿದಪಿ ಜಾತಮ್
ಅವಕರ ನಿಕರಂ ವಿಕಿಂತಿ ತತ್ಕಿಂ ಕೃಕ ವಾಕೈರಿವ ಹಂಸಃ ।೨೦।

ಒಂದು ವೇಳೆ ಈ ಜಗತ್ತು ದೈವಗತಿಯಿಂದ ಕಮಲ ರಹಿತವಾಗಿಬಿಟ್ಟರೆ ಅರ್ಥಾತ್ ಜಗತ್ತಿನೊಳಗೆ ಕಮಲಗಳೇ ಇಲ್ಲವಾದರೆ ಹಂಸಗಳು ಕೋಳಿಗಳಂತೆ ತಮ್ಮ ಕೊಕ್ಕಿನಿಂದ ಹುಡಿಯನ್ನು ಕೆದಕುವದು ಎಂದಿಗಾದರೂ ಸಾಧ್ಯವಿದೆಯೇ?

ರಕ್ತತ್ವಂ ಕಮಲಾನಾಂ ಸತ್ಪುರುಷಾಣಾಂ ಪರೋಪಕಾರಿತ್ವಂ।
ಅಸತಾಶ್ಚ ನಿರ್ದಯತ್ವಂ ಸ್ವಭಾವಸಿದ್ಧಂ ತ್ರಿಷುತ್ರಿತಯಂ ॥೨೧॥

ಕಮಲದೊಳಗಿನ ಕೆಂಪು ಛಾಯೆ, ಸತ್ಪುರುಷರಲ್ಲಿಯ ಪರೋಪಕಾರ ಬುದ್ಧಿ ಹಾಗು ದುಷ್ಟರಲ್ಲಿಯ ನಿರ್ದಯತೆ, ಇವು ಮೂರೂ ಸ್ವಾಭಾವಿಕವಾಗಿಯೇ ಮನೆ ಮಾಡಿಕೊಂಡಿರುತ್ತವೆ.

ವಾಚೋ ಹಿ ಸತ್ಯ ಪರಮಂ ವಿಭೂಷಣಂ
ಗಜಾಂಗ ನಾಯಾ: ಕೃಶತಾ ಕಟಾ ಚ|
ದ್ವಿ ಜಸ್ಯ ವಿದ್ಯೈವ ಪುನಸ್ತಥಾ ಕ್ಷಮಾ
ಶೀಲಂ ಹಿ ಸರ್ವಸ್ಯ ನರಸ್ಯ ಭೂಷಣಂ ||೨೨||

ವಾಣಿಯ ಸತ್ಯತೆಯೆ ಅತ್ಯುತ್ತಮ ಭೂಷಣವಾಗಿರುವದು. ಗಜಗಾಮಿನಿಯರಾದ ಸ್ತ್ರೀಯರ ಕಟಿ ಪ್ರದೇಶವು ದುರ್ಬಲತೆಯ ಭೂಷಣವಾಗಿರುವದು. ದ್ವಿಜರ ವಿದ್ಯೆಯು ಹಾಗು ಅದಕ್ಕಿಂತ ಹೆಚ್ಚಾಗಿ ಕ್ಷಮೆಯು ಭೂಷಣವಾಗಿರುವದು- ಪುರುಷರಿಗಂತೂ ಶೀಲವೇ ಭೂಷಣದಾಗಿರುವದು.

ಸ್ಪೃಹಯತಿ ಭುಜಯೋರಂತರ ಮಾಯತಕರವಾಲ—
—ಕರರುಹ ವಿದೀರ್ಣಂ|
ವಿಜಯ ಶ್ರೀರ್ವೀರಾಣಾಂ ವ್ಯುತ್ಪನ್ನ ಪ್ರೌಢ ವನಿತೇವ ||೨೩||

ವಿಜಯಲಕ್ಷ್ಮಿ ಉತ್ಪನ್ನ—ಕಾಮ ಶಾಸ್ತ್ರದಲ್ಲಿ ಪ್ರವೀಣ—ಹಾಗು ತಾರುಣ್ಯದಲ್ಲಿ ಕಾಲಿರಿಸಿದ ಸುಂದರಿಯರು; ಶೂರರ ಖಡ್ಗ ರೂಪದ ತೀಕ್ಷ್ಣ ನಖಗಳಿಂದ ವಕ್ಷ ಸ್ಥಲದ ಗಾಯವನ್ನು ಬಯಸುವರು.

ಅಭಿ ಮುಖ ನಿಹತಸ್ಯ ಸತಸ್ತಿಷ್ಠತು ತಾವಜ್ಜಯೋಥವಾ ಸ್ವರ್ಗ:|
ಉಭಯ ಬಲ ಸಾಧುವಾದಃ ಶ್ರವಣ ಸುಖೋಸೌ
ಬತಾತ್ಮರ್ಥ ||೨೪||

ಶತ್ರುವಿಗೆದುರಾಗಿ ಯುದ್ಧ ಮಾಡುವಂಥ ವೀರನು ಗಾಯಗೊಂಡರೂ ಜಯಶಾಲಿಯಾಗುವನು. ಇಲ್ಲವೆ ಸ್ವರ್ಗಸ್ಥನಾಗಬಹುದು. ಆ ಮಾತು ಇರಲಿ. ಏಕೆಂದರೆ ಎರಡೂ ಸೈನ್ಯಗಳ ಪ್ರಶಂಸೆಯೇ ಕವಿಗಳಿಗೆ ಬಲು ಸುಖ ದಾಯಕವಾಗಿರುವದು.

ಮುಗಿಯಿತು

ಭರ್ತೃಹರಿಯ ಶತಕಗಳು ಮುಗಿದವು.



# ರಾಜಾ ಭರ್ತೃಹರಿ

( ಜೀವನ ಚರಿತ್ರೆ )

"ಶಕವಧೂ ವೈಧವ್ಯ ದೀಕ್ಷಾಗುರು"

—ಶಕರ ಪತ್ನಿಯರಿಗೆ ವೈಧವ್ಯದ ದೀಕ್ಷೆಯನ್ನು ಕೊಡುವಂತಹ ಗುರು.

—ಕೃತವೀರ ವಿಕ್ರಮ

# ಹಿನ್ನೆಲೆ

ಭರ್ತೃಹರಿಯ ಜೀವನ ಚರಿತ್ರೆಯನ್ನು ಬರೆಯುವ ಮೊದಲು ಆ ಸಮಯದಲ್ಲಿ ಭಾರತದ ಪರಿಸ್ಥಿತಿ ಹೇಗಿದ್ದಿತು ಎಂಬುದನ್ನು ವಿಚಾರ ಮಾಡುವದೊಳಿತು. ಏಕೆಂದರೆ ಇಂದು ಬಹಳಷ್ಟು ಜನ ಗ್ರಂಥಕಾರರು ಭರ್ತೃಹರಿಯ ಜೀವನ ಚರಿತ್ರೆಯನ್ನು—ನಾಟಕಗಳನ್ನು ಕೂಡ—ಬರೆದಿದ್ದು ಅವರೆಲ್ಲ ಒಂದಿಲ್ಲೊಂದು ರೀತಿಯಿಂದ ತಿಳಿದೊ, ತಿಳಿಯದೆಯೋ ಭರ್ತೃಹರಿಗೆ ಅಪಚಾರವನ್ನು ಮಾಡುತ್ತಲೇ ಬಂದಿದ್ದಾರೆ. ಅವನ ಕಿರಿಯ ರಾಣಿ ಪಿಂಗಳೆಯನಂತೂ ವೇಶ್ಯೆಗಿಂತ ಕೀಳಾಗಿ ಚಿತ್ರಿಸಿದ್ದಾರೆ.

ನಾಟಕ ಕಾರನೇ ಆಗಲಿ, ಚರಿತ್ರೆ ಕಾರನೇ ಆಗಲಿ ಯಾವುನೊಬ್ಬ ಪ್ರಾಚೀನ ಪುರುಷನ ಬಗ್ಗೆ ಇಲ್ಲವೆ ಮಹಿಳೆಯ ಬಗ್ಗೆ ಬರೆಯುವಾಗ ಅವರ ಅಂದರೆ ತಾವು ಬರೆಯಲಿರುವವರ ಕಾಲವು ಯಾವುದು? ಆಗಿನ ಪರಿಸ್ಥಿತಿಯು ಹೇಗಿದ್ದಿತು ? ಎಂಬುದನ್ನೆಲ್ಲ ಆಳವಾಗಿ ಅಭ್ಯಾಸ ಮಾಡಬೇಕಾಗುತ್ತದೆ. ಆದರೆ ಇಂದು ನಮ್ಮಲ್ಲಿ ಆ ಬಗೆಯ ರಚನೆಗಳು ಬಹು ಕಡಿಮೆ ಎನ್ನಬೇಕು. ಒಂದು ದೃಷ್ಟಿಯಿಂದ ಇಲ್ಲವೇ ಇಲ್ಲವೆಂದರೂ ನಡೆದೀತು. ಯಾರಾದರೊಬ್ಬರು ಯಾವುದೊಂದರ ಆಧಾರದಿಂದಲೋ, ಕಲ್ಪನೆಯಿಂದಲೋ ಒಂದು ಕತೆಯನ್ನೊ, ನಾಟಕವನ್ನೋ ರಚಿಸಿಬಿಟ್ಟರಾಯಿತು. ಅದೇ ಆಧಾರದ ಮೇಲೆ ಉಳಿದವರೂ ರಚಿಸಿಬಿಡುತ್ತಾರೆ. ಅವನು ಬರೆದಿರುವದು ಎಷ್ಟರ ಮಟ್ಟಿಗೆ ನಿಜವಿದೆ, ಎಂಬುದನ್ನು ಪರಿಶೀಲಿಸುವ ಗೋಜಿಗೇ ಅವರು ಹೋಗುವದಿಲ್ಲ.

ಪ್ರಸ್ತುತ ಭರ್ತೃಹರಿಯ ಬಗೆಗೂ ಇದೇ ಬಗೆಯ ಅಪಚಾರವಾಗಿರುವದು. ಉತ್ತರ ಭಾರತದ ಯಾರೋ ಒಬ್ಬರು ಭರ್ತೃಹರಿಯ ಅವನದೇ ಆದ ನೀತಿ ಶತಕದ ಎರಡನೆಯ ಶ್ಲೋಕದ ಆಧಾರದಿಂದ ಅವನ ಚರಿತ್ರೆಯನ್ನು ಬರೆದಿರುವರು. ಅದನ್ನೇ ಆಧಾರವಾಗಿರಿಸಿಕೊಂಡು ಬಹು ಜನರು

ಆ ಬಗ್ಗೆ ಬರೆದಿದ್ದಾರೆ. ಭರ್ತೃಹರಿಯ ಆ ಶ್ಲೋಕವು ಈ ರೀತಿಯಾಗಿರುವದು.

ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ
ಸಾಪ್ಯನ್ಯಮಿಚ್ಛತಿ ಜನಂ ಸ ಜನೋಽನ್ಯ ಸಕ್ತಃ।
ಅಸ್ಮತ್ಕೃತೇ ಚ ಪರಿತುಷ್ಯತಿ ಕಾಚಿದನ್ಯಾ
ಧಿಕ್ ತಾಂ ಚತಂ ಚ ಮದನಂಚ ಇಮಾಂಚ ಮಾಂಚ ॥

"ನಾನು ನಿರಂತರವೂ ಯಾವ ಪ್ರಿಯತಮೆಯ ಚಿಂತನೆಯಲ್ಲಿ ಮಗ್ನನಾಗಿರುವನೋ, ಅವಳು ನನ್ನಿಂದ ವಿರಕ್ತಳಾಗಿದ್ದು ಬೇರೊಬ್ಬ ಪುರುಷನನ್ನು ಇಚ್ಛಿಸುತ್ತಾಳೆ. ಆ ಅನ್ಯ ಪುರುಷನು ಕೂಡ—ಅವಳನ್ನು ಬಿಟ್ಟು-ಬೇರೊಬ್ಬ ವನಿತೆಯಲ್ಲಿ ಆಸಕ್ತನಾಗಿದ್ದು, ಅವಳು—ಆ ಬೇರೊಬ್ಬಳು—ನನಗಾಗಿ ಪ್ರಾಣ ಕೊಡಲು ಸಿದ್ಧಳಾಗಿರುವಳು..........."

ಈ ಶ್ಲೋಕದ ಆಧಾರದ ಮೇಲೆಯೆ ಬಹಳಷ್ಟು ಜನರು ಭರ್ತೃಹಯರಿ ಕಥೆಯನ್ನು ರಚಿಸಿದ್ದಾರೆ. ಅಂದರೆ—

ಭರ್ತೃಹರಿಯ ಕಿರಿಯರಾಣಿ ಪಿಂಗಳೆಯು ಓರ್ವ ಕುದುರೆ ಸವಾರನನ್ನು ಪ್ರೀತಿಸುತ್ತಿದ್ದಳು. ಆ ಸವಾರನು ಓರ್ವ ವೇಶ್ಯೆಯಲ್ಲಿ ಅನುರಕ್ತನಾಗಿದ್ದ. ವೇಶ್ಯೆಯು ಅರಸನಾದ ಭರ್ತೃಹರಿಗಾಗಿ ಪ್ರಾಣವನ್ನೂ ಕೂಡಲೂ ಸಿದ್ಧಳಿದ್ದಳು. ಓರ್ವ ಸಿದ್ಧ ಪುರುಷನು ಭರ್ತೃಹರಿಗೆ ಒಂದು ಅಮರ ಫಲವನ್ನು ಕೊಡುತ್ತಾನೆ. ಅವನದನ್ನು ತನ್ನ ಪ್ರೀತಿಯ ಮಡದಿ ಪಿಂಗಳೆಗೆ ಕೊಡುತ್ತಾನೆ. ಪಿಂಗಳೆಯು ತನ್ನವನಾದ ಕುದುರೆ ಸವಾರನಿಗೆ ಕೊಡುತ್ತಾಳೆ. ಆ ಕುದುರೆ ಸವಾರನು ತನ್ನ ಪ್ರೇಯಸಿಯಾದ ವೇಶ್ಯೆಗೆ ಕೊಡುತ್ತಾನೆ. ವೇಶ್ಯೆಯು "ಇಂಥ ಅಮರ ಫಲವು ನನ್ನಂಥವಳಿಗೆ ಯೋಗ್ಯವಲ್ಲ. ಇದು ಅರಸನಾದ ಭರ್ತೃಹರಿಗೆ ಸಲ್ಲತಕ್ಕದ್ದು" ಎಂದು ಯೋಚಿಸಿ ಭರ್ತೃಹರಿಗೆ ಕೊಡುತ್ತಾಳೆ.

ಈ ರೀತಿಯಾಗಿ ಭರ್ತೃಹರಿಯು ಪಿಂಗಳೆಗೆ ಕೊಟ್ಟ ಅಮರ ಫಲವು ಅಷ್ಟೊಂದು ಪ್ರವಾಸ ಮಾಡಿ ಅರ್ಥಾತ್ ಕೈಯಿಂದ ಕೈಗೆ ಬದಲಾಗುತ್ತ ಮತ್ತೆ ಅವನಿಗೇ—ಭರ್ತೃಹರಿಗೇ—ಬಂದು ಸೇರುತ್ತದೆ. ಆಗ ಅವನಿಗೆ ಆಶ್ಚರ್ಯವಾಗಿ ಆ ಬಗ್ಗೆ ವಿಚಾರಣೆ ನಡೆಸುತ್ತಾನೆ. ತತ್ಪರಿಣಾಮವಾಗಿ ತನ್ನ ಪ್ರೇಮದ ಪತ್ನಿ ಪಿಂಗಳೆಯು ವ್ಯಭಿಚಾರಿಣಿಯೆಂಬುದು ಸಿದ್ಧವಾಗುವದು. ಆಗ ಅವನಿಗೆ ಜೀವನದಲ್ಲಿಯೇ ಜಿಗುಪ್ಸೆಹೊಂದಿ ವೈರಾಗ್ಯವನ್ನು ತಾಳಿ ಗೋರಕ್ಷ ಪಂಥವನ್ನು ಸೇರುವನು. ಇದು ಇಂದು ಎಲ್ಲೆಲ್ಲಿಯೂ ಕಂಡುಬರುತ್ತಿರುವ ಭರ್ತೃಹರಿಯ ಕಥೆಯಾಗಿದೆ.

ಅವನ—ಭರ್ತೃಹರಿಯ—ಒಂದು ಶ್ಲೋಕದ ಆಧಾರದ ಮೇಲೆ ಅವನ ಕಥೆಯನ್ನು ರಚಿಸಲು ಪ್ರಯತ್ನಿಸುವವರು ಅವನ ಇನ್ನುಳಿದ ಶ್ಲೋಕಗಳತ್ತ ಗಮನ ನೀಯದಿರುವದು ನನಗೆ ಆಶ್ಚರ್ಯವನ್ನುಂಟು ಮಾಡುತ್ತಿದೆ. ಅದೇ ಭರ್ತೃಹರಿಯು ಶೃಂಗಾರ ಶತಕದ ಹದಿನೈದನೆಯ ಶ್ಲೋಕದಲ್ಲಿ;

ತಸ್ಯಾಃಸ್ತನೌ ಯದಿ ಘನೌ ಜಘನಂ ವಿಹಾರಿ
ವಕ್ತ್ರಂ ಚ ಚಾರು ತವ ಚಿತ್ತ ಕಿಮಾಕುಲತ್ವಂ ।
ಪುಣ್ಯಂ ಕುರುಷ್ವ ಯದಿ ತೇಷು ತವಾಸ್ತಿ ವಾಂಛಾ
ಪುಣ್ಯೈರ್ವಿನಾ ನ ಹಿ ಭವಂತಿ ಸಮೀಹಿತಾರ್ಥಾ ॥

"ಓ, ಚಿತ್ತವೆ ! ಆ ತರುಣ ಸ್ತ್ರೀಯ ಮಾಂಸ ಭರಿತ ಪುಷ್ಟಸ್ತನಗಳು, ಮನೋಹರವಾದ ತೊಡೆಗಳು ಹಾಗು ಅವಳ ಸುಂದರವಾದ ಮುಖವನ್ನು ನೋಡಿ ಏತಕ್ಕೆ ವ್ಯಾಕುಲಗೊಳ್ಳುವೆ ? ಒಂದು ವೇಳೆ ನೀನು ಅವಳ ಕಠೋರ ಸ್ತನಗಳಿಂದ ಆನಂದ ಪಡೆಯಬೇಕೆಂದಿದ್ದರೆ ಮೊದಲು ಪುಣ್ಯವನ್ನು ಮಾಡು ಏಕೆಂದರೆ ಪುಣ್ಯವನ್ನುಮಾಡದೆ ಮನೋರಥವು ಪೂರ್ಣವಾಗುವದಿಲ್ಲ. ಅಂದರೆ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸುತ್ತಿರುವ ಹರಿಣಾಕ್ಷಿಯರಾದ ಸುಂದರಿಯ ಜೊಂದಿಗೆ ಸ್ವರ್ಗಸುಖವನ್ನು ಅನುಭವಿಸಬೇಕಾದರೆ ಮೊದಲು ಸಾಕಷ್ಟು ಪುಣ್ಯವನ್ನು ಮಾಡಿರಬೇಕು. ಏಕೆಂದರೆ ಅಂಥವರು ಎಲ್ಲರಿಗೂ ಲಭ್ಯವಾಗುವದಿಲ್ಲ. ಅರ್ಥಾತ್ ಅಂಥವರು ಸುಲಭ ಸಾಧ್ಯರಲ್ಲ.

—ಎಂದು ಹೇಳಿರುವನು. ಈ ಬಗೆಯ ಇನ್ನೂ ಎಷ್ಟೋ ಶ್ಲೋಕಗಳು ಅವನ ಶತಕಗಳಲ್ಲಿ ಕಂಡು ಬರುವವು. (ಉಳಿದ ಶ್ಲೋಕಗಳೂ ಇದೇ ಗ್ರಂಥ ದಲ್ಲಿವೆ. ನೋಡಿಕೊಳ್ಳಬಹುದು.) ಇವುಗಳಿಂದ ಒಂದು ಮಾತು ಸಿದ್ಧವಾಗ ಬಹುದು. ಅಂದರೆ ತನ್ನ ಹೆಂಡತಿಯು ಇನ್ನೊಬ್ಬನೊಂದಿಗೆ ಅನೈತಿಕ ಸಂಪ ರ್ಕವನ್ನಿರಿಸಿಕೊಂಡುದು ಕಂಡು ಬಂದಾಗ, ಹೇಸಿಕೊಂಡು ವೈರಾಗ್ಯ ಭಾವ ನೆಯನ್ನು ತಾಳುವಷ್ಟು ಭರ್ತೃಹರಿಯು ಹೀನ ಮನೋವೃತ್ತಿಯವನಾಗಿರ ಲಿಲ್ಲ.

ಪಿಂಗಳೆಯು ಅಪೂರ್ವ ಸುಂದರಿ. ಜೊತೆಗೆ ರಾಜಕನ್ಯೆ. ಅಲ್ಲದೆ ಭರ್ತೃ ಹರಿಯ ನಚ್ಚಿನ ರಾಣಿ. ಅಂಥವಳು ಓರ್ವ ಕುದುರೆಯ ಸವಾರನೊಂದಿಗೆ ಸಂಬಂಧವನ್ನಿರಿಸಿಕೊಂಡಿರುವದು ತಿಳಿದು ಬಂದಾಗ ಅವನು-ಭರ್ತೃಹರಿಯು —ಎಲ್ಲವನ್ನೂ ತೊರೆದು ಸನ್ಯಾಸಿಯಾಗಿದ್ದಾನೆ; ಎಂದು ಈ ವರೆಗೆ ಭರ್ತೃಹರಿಯ ಕಥೆಯನ್ನು—ನಾಟಕಗಳನ್ನು—ಬರೆದವರ ಅಭಿಪ್ರಾಯ ವಾಗಿದೆ.

ಆದರೆ ಭರ್ತೃಹರಿಯು ಈಗಿನ ಅವನ ಚರಿತ್ರೆಯನ್ನು—ಬರೆದಂಥ ಮಹನೀಯರು ತಿಳಿದು ಕೊಂಡಷ್ಟು ಮೂರ್ಖನಾಗಿರಲಿಲ್ಲ. ಅವನು ಮಹಾ ಮೇಧಾವಿ, ಶೃಂಗಾರ ಹಾಗು ನೀತಿ ಶತಕಗಳಂತಹ ಆಣಿ ಮುತ್ತುಗಳನ್ನು ರಚಿಸಿದ ಘನ ವಿದ್ವಾಂಸ. ಹೆಣ್ಣು ಏನೆಂಬುದನ್ನು ಅರಿತುಕೊಂಡ ಕಾಮಶಾಸ್ತ್ರ ಪ್ರವೀಣ- ಇಂಥವನು ಹಾಗಾಗುತ್ತಾನೆಂದರೆ ಯಾರಾದರೂ ನಕ್ಕಾರು

ಅಲ್ಲದೆ ಪಿಂಗಳೆಯು ಕೂಡ ಇಂದಿನ ಚರಿತ್ರೆಕಾರರು—ನಾಟಕಕಾರರು ನಿರ್ಮಿಸಿದಂತಹ ಬಾಜಾರ ಬಸವಿಯಲ್ಲ. ಅವಳೂ ಓರ್ವ ರಾಜಕನ್ಯೆ. ಮಹಾಮೇಧಾವಿ, ಘನ ವಿದ್ವಾಂಸ ಹಾಗು ಚಕ್ರವರ್ತಿಯ ಸೋದರ ಭರ್ತೃ ಹರಿಯ ಪತ್ನಿ. ಅಂಥವಳು ಓರ್ವ ಕುದುರೇ ಸವಾರನನ್ನು ಪ್ರೀತಿಸುತ್ತಾ ಳೆಂದರೆ ಹೆಣ್ಣು ಜಾತಿಗೇ ಅವಮಾನ, ಕೆಲ ನಾಟಕಕಾರರಂತೂ ಪಿಂಗಳೆ ಯನ್ನು ಬೀದಿಯ ಸೂಳೆಗಿಂತಲೂ ಕಡೆಯಾಗಿ ಚಿತ್ರಿಸಿದ್ದಾರೆ. ಅವುಗಳನ್ನೆಲ್ಲ

ಪರಿಶೀಲಿಸಿದಾಗ ಇವರೆಲ್ಲ ಭರ್ತೃಹರಿ ಹಾಗು ಪಿಂಗಳೆಯರ ಕಾಲವನ್ನು, ಆಗಿನ ವಾತಾವರಣವನ್ನು ಚನ್ನಾಗಿ ಅಭ್ಯಾಸ ಮಾಡಿಲ್ಲವೆಂಬುದು ವ್ಯಕ್ತವಾಗುವದು. ಒಂದು ವೇಳೆ ಅವರು ಆಗಿನ ಪರಿಸ್ಥಿತಿಯನ್ನು ಚನ್ನಾಗಿ ಅಭ್ಯಸಿಸಿದ್ದರೆ ನಿಜಕ್ಕೂ ಈ ಬಗೆಯ ದ್ರೋಹ ಅವರಿಂದ-ಚರಿತ್ರೆಕಾರರು ಹಾಗು ನಾಟಕಕಾರರಿಂದ—ಖಂಡಿತವಾಗಿಯೂ ಆಗುತ್ತಿರಲಿಲ್ಲ. ಅಂತೆಯೇ ಆಗಿನ ಪರಿಸ್ಥಿತಿಯನ್ನು ವಿವರಿಸುವದು ಇಲ್ಲಿ ಅವಶ್ಯಕವಾಗಿದೆ.

§ § §

# ಆಗಿನ ಪರಿಸ್ಥಿತಿ

ಮಾಳವದ ಕೃತವೀರ ವಿಕ್ರಮಾದಿತ್ಯನು ಕ್ರಿಸ್ತ ಶಕಕ್ಕೆ ಪೂರ್ವದಲ್ಲಿಯೇ ಇದ್ದನು. ಅರ್ಥಾತ್ ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಮಾಳವ ರಾಜ್ಯವನ್ನಾಳುತ್ತಿದ್ದನು. ನ್ಯಾಯಶೀಲನೂ, ಮಹಾದಾನಿಯೂ ಆದ ಅವನ ಶಕವು ಕ್ರಿ. ಶ. ಪೂರ್ವ ೫೭ (B- C.)ರಿಂದ ಪ್ರಾರಂಭವಾಗಿದೆ.

ಕೆಲ ಸಂಶೋಧಕರು ವಿಕ್ರಮಾದಿತ್ಯನ ಅಸ್ತಿತ್ವದ ಬಗೆಗೇ ಸಂಶಯವನ್ನು ತಾಳಿಸಿದ್ದಾರೆ. ಏಕೆಂದರೆ ಕೆಲ ಪುರಾಣಗಳಲ್ಲಿ ಅವನ—ವಿಕ್ರಮಾದಿತ್ಯನ—ಬಗೆಗೆ—ಉಲ್ಲೇಖವಿಲ್ಲದಿರುವದೇ ಆ ಸಂಶಯಕ್ಕೆ ಕಾರಣವಾಗಿರುವದು. ಆದರೂ ಬೇರೆ ರೀತಿಯಿಂದ ವಿಕ್ರಮಾದಿತ್ಯನ ಅಸ್ತಿತ್ವವನ್ನು ಎತ್ತಿ ತೋರಿಸುವ ನೂರೆಂಟು ಆಧಾರಗಳು ಸಿಕ್ಕುತ್ತವೆ.

ಮೊದಲನೆಯ ಶತಮಾನದಲ್ಲಿದ್ದ ಶಾತವಾಹನ ಸಮ್ರಾಟನಾದ 'ಹಾಲ'ನು ವಿಕ್ರಮಾದಿತ್ಯನ ಪರಮಪೂಜ್ಯ ಮಾನಪೂರ್ಣ ವರ್ಣನೆಯನ್ನು "ಗಾಥಾಸಪ್ತತಿ"ಯಲ್ಲಿ ಬಹು ರಸವತ್ತಾಗಿ ಮಾಡಿರುವನು. ಅಲ್ಲದೆ ಮೇರುತುಂಗಾಚಾರ್ಯ ವಿರಚಿತ 'ಪಟಾದಲಿ' ಯಲ್ಲಿಯೂ ವಿಕ್ರಮಾದಿತ್ಯನ ಬಗೆಗೆ ಪ್ರಾಮಾಣಿಕ ವರ್ಣನೆಯಿದೆ. ಅಂದರೆ—

...........ನಭೋವಾಹನನ ನಂತರ ಗರ್ದಭಿಲ್ಲ'ನು ಹದಿಮೂರು ವರ್ಷಗಳ ವರೆಗೆ ರಾಜ್ಯವನ್ನಾಳಿದನು. ಅನಂತರ ಉಜ್ಜಯಿನಿಯಲ್ಲಿ ಅರವತ್ತು ವರುಷಗಳ ವರೆಗೆ 'ಶಕ'ರ ರಾಜ್ಯವಿದ್ದಿತು.(ಆದರೆ ಶಕರ ಆಳಿಕೆಯ ಅವಧಿಯು ಹದಿನಾಲ್ಕು ವರ್ಷಗಳೆಂದು ಬೇರೊಂದು ಕಡೆಗೆ ಹೇಳಲಾಗಿದೆ.) ಗರ್ದಭಿಲ್ಲನ ಮಗನೇ ವಿಕ್ರಮನು...." ಆದರೆ—

'ಕಥಾಸರಿತ್ಸಾಗರ'ದಲ್ಲಿ ವಿಕ್ರಮನ ತಂದೆಯು ಮಹೇಂದ್ರಾದಿತ್ಯ ಹಾಗು ತಾಯಿ ಸೌಂದರ್ಯದರ್ಶನಾ ಎಂದು ಹೇಳಲಾಗಿದೆ. ಅವರೀ

ರ್ಗರೂ ಶಿವೋಪಾಸಕರು. ಶಿವನ ಆರಾಧನೆಯಿಂದಲೇ ಆ ದಂಪತಿಗಳು ಮಗುವನ್ನು ಪಡೆದರು. ಅವನ ಹೆಸರು ವಿಕ್ರಮಾದಿತ್ಯ. ಉಪನಾಮವು ವಿಕ್ರಮಶೀಲ. ಅವರ ಧ್ವಜವು 'ಅಪರಾಜಿತ' ವಾಗಿದ್ದಿತು ಅಂತೆಯೇ ವಿಕ್ರಮಾದಿತ್ಯನು "ಶಕವಧು ವೈಧವ್ಯ ದೀಕ್ಷಾಗುರು" ಅರ್ಥಾತ್ ಶಕರ ಪತ್ನಿಯರಿಗೆ ವೈಧವ್ಯದ ದೀಕ್ಷೆಯನ್ನು ಕೊಡುವಂತಹ ಗುರು ಎಂದು ಕರೆಯಿಸಿಕೊಳ್ಳುತ್ತಿದ್ದನು.

ಗುಣಾಢ್ಯನ ಕೃತಿಯಲ್ಲಿಯೂ ವಿಕ್ರಮನ ಬಗೆಗೆ ಉಲ್ಲೇಖವಿದೆ. ಹಾಗು ಕ್ಷೇಮೇಂದ್ರನ "ಬ್ರಹತ್ಕಥಾ ಮಂಜರಿ"ಯಲ್ಲಿಯೂ ಬರುವದು. ಕಲ್ಪ ಸೂತ್ರ'ವೆಂಬ ಗ್ರಂಥದಲ್ಲಿ—

"ಗುರ್ಜರ ತಾಮ್ರಲಿಪ್ತ ಋಷಿಯ ಕನ್ಯೆ ಮದನ ರೇಖೆಯೊಂದಿಗೆ ಗಂಧರ್ವಸೇನನ ವಿವಾಹವಾಯಿತು. ಈ ದಂಪತಿಗಳ ಉದರದಿಂದಲೇ ವಿಕ್ರಮಾದಿತ್ಯನು ಜನಿಸಿದನು...."ಎಂದು ಹೇಳಲಾಗಿದೆ. ಹಾಗು ಅದೇ "ಕಲ್ಪಸೂತ್ರ"ದ ಪ್ರಕಾರ—

"ವಿಕ್ರಮನು ಪ್ರಜೆಗಳ ಋಣವನ್ನು ಸರಿಯಾಗಿ ತೀರಿಸಿದನು. ಇವನ-ವಿಕ್ರಮಾದಿತ್ಯನ- ಹೆಸರಿನ ಸಂವತ್ಸರವೂ ಪ್ರಾರಂಭವಾಯಿತು. ಇವನು ೫೭ (B. C.) ರಲ್ಲಿ ಶಕರನ್ನು ಸೋಲಿಸಿದನು. ಹಾಗು ೧೧೧ ವರ್ಷಗಳ ವರೆಗೆ ರಾಜ್ಯಭಾರ ಮಾಡಿದನು...."

ವಿಕ್ರಮಾದಿತ್ಯನ ಕಾಲದಲ್ಲಿ ಉಜ್ಜಯಿನಿಯನ್ನು ವಿಕ್ರಮಪುರ ಮತ್ತು ವಿಕ್ರಮ ಪಟ್ಟಣಗಳೆಂದು ಕರೆಯುತ್ತಿದ್ದರೆಂದೂ ನಾಲ್ಕಾರು ಕಡೆಗೆ ಉಲ್ಲೇಖಗಳು ದೊರೆಯುತ್ತವೆ.

ಹದಿಮೂರನೆಯ ಶತಮಾನದಲ್ಲಿ ಬರೆಯಲ್ಪಟ್ಟ "ಪ್ರಭಾವಕ ಚರಿತ್ರ" ವೆಂಬ ಜೈನ ಗ್ರಂಥದಲ್ಲಿ "ಕಾಲಕಾ ಚಾರ್ಯನ ಮಿತ್ರ ಶಾಹೀ ಪತಿಯಿಂದ ಗರ್ದಭಿಲ್ಲನು ಸೋಲಿಸಲ್ಪಟ್ಟನು" ಎಂದು ಹೇಳಲಾಗಿದೆ. ಕ್ರಿಸ್ತ ಪೂರ್ವ (3. C.) ರಲ್ಲಿ ಶಕರು ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದರು. ಅವರು

ಶಕರು—ಸುಮಾರು ಹದಿನಾಲ್ಕು ವರ್ಷಗಳ ವರೆಗೆ ಆ ನಗರದಲ್ಲಿ—ಉಜ್ಜ ಯಿನಿಯಲ್ಲಿ—ಶಾಸನವನ್ನು ನಡೆಯಿಸಿದರು. ಆದರೆ ವಿಕ್ರಮನ ಆಳಿಕೆಯ ಬಗ್ಗೆ ಬೌದ್ಧ ಹಾಗು ಪುರಾಣ ಗ್ರಂಥಗಳು ಮಾತ್ರ ಮೌನವಾಗಿರುವವು.

ಶಕರ ಆಳಿಕೆಯು ಕ್ರೂರತನ ಹಾಗು ಕಠೋರತೆಗಳಿಂದ ಕೂಡಿತ್ತೆಂದು ಐತಿಹಾಸಿಕ ಗ್ರಂಥಗಳು ಸಾರಿ ಹೇಳುತ್ತವೆ. ಅವರು—ಶಕರು—ಬೋಲಿನ ಘಟ್ಟದ ಮಾರ್ಗವಾಗಿ ಸಿಂಧದೊಳಗಿಂದ ಭಾರತಕ್ಕೆ ಬಂದರು. ಕ್ರಿಸ್ತ ಪೂರ್ವ (B. C.) ೧೨೦ ರಲ್ಲಿ ಮಾವುವಸನೆಂಬ ಶಕರಾಜನು ತಕ್ಷಶಿಲೆಯಲ್ಲಿ ರಾಜ್ಯ ವಾಳುತ್ತಿದ್ದನು. ಅನಂತರ ಅಲ್ಲಿ—ತಕ್ಷ ಶಿಲೆಯಲ್ಲಿ—ಕುಲಸಕ ವಂಶದ ಮಹಾ ಕ್ಷತ್ರಪ ತಿಲಕ ಮತ್ತು ಪತಿಕರ ಪ್ರಾಬಲ್ಯವು ಹೆಚ್ಚಾಯಿತು. ಅರ್ಥಾತ್ ಅವರ ಕೈ ಮೇಲಾಯಿತು.

ಶಕರ ಎರಡನೆಯ ಕೇಂದ್ರ ಸ್ಥಾನವು ಮಥುರೆಯಾಗಿತ್ತು. ಅಲ್ಲಿ ಖರ ಪೊಸ, ಹಗಾಮ ಹಾಗು ಹಗಾಮುಸ ಕ್ಷತ್ರಪರೆಂಬವರು ಮುಖ್ಯರಾಗಿದ್ದರು. ರಾಜಬುಲ ಮತ್ತು ಶೋಡಾಸ ಮಹಾಕ್ಷತ್ರಪರು ಅಲ್ಲಿಯ ಮೂಲ ಪುರು ಷರು. ಖರಹೋಸನು ರಾಜಬುಲನ ಮಗನಾಗಿದ್ದು ಅವನಿಗೊಬ್ಬ ಸೋದ ರನೂ "ಹನ"ಳೆಂಬ ಸೋದರಿಯೂ ಇದ್ದರು. (B. C.) ೧೦೦ ರಲ್ಲಿ ಅವರು ಮಥುರೆಯಲ್ಲಿ ಆಳುತ್ತಿದ್ದರು. ಅನಂತರ ೮೮ B. C. ಯಲ್ಲಿ ಶಕರು ಬೈಕ್ಟ್ರಿಯಾನರೇಶ ಹಾಗು ಮಿಥ್ರ ಡೇಟಸ್‌ರಿಂದ ಸ್ವತಂತ್ರರಾದರು.

ಸಿಂಧದಿಂದ ಭಾರತದೊಳಗೆ ಪ್ರವೇಶಿಸಿದ ಎರಡು ತಂಡಗಳು ಮೇಲೆ ಹೇಳಿದ ರೀತಿಯಲ್ಲಿ ಬೇರೆ ಬೇರೆ ಕಡೆಗೆ ಹೊಂದಿಕೊಂಡರೆಂದು ಹೇಳಿಯಾಯಿ ತಷ್ಟೆ. ಅದೇ ರೀತಿಯಾಗಿ ಮೂರನೆಯ ಗುಂಪು ಸೌರಾಷ್ಟ್ರದ ಕಡೆಗೆ ತಿರು ಗಿತು. ಅಲ್ಲಿ-ಸೌರಾಷ್ಟ್ರದಲ್ಲಿ—ಭೂಮಕನೆಂಬವನ ಪ್ರಾಮುಖ್ಯತೆಯಿದ್ದಿತು. ಮಥುರೆಯ ಶಕರ ಆಡಳಿತವು ಉತ್ತರ ಮಾಳವಾದ ವರೆಗೆ ಇದ್ದಿತು. ಅಲ್ಲಿಯು ಖರಪೋಸನ ಜೊತೆಗೇ ವಿಕ್ರಮಾದಿತ್ಯನು ಯುದ್ಧ ಮಾಡಿ ಅವ ನನ್ನು ಸೋಲಿಸಿದನು.

ರಾಜ ಬುಲನ ರಾಣಿ "ನಂದಿ ಶಿವಯಸೆ"ಯು ಬೌದ್ಧ ಧರ್ಮದವಳಾಗಿದ್ದಳು. ಅವಳು ಒಂದು ಬೌದ್ಧ ಸ್ತೂಪವನ್ನು ಕಟ್ಟಿಸಿದಳೆಂದು ಮಥುರೆಯದೊಂದು ಸಿಂಹದ ಮೂರ್ತಿಯಲ್ಲಿ ಉಲ್ಲೇಖವಿದೆ. ಆ ರಾಣಿಯ ತಂದೆಯ ಹೆಸರು "ಆಯುಸಿ ಕೋಮುಸಾ" ಎಂದಿದ್ದು ತಾಯಿಯದು "ಅಬೂಲಿ" ಯಾಗಿತ್ತು ಶಕರ ಕಾಲದಲ್ಲಿ ರಚಿತವಾದ ಅವರ ಮೂರ್ತಿಗಳಿದ್ದು ಅವುಗಳಿಗೆ ಮೀಸೆಗಳಾಗಲಿ, ಗಡ್ಡಗಳಾಗಲಿ ಕಂಡು ಬರುವದಿಲ್ಲ. ರಾಜ ಬುಲನು ತನ್ನ ಹೆಸರಿನ ನಾಣ್ಯಗಳನ್ನು ಚಲಾವಣೆಯಲ್ಲಿ ತಂದನು. ಅವುಗಳಲ್ಲಿ ಅಂದರೆ ಆ ನಾಣ್ಯಗಳ ಮೇಲೆ "ಅಪುತಿ ಹತ ಜವುಲ ಕ್ಷತ್ರಪಸ ರಾಜ ಬುಲನ" ಎಂದು ಬರೆಯಲಾಗಿದೆ- ಅವನು -ರಾಜ ಬುಲನು— ಭೂಮುಕನ ಸಹಾಯದಿಂದ ಗರ್ದಭಿಲನನ್ನು ಗೆದ್ದನು. "ಜವುಲ" ಶಬ್ದದ ಅರ್ಥವು ವಿಜಯಿ ಎಂಬುದಾಗಿದೆ.

ತಕ್ಷಶಿಲೆಯ ಶಕರು ಕುಸುಲಕ ವಂಶೀಯರೆಂದು ಕರೆಯಿಸಿಕೊಳ್ಳುತ್ತಾರೆ. ಅವರ ಹೆಸರುಗಳು ಕ್ಷತ್ರಪ ತಿಲಕ, ಕ್ಷತ್ರ ಪ ಪತಿಕ ಎಂದಾಗಿದೆ. ಇವರೀರ್ವರೂ ಬೌದ್ಧರಾಗಿದ್ದರು. ಈ ಉಲ್ಲೇಖನವು ತಕ್ಷಶಿಲೆಯಲ್ಲಿ ಕ್ರಿಸ್ತಪೂರ್ವ (B. C.) ೭೮ ರ ಪತಿಕನ ತಾಮ್ರಪತ್ರದಲ್ಲಿರುವದು.

ಮಥುರೆಯ ಶಕರು ಕುನಿಂದರೊಂದಿಗೂ ಯುದ್ಧ ಮಾಡಿದರು. ಕುನಿಂದ ರಾಜ್ಯವು ಆಗ "ಗಣ ರಾಜ್ಯ"ವಾಗಿತ್ತು. ಅದು ಈಗಿನ ಕುರ ಕ್ಷೇತ್ರದಿಂದ ಅಂಬಾಳಾದ ವರೆಗಿನ ಪ್ರದೇಶವಾಗಿತ್ತು. ಈ ಗಣರಾಜ್ಯವು ಶಕರಿಂದಲೇ ಹಾಳಾಯಿತೆಂದು ಗಾರ್ಗಿ ಸಂಹಿತೆಯ ಯುಗ ಪುರಾಣದಿಂದ ಗೊತ್ತಾಗುವದು.

ಸಿಂಧದಿಂದ ಮಥುರೆ. ಸೌರಾಷ್ಟ್ರ ಹಾಗು ತಕ್ಷಶಿಲೆಗಳ ವರೆಗೆ ಹಬ್ಬಿದ ಶಕರ ಬಗ್ಗೆ ಪೇರಿಪ್ಲಸ ದಲ್ಲಿಯೂ ಕೂಡ—

"ಸಿಂಧವು ಶಕರ ಮೂಲಸ್ಥಾನ ವೇನೋ ಎಂಬಂತೆ ಭಾಸವಾಗುತ್ತಿತ್ತು. ಶಕರು ಸೌರಾಷ್ಟ್ರದಲ್ಲಿ ವೃಷ್ಣಿ ಹಾಗು ಕುಕೂರವಂಶದ ಕ್ಷತ್ರಿಯ ಅರಸರನ್ನು ಸೋಲಿಸಿದರೆಂದು ಉಲ್ಲೇಖಿಸಲಾಗಿರುವದು.

ಮಥುರೆಯ ಹಿಂದೂ ಅರಸರ ನಾಣ್ಯಗಳೂ ದೊರೆತಿದ್ದು ಅವುಗಳಲ್ಲಿ

ಹೇಸರುಗಳು ಬಹುತರವಾಗಿ 'ಮಿತ್ರ' ಶಬ್ದದಿಂದ ಮುಕ್ತಾಯ ಗೊಳ್ಳುವವು. ಅವುಗಳ ಆಧಾರದಿಂದ ಮಿತ್ರರ ರಾಜ್ಯವು ಮಥುರೆಯಲ್ಲಿ ಸುಮಾರು ಒಂದು ನೂರು ವರುಷಗಳ ವರೆಗೆ ಇದ್ದಿತು. (ಅಂದರೆ ಆ ನಾಣ್ಯಗಳ, ಪುಷ್ಯ ಮಿತ್ರ ಶುಂಗವಂಶದ ವಂಶಧರವೆಂಬುದು ಗೊತ್ತಾಗುವವು.) ಈ ಅರಸರನ್ನು ಕೂಡ ಶಕರೇ ಸೋಲಿಸಿ ಅಲ್ಲಿಯೂ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು.

ರಾಜ ಬುಲನ ಮಗ ಖರವ್ರೋಸನು ಕೇವಲ ಕ್ಷತ್ರಪನೆನ್ನಿಸಿಕೊಂಡನು. ಆದರೆ ಅವನ ತಂದೆಯು ಮಹಾಕ್ಷತ್ರಪನಾಗಿದ್ದನು. ರಾಜ ಬುಲನ ಸೋದರ ಶೋಡಾಸಣ ಮಹಾಕ್ಷತ್ರಪನಾಗಿದ್ದನು. ಇದರ ಮೇಲಿಂದ ಖರವ್ರೋಸನು ತಂದೆಯು ತರುವಾಯ ಬಾಳಲಿಲ್ಲವೆಂಬುದು ವ್ಯಕ್ತವಾಗುವದು. ಅದಕ್ಕಾಗಿಯೇ ರಾಜಬುಲನ ಸೋದರ ಶೋಡಾಸನು ಉತ್ತರಾಧಿಕಾರಿಯಾದನು ಮಹಾಕ್ಷತ್ರಪನ ಮಕ್ಕಳು, ತಂದೆಯು ಜೀವಿಸುವಾಗ "ಕ್ಷತ್ರಪ"ರೆಂದು ಕರೆಯಿಸಿಕೊಳ್ಳುತ್ತಿದ್ದರು.

ಈ ರೀತಿಯಾಗಿ ಶಕರು ಉತ್ತರ ಭಾರತದ ತುಂಬ ಹರಿಬಿದ್ದು ಕೊಳ್ಳೆ ಕೊಲೆ—ಸುಲಿಗೆಗಳನ್ನು ಪ್ರಾರಂಭಿಸಿದ್ದರು. ಅದರಿಂದಾಗಿ ಅಲ್ಲಿಯ ಜನತೆ ಬೇಸತ್ತು ಹೋಗಿದ್ದಿತು. ಅಂಥ ಸಮಯದಲ್ಲಿ ಶಕಾರಿಯಾದ ವಿಕ್ರಮನು ಇವರನ್ನು ತಿರುಗಿ ಮೇಲಕ್ಕೇಳದಂತೆ ತುಳಿದು ಬಿಟ್ಟನು. ಅಂತೆಯೇ ಅವರಿಗೆ ಅಂದರೆ ಶಕರಿಗೆ ಸುಮಾರು ೧೫೦ ವರ್ಷಗಳ ವರೆಗೆ ತಮ್ಮ ತಲೆಯನ್ನು ಮೇಲಕ್ಕೆತ್ತಲೂ ಸಾಧ್ಯವಾಗಲಿಲ್ಲವೆಂಬುದು ಇತಿಹಾಸದಿಂದ ಗೊತ್ತಾಗುವದು. ಆಗ ವಿಕ್ರಮನಿಗೆ ಅಮರಗುಪ್ತನೆಂಬ ಮಹಾ ಚತುರ ಮಂತ್ರಿಯಿದ್ದು ಅರಸನಿಗಾಗಿ-ವಿಕ್ರಮನಿಗಾಗಿ—ತನ್ನ ಮಗನನ್ನೇ ಬಲಿಕೊಟ್ಟ ವೀರವರನಂತಹ ನೂರಾರು ವಿಶ್ವಾಸುಕ ಸೇವಕರೂ ಇದ್ದರು.

"ಕಥಾ ಸರಿತ್ಸಾಗರ"ದ ಪ್ರಕಾರ ವಿಕ್ರಮಾದಿತ್ಯನು ವಿಕ್ರಮಾರ್ಕನೆಂಮೂ ಕರೆಯಿಸಿಕೊಳ್ಳುತ್ತಿದ್ದನು. ಅವನು—ವಿಕ್ರಮಾರ್ಕನು ಮಹಾಕಾಲೇಶ್ವರ ಹಾಗು ಶಕ್ತಿಯ ಅನನ್ಯ ಭಕ್ತನಾಗಿದ್ದನು. ಇವನು ಶೂರನಿದ್ದಂತೆ ನ್ಯಾಯ ಶೀಲನೂ ಆಗಿದ್ದನು. ಅವರೆ ಶಿಕ್ಷಿಸುವ ಸಮಯದಲ್ಲಿ

ಮಾತ್ರ ಅವನು ಬಹು ಮೃದು ಹೃದಯದವನಾಗುತ್ತಿದ್ದನೆಂಬುದು "ಸರಿತ್ಸಾಗರದ" ಒಂದು ಶ್ಲೋಕದಿಂದ ಗೊತ್ತಾಗುವದು. ಅವನ ಆಸಕ್ತಿಯು ಯಾವಾಗಲೂ ಧರ್ಮದ ಕಡೆಗೆ ಇದ್ದಿತೇ ವಿನಾ ಮೃಗಗಳ ಬೇಟೆ ಇಲ್ಲವೆ ಸುಂದರ ತರುಣಿಯರ ಕೂಟದತ್ತ ಇರಲಿಲ್ಲ. ಅವನ ಕಾಲದಲ್ಲಿ ಎಲ್ಲಿಡೆಗೂ ಧಾರ್ಮಿಕತೆ, ಹಾಗು ವಿಶ್ವಾಸಾತ್ಮಿಕತೆಗಳು ಕಂಡು ಬರುತ್ತಿದ್ದವು. ಉನ್ನತವಾದ ಮಹಾಕಾಲೇಶ್ವರನ ಮಂದಿರವಿದ್ದಿತು. ರಾಜಧಾನಿಯಲ್ಲಿ ಕೈಲಾಸದಂತಹ ಉಚ್ಚ ಶ್ವೇತ ಪತ್ರಸಾವಗಳೂ ಇದ್ದವು.

ವೀರ ವಿಕ್ರಮಾದಿತ್ಯನು B. C. ೫೭ ರಲ್ಲಿ ಭಾರತದೊಳಗಿನ ಶಕರ ಶಾಸನವನ್ನು ಸಂಪೂರ್ಣವಾಗಿ ನಿಲ್ಲಿಸಿ ಬಿಟ್ಟನು. ಅನಂತರ ಅವನ ರಾಜ್ಯವು ೨೮ ನೆಯ ಇಸ್ವಿಯ ವರೆಗೂ ಇದ್ದಿತು. ವಿಕ್ರಮನ ಹೊರ್ತು ಶಕರು ಆಗ ಬೇರೆ ಯಾರಿಗೂ ಸೋತಿರಲಿಲ್ಲವೆಂಬುದು ಗಮನಿಸತಕ್ಕ ವಿಷಯವಾಗಿದೆ. ಮುಂದೆ ವಿಕ್ರಮನ ನಂತರ ಮತ್ತೆ ಶಕರ ಅರಸು ರುದ್ರಸಿಂಹನೆಂಬವನು ಕ್ರಿ. ಶ. ೧೨೭ ರಲ್ಲಿ ಮಾಳವದ ಅರಸರನ್ನು ಸೋಲಿಸಿದನು.

ಇದರ ಮೇಲಿಂದ ವ್ಯಕ್ತವಾಗುವದೇನಂದರೆ, B. C. ೫೭ ರಲ್ಲಿ ವಿಕ್ರಮಾದಿತ್ಯನಿಂದ ಸೋಲಿಸಲ್ಪಟ್ಟ ನಂತರ ಕ್ರಮೇಣ ಪ್ರಬಲರಾದರು. ಅವರಲ್ಲಿ ಕುನಿಂದನೆಂಬುವನು ಪ್ರಬಲನಾಗಿದ್ದು ಅವನ ಹೆಸರಿನ ಸಂವತ್ಸರವೂ ನಡೆಯಿತು.

(ವಿಕ್ರಮ ಸಂವತ್ಸರವು ಮೂರನೆ ನಾಗು ದಿಾಲ್ಕನೆಯ ಶತಮಾನದ ವರೆಗೆ "ಕೃತ ಸಂವತ್' ಎಂದೆನ್ನಿಸುತ್ತಿತ್ತು. ಅನಂತರ "ಮಾಳವ"ವೆಂದೂ ಕರೆಯಿಸಿಕೊಂಡಿತು. ಹಾಗಾಗಲು ಕಾರಣವೇನಂದರ ಆಗಿನ— ನಾಲ್ಕನೆಯ ಶತಮಾನದ—ಗುಪ್ತರ ರಾಜ್ಯ ಕಾಲದಲ್ಲಿ ಉತ್ತರ ಹಾಗು ಮಧ್ಯ ಭಾರತಗಳಲ್ಲಿ ಗುಪ್ತ ಸಂವತ್ಸರವು ಪ್ರಾರಂಭವಾದುದರಿಂದ, ಕೇವಲ ಮಾಳವದಲ್ಲಿಯೇ ಕೃತ ಸಂವತ್ಸರವು ನಡೆಯುತ್ತಿದುದರಿಂದ ಮಾಳವವೆಂದು ಕರೆಯಿಸಿಕೊಂಡಿರಬೇಕು

ಮುಂದೆ ಇದು ಒಂಭತ್ತನೆಯ ಶತಮಾನದಲ್ಲಿ ಅಂದರೆ ೮೯೮ ನೆಯ ಇಸ್ವಿಯಲ್ಲಿ ವಿಕ್ರಮ ಸಂವತ್ಸರವೆಂದು ಕರೆಯಿಸಿಕೊಳ್ಳತೊಡಗಿತು. ಅಲ್ಲದೆ

ಮತ್ತೆ ಕೆಲವು ಸಲ ಮಾಲವೇಶವೆಂದೂ ಕರೆಯಿಸಿಕೊಂಡಿತು. ಹನ್ನೊಂದು ಹಾಗು ಹನ್ನೆರಡನೆಯ ಶತಮಾನಗಳಲ್ಲಿ ವಿಕ್ರಮೀಯ ಸಂವತ್ ಎಂಬುದು ಬಹು ಪ್ರಚಾರಕ್ಕೆ ಬಂದಿತು. ಅಲ್ಲಿಂದ ಇಂದಿನ ವರೆಗೂ ಅದು ಹಾಗೆಯೇ ಉಳಿದು ಬಂದಿರುವದು.)

ವೀರ ವಿಕ್ರಮಾದಿತ್ಯನು ೨೮ ನೆಯ ಇಶ್ವಿಯಲ್ಲಿ ತೀರಿಕೊಂಡನು. ಆಗ ಅವನಿಗೆ ಒಂದು ನೂರಾ ಹನ್ನೊಂದು ವರ್ಷಗಳಾಗಿದ್ದವು. ಇವನು ಸೌರಾಷ್ಟ್ರ, ಮಥುರೆ ಹಾಗು ತಕ್ಷಶಿಲೆಯ ಶಕರನ್ನು ಸೋಲಿಸಿದ್ದಲ್ಲದೆ ಮಾಳವ ರಾಜ್ಯದಲ್ಲಿದ್ದ ಅವಂತಿಯ ಶಕರನ್ನೂ ಉದ್ಧಾರ ಮಾಡಿ ಅದನ್ನು ಅವಂತಿಯನ್ನು ತನ್ನ ತಮ್ಮನಿಗೊಪ್ಪಿಸಿದನು. ಹಾಗು ಅಲ್ಲಿಯ ಅರಸು ಕನ್ಯೆಯ ವಿವಾಹವನ್ನು ತನ್ನ ತಮ್ಮನೊಂದಿಗೆ ವಿಜೃಂಭಣೆಯಿಂದ ಮಾಡಿದನು.

ವಿಕ್ರಮಾದಿತ್ಯನ ಆ ಸೋದರನೆ ಭರ್ತೃಹರಿ. ಶಕ ಕನ್ಯೆಯೇ ಪಿಂಗಳೆ.

೧

ಸಾಯಂಕಾಲದ ಸಮಯ

ಪಶ್ಚಿಮ ದಿಗಂಗನೆಯೊಂದಿಗೆ ಬೆರೆಯಲುಆತುರಗೊಂಡಿದ್ದ ಸುಮನೋಹರವಾದ ಸೂರ್ಯ ಬಿಂಬವು ಇನ್ನೂ ಕಾಣಿಸತೊಡಗಿತ್ತು. ಅದರ ಬಂಗಾರ ವರ್ಣದ ಕಿರಣಗಳು, ಅವಂತಿನಗರದ ರಾಜೋದ್ಯಾನದ ತುಂಬೆಲ್ಲ ಬಂಗಾರವನ್ನು ಚಲ್ಲಿದಂತೆ ಹರಡಿದ್ದವು. ಆದರಿಂದಾಗಿ ಮೊದಲೇ ನಯನ ಮನೋಹರವಾಗಿ ಆಉದ್ಯಾನಕ್ಕೆ ಮತ್ತಿಷ್ಟು ಕಳೆ ಬಂದಿತ್ತು. ಅತಿ ರಮಣೀಯವಾಗಿದ ಕಂಗೊಳಿಸುತ್ತಿತ್ತು.

ಆ ವನದಲ್ಲಿ ಹಲಸು, ಪಾಟಲ, ಪ್ರಿಯಂಗು, ನಾರಿಕೇಳ, ಲವಂಗ, ಕೇತಕಿ, ಕದಂಬಿ, ಕಪಿತ್ಥ, ಅಶ್ವತ್ಥ, ಜಂಬು, ಜಂಬೀರ, ಆಮ್ರ, ಪ್ರಿಯಾಳು ಹಾಗು ಸ್ಯಂದನಗಳೇ ಮೊದಲಾದ, ನವಪಲ್ಲವಗಳ ಶಾಖೆಗಳಿಂದ ಕಣ್ಮನಗಳ ದಾಹವನ್ನು ಹಿಂಗಿಸುವಂಥ ವೃಕ್ಷಗಳು ಇಂದ್ರನ ನಂದನವನವನ್ನು ಹೀಯಾಳಿಸುವೋಪಾದಿಯಲ್ಲಿ ತಲೆ ಎತ್ತಿ ನಿಂತುಕೊಂಡಿದ್ದವು.

ಆ ವೃಕ್ಷಗಳಲ್ಲಿಯ ಗೂಡುಗಳಲ್ಲಿ ಮರಿಗಳಿಗೆ ಗುಟ್ಟೆಯನ್ನಿಕ್ಕುವ ಪಕ್ಷಿಗಳ ಧ್ವನಿ ಹಾಗು ಅವುಗಳ ರೆಕ್ಕೆಗಳ ಪಟ-ಪಟಾರವವು ಆಗಾಗ ಕೇಳಬರುತ್ತಿದ್ದಿತು. ಪಕ್ವವಾದ ಫಲಗಳ ಭಾರದಿಂದ ಬಾಗಿರುವ ಶಾಖೆಗಳೂ, ಅವುಗಳಲ್ಲಿ ಪುಷ್ಪಗಳ ಗೊಂಚಲುಗಳಲ್ಲಿ ದುಂಬಿಗಳು ಪುಷ್ಪಗಳ ಮಧುವನೀಂಟಿ ಮತ್ತವಾಗಿ ಮಾಡುತ್ತಿರುವ 'ಗ್ಞಾಕಾರ'ದ ಗಾನವೂ ಕೇಳ ಬರುತ್ತಿದ್ದಿತು. ಕೋಗಿಲೆಗಳ ಮಂಜುಳವಾದ 'ಕುಹು' ರವವೂ ಮಧ್ಯ ಮಧ್ಯ ಕೇಳಬರುತ್ತಿತ್ತು.

ಅಲ್ಲದೆ ಸಂಪಿಗೆ, ಸೇವಂತಿಗೆ, ಗಿರಿಮಲ್ಲಿಗೆ, ಮಲ್ಲಿಗೆ, ಜಾಜಿ ಮಲ್ಲಿಗೆ, ಸೂಜಿ ಮಲ್ಲಿಗೆಗಳೇ ಮೊದಲಾದ ನಾನಾಬಗೆಯ ಪುಷ್ಪವಲ್ಲರಿಗಳಿಗೂ ಅಲ್ಲಿ

ಕೊರತೆ ಯಿರಲಿಲ್ಲ. ಸಾಯಂಕಾಲದ ಮಂದ ಮಾರುತನು ಎಲ್ಲ ಬಗೆಯ ಪುಷ್ಪಲತೆಗಳ ಮೇಲ್ಹಾಯ್ದು ಹೊತ್ತು ತರುತ್ತಿದ್ದ ಪರಿಮಳವು ಎಂಥವರ ಮಾನಸವನ್ನೂ, ಉಲ್ಲಸಿತಗೊಳಿಸುತ್ತಿತ್ತು. ಅವರ ದಣಿವನ್ನು, ಮನದ ಬೇಸರಿಕೆಯನ್ನು ಹೊಡೆದೋಡಿಸುವಂತಿತ್ತು. ಆದರೂ....

ಅಂತಹ ನಿಸರ್ಗ ರಮಣೀಯ ಸ್ಥಾನದಲ್ಲಿ ಮಲ್ಲಿಗೆ ಬಳ್ಳಿಯಿಂದ ರಚಿತವಾಗಿರುವ ಮಂಟಪದ ಅಡಿಯಲ್ಲಿ ಅಮೃತ ಶಿಲೆಯಿಂದ ನಿರ್ಮಿಸಲಾಗಿರುವಂಥ ಸುಖಾಸನದ ಮೇಲೆ ಕುಳಿತುಕೊಂಡಿದ್ದ ಶಕ ಕನ್ಯೆ, ಮಹಾರಾಜಾ ಭರ್ತೃಹರಿಯ ಕಿರಿಯಪತ್ನಿ ಪಿಂಗಳೆಯ ಮುಖದ ಮೇಲೆ ಮಾತ್ರ ಯಾವುದೋ ಬಗೆಹರಿಯದಂತಹ ಚಿಂತೆಯು ಎದ್ದು ಕಾಣುತ್ತಿತ್ತು. ಕಾಂತಿಯುತವಾದ ಅವಳ ಮುಖವು, ಆವರಿಸಿದ ಚಿಂತೆಯಿಂದಾಗಿ ಮೋಡ ಮುಸುಕಿದ ಚಂದ್ರಬಿಂಬದಂತೆ ಕಾಣಿಸುತ್ತಿತ್ತು.

ಪಿಂಗಳೆಯ ಎದುರಿಗೆ, ಅನತಿ ದೂರದಲ್ಲಿದ್ದ ಚಂದ್ರಶಿಲೆಯ ಆಸನದ ಮೇಲೆ ಓರ್ವ ತರುಣನು ಅಧೋಮುಖನಾಗಿ ಕುಳಿತುಕೊಂಡಿದ್ದನು. ಈರ್ವರ ಮುಖಗಳೂ ಯಾವುದೋ ಅವ್ಯಕ್ತ ದುಃಖದಿಂದ ಬಾಡಿದಂತೆ ಕಂಡು ಬರುತ್ತಿದ್ದವು. ಅಷ್ಟೊಂದು ವಿಸ್ತಾರವಾದ ಉದ್ಯಾನದಲ್ಲಿ ಇವರೀರ್ವರನ್ನುಳಿದು ಬೇರಾರೂ ಇರಲಿಲ್ಲ. ಆದರೂ ಅವರು ಮಾತನಾಡದೆ ಸುಮ್ಮನೆ ಕುಳಿತುಕೊಂಡಿದ್ದರು.

—

ಹಾಗೆಯೇ ಇನ್ನು ಎಷ್ಟು ಸಮಯದ ವರೆಗೆ ಕುಳಿತುಕೊಳ್ಳುತ್ತಿದ್ದರೋ ಏನೋ ? ಆದರೆ ಪಿಂಗಳೆಗೆ ಮೌನವು ಸಹಿಸವಂತಾಗಿ—

"ರಾಹುಲ ! ನೀನು ಅವಂತಿ ನಗರಕ್ಕೆ ಬಂದುದು ಒಳ್ಳೆಯದಾಗಲಿಲ್ಲ ! ಕೇವಲ ಬಂದು ಹೋಗಿದ್ದರೆ ನನ್ನದೇನೂ ಆಕ್ಷೇಪವಿರಲಿಲ್ಲ. ಆದರೆ ನೀನು ಮಹಾರಾಜರಲ್ಲಿ ಅಶ್ವಪರೀಕ್ಷಕನಾಗಿ ಸೇರಿಕೊಂಡದ್ದು ನನಗೆ ಎಳ್ಳಷ್ಟು ಸೇರಿಕೆಯಿಲ್ಲ !" ಎಂದಳು.

ಆ ವರೆಗೂ ತಲೆ ತಗ್ಗಿಸಿಕೊಂಡು ನೆಲವನ್ನೇ ನೋಡುತ್ತ ಕುಳಿತು ಕೊಂಡಿದ್ದ ಯುವಕ ರಾಹುಲನು ಮುಖವನ್ನೆತ್ತಿ ಪಿಂಗಳೆಯತ್ತ ದೃಷ್ಟಿ ಹಾಯಿಸಿದನು. ಒಂದು ಕ್ಷಣದ ವರೆಗೆ ಅವಳನ್ನೇ ನೋಡುತ್ತಿದ್ದು, ಅನಂತರ—

"ಪಿಂಗಳಾ!........"

"ನೀನು ತಪ್ಪುತ್ತಿರುವೆ ರಾಹುಲ! ಈಗ ನಾನು ನಿನ್ನ ಪಾಲಿಗೆ ಪಿಂಗಳೆಯಲ್ಲ. ಮಹಾರಾಣಿ. ನಿನಗೆ ಅನ್ನವನ್ನಿಕ್ಕುವ ಅರಸು ಭರ್ತೃಹರಿಯ ಕಿರಿಯ ಪತ್ನಿ. ಈ ಮಾತನ್ನು ಚನ್ನಾಗಿ ಜ್ಞಾಪಕದಲ್ಲಿರಿಸಿಕೊಂಡು ಮಾತನಾಡು!" ಎಂದು ಪಿಂಗಳೆ ಮಧ್ಯದಲ್ಲಿಯೇ ನುಡಿದಳು. ಆಗ ಅವಳ ಕಣ್ಣುಗಳು ಸ್ವಾಭಾವಿಕವಾಗಿಯೆ ಕೆಂಪಗಾಗಿ ಬಿಟ್ಟಿದ್ದವು.

ಪಿಂಗಳೆಯ ಕಣ್ಣುಗಳಲ್ಲಿ ತುಂಬಿದ್ದ ಕೋಪವನ್ನು ಕಂಡು ರಾಹುಲ ಬೆಚ್ಚಿಬಿದ್ದ. ಕೂಡಲೆ ಅವನು—

"ತಪ್ಪಾಯಿತು ಮಹಾರಾಣಿ! ದಯವಿಟ್ಟು ನನ್ನನ್ನು ಕ್ಷಮಿಸಬೇಕು." ಎಂದು ನುಡಿದು ಕುಳಿತ ಆಸನವನ್ನು ಬಿಟ್ಟು ಎದ್ದು ನಿಂತು ಕೈಗಳನ್ನು ಜೋಡಿಸಿದ.

'ರಾಹುಲನ ಅವಿಧೇಯತೆಯನ್ನು ಕಂಡು ಪಿಂಗಳೆಗೆ ಅಚ್ಚರಿಯಾಯಿತು. ಅಂತೆಯೆ ಅವಳು—

"ರಾಹುಲ! ನಿನ್ನ ಬುದ್ಧಿಗೆ ಇಷ್ಟೊಂದು ಮಂಕುತನ ಕವಿದಿದೆಯೆಂಬುದು ನನಗೆ ಗೊತ್ತಾಗಿರಲಿಲ್ಲ ಅರಸು ಪ್ರಜಾ ವರ್ಗಕ್ಕೆ ತಂದೆಯಾಗಿರುವಂತೆ ಅವನ ಪತ್ನಿ ತಾಯಿಯಾಗಿರುತ್ತಾಳೆ. ನೀನೂ ಅರಸು ಕುಮಾರನೇ ಇದ್ದು, ಅರಸನ ಪತ್ನಿಯನ್ನು ಯಾವ ರೀತಿಯಿಂದ ಸಂಬೋಧಿಸಬೇಕೆಂಬುದನ್ನು ಮರೆತೆಯಾ? ನಿನ್ನ ರಾಜ್ಯದೊಳಗೆ ನೀನು ಯುವರಾಜನಾಗಿರಬಹುದು. ಆದರೆ ಇಲ್ಲಿ ಓರ್ವ ಪ್ರಜೆ ಆ ದೃಷ್ಟಿಯಿಂದ ನಾನು ನಿನಗೆ ರಾಜ ಮಾತೆಯಾಗಬೇಕು ಅದಕ್ಕಾಗಿ ನೀನು ನನ್ನೊಂದಿಗೆ ಮಾತನಾಡುವಾಗ ಅಷ್ಟು ಗೌರವ

ವನ್ನಿತ್ತರೆ ಸಾಕು.ಅತಿ ವಿನಯ ನನಗೆ ಸೇರುವದಿಲ್ಲ. ಆಯಿತು,ಕುಳಿತುಕೋ. ಅನಂತರ ಇಲ್ಲಿಗೆ ಏತಕ್ಕೆ ಬಂದೆ? ಇಲ್ಲಿ ಏತಕ್ಕೆ ಅಶ್ವ ಪರೀಕ್ಷಕನಾಗಿ ಉಳಿದು ಕೊಂಡೆ? ಎಂಬುದನ್ನು ತಿಳಿಸು"ಎಂದಳು ಗಂಭೀರಳಾಗಿ.

"ಆಯಿತು ರಾಜಮಾತೆ! ತಮ್ಮ ಇಚ್ಛೆಯಂತೆಯೇ ಆಗಲಿ"

ಎಂದು ನುಡಿದ ರಾಹುಲನು ಮತ್ತೆ ಶಿಲಾಸನದ ಮೇಲೆ ಕುಳಿತುಕೊಂಡನು. ಅವನು ಏನು ಹೇಳುವನೋ ಎಂದು ಕಾತುರದಿಂದ ನಿರೀಕ್ಷಿಸ ತೊಡ ತೊಡಗಿದಳು ಪಿಂಗಳೆ. ಆದರೆ ನಾಲ್ಕಾರು ಕ್ಷಣಗಳು ಉರುಳಿದರೂ ಅವನು ಮೌನಿಯಾಗಿಯೇ ಕುಳಿತುಕೊಂಡಿರುವದನ್ನು ಕಂಡು ಪಿಂಗಳೆಗೆ ತಡೆಯದಂತಾಗಿ—

"ರಾಹುಲ ! ನಾನು ಹೇಳಿದ್ದು ಕೇಳಿಸಲಿಲ್ಲವೆ ? " ಎಂದಳು.

"ರಾಜಮಾತೆಯವರು ತಾವಿನ್ನೂ ರಾಜಕನ್ಯೆಯೆಂದೇ ಭಾವಿಸಿದಂತಿದೆ. ಅಂತೆಯೆ 'ನಾವು' ಎಂಬುದರ ಬದಲು 'ನಾನು' 'ನಾನು' ಎಂದು ಏಕವಚನ ದಲ್ಲಿಯೇ ಸಂಬೋಧಿಸಿಕೊಳ್ಳುತ್ತಿದ್ದಾರೆ. " ಎಂದು ರಾಹುಲ, ಮುಖದ ಮೇಲೆ ಇಲ್ಲದ ನಗುವನ್ನು ತಂದುಕೊಂಡು.

''ಹೌದು. ಮಾತನಾಡುವಾಗ ನಾವೂ ಕೊಂಚ ತಡವರಿಸಿದೆವೆಂಬುವನ್ನು ಒಪ್ಪಿಕೊಳ್ಳುತ್ತೇವೆ. ನೀನು ಅವಂತಿ ನಗರದಲ್ಲಿರುವಿ ಎಂಬುದು ಕಿವಿಗೆ ಬಿದ್ದ ಕ್ಷಣದಿಂದ ನಮ್ಮ ಮನಸ್ಸೇ ನಮ್ಮಾಧೀನದೊಳಗುಳಿದಿಲ್ಲ. ನಿನ್ನನ್ನು ಯಾವಾಗ ಕಂಡೇವು,ಇಲ್ಲಿಗೆ ಬಂದುದರ ಕಾರಣವನ್ನು ಯಾವಾಗ ಕೇಳೇವು, ಎಂಬ ಆತುರವೇ ಹೆಚ್ಚಾಗಿ ಬಿಟ್ಟಿದೆ. ಅದಕ್ಕಾಗಿಯೇ ನಿನ್ನನ್ನು ಭೆಟ್ಟಿಯಾಗಲು ಸಮಯವನ್ನು ಕಲ್ಪಿಸಿಕೊಳ್ಳಬೇಕಾಯಿತು " ಪಿಂಗಳೆಯೆಂದಳು.

"ರಾಜಮಾತೆಯವರು ನನ್ನನ್ನು ಭೆಟ್ಟಿಯಾಗಿರುವದು ಸಮ್ರಾಟರಿಗೆ ತಿಳಿದಿದೆಯೆ ? " ರಾಹುಲ ಪ್ರಶ್ನಿಸಿದ.

''ಹೌದು ನಾವು ಅವರ ಅಪ್ಪಣೆಯನ್ನು ಪಡೆದುಕೊಂಡ ನಂತರವೇ ಈ ಬಗೆ ಏರ್ಪಾಡು ಮಾಡಿದೆವು!"

"ಸಂತೋಷ! ಆದರೆ ರಾಜ ಮಾತೆಯವರಿಗೆ ನಾನು ಇಲ್ಲಿಗೆ ಬಂದ ಸಂಗತಿಯು ಹೇಗೆ ತಿಳಿಯಿತೆಂದು ಕೇಳಬಹುದೆ?"

"ಆ ಸಂಗತಿಯು ನಮಗೆ ಸಮ್ರಾಟರಿಂದಲೇ ತಿಳಿಯಿತು. ಮೊನ್ನೆಯ ದಿನ ರಾತ್ರಿ ಬೆಳದಿಂಗಳಿನ ತಂಬೆಳಕನ್ನು ಸವಿಯುತ್ತ ಅರಮನೆಯ ಉಪ್ಪರಿಗೆಯಲ್ಲಿ ಕುಳಿತುಕೊಂಡೆವು. ಆಗ ಅವರೇ ನಮ್ಮೆದುರು ಹೇಳಿದರು.

"ಏನೆಂದು ಹೇಳಿದರು?"

"ಅಶ್ವ ಪರೀಕ್ಷೆಯಲ್ಲಿ ಪರಿಣತನಾದ ಓರ್ವ ಶಕ ಯುವಕನನ್ನು ಈ ದಿನ ರಾಜ್ಯದ ಸೇವೆಗೆ ಸೇರಿಸಿಕೊಂಡಿರುವದಾಗಿ ಹೇಳಿದರು."

"ಕೇವಲ ಅಷ್ಟೇ ವಿಷಯದಿಂದ ಬಂದವನು ನಾನೇ ಎಂದು ತಾವು ಹೇಗೆ ಭಾವಿಸಿದಿರಿ?"

"ಅದೂ ಒಂದು ಮೋಜಿನ ವಿಷಯ. ಸಮ್ರಾಟರು ನೀನು ತಿಳಿದುಕೊಂಡಿರುವಷ್ಟು ಹೆಡ್ಡರಲ್ಲ. ನೀನು ಓರ್ವ ಸಾಮಾನ್ಯ ಶಕನೆಂದು ಅವರೆದುರು ಹೇಳಿಕೊಂಡಿದ್ದರೂ ಅವರು ಮಾತ್ರ ನೀನು ಯಾರು ಎಂಬುದನ್ನು ಕಂಡುಕೊಂಡಿದ್ದಾರೆ!" ಪಿಂಗಳೆಯೆಂದಳು.

ಪಿಂಗಳೆಯ ಮಾತುಗಳನ್ನು ಕೇಳಿ ರಾಹುಲನಿಗೆ ಗಾಬರಿಯಾಯಿತು ಕೂಡಲೆ ಅವನು—

"ಅಂದರೆ? ಪ್ರಭುಗಳಿಗೆ ನಾನು ಶಕರ ಬೇಹುಗಾರನೆಂಬ ಸಂಶಯವು ಬಂದಿಲ್ಲವಷ್ಟೆ?" ಎಂದ.

"ಹಾಗೇನಿಲ್ಲ. ಅವರು ಖಡ್ಗವನ್ನು ಹಿರಿದು ರಣರಂಗದಲ್ಲಿ ನಿಂತಾಗ ಅಂತಕನಂತೆ ಹೋರಾಡುವಂತೆ ಲೆಕ್ಕಣಿಕೆಯನ್ನು ಹಿಡಿದಾಗ ಅಪ್ರತಿಮ ವಿದ್ವಾಂಸರೂ ಆಗುತ್ತಾರೆ. ಯಾವುನಾದರೊಬ್ಬನ ಮುಖವನ್ನು

ನೋಡಿ ಇವನು ಇಂಥವನೇ ಎಂದು ಕಂಡು ಹಿಡಿಯುತ್ತಾರೆ. ಅಷ್ಟೊಂದು ಬುದ್ಧಿವಂತಿಕೆಯು ಅವರಲ್ಲಿ ಮನೆ ಮಾಡಿಕೊಂಡಿದೆ."

"ಹಾಗಿದ್ದರೆ ನಾನು ರಾಜಕುಮಾರನೆಂಬುದನ್ನು ಅವರು ಕಂಡು ಹಿಡಿದರೆ ?" ಆಶ್ಚರ್ಯದಿಂದ ಪ್ರಶ್ನಿಸಿದ, ರಾಹುಲ.

'ರಾಹುಲ ! ನೀನು ಹುಚ್ಚನಿರುವಿ. ಅವರು, ನೀನು ರಾಜಕುಮಾರನೆಂಬುದನ್ನು ಕಂಡು ಹಿಡಿದುದಲ್ಲದೆ, ನೀನೊಬ್ಬ ಭಗ್ನ ಪ್ರೇಮಿ ಎಂಬುದನ್ನೂ ಕಂಡುಕೊಂಡಿದ್ದಾರೆ."

ಪಿಂಗಳೆಯ ಮಾತುಗಳನ್ನು ಕೇಳಿ ರಾಹುಲನಿಗೆ ಇನ್ನಷ್ಟು ಆಶ್ಚರ್ಯವಾಯಿತು. ಭರ್ತೃಹರಿಯು ನಿಜಕ್ಕೂ ಅಷ್ಟೊಂದು ಬುದ್ಧಿವಂತನಿರಬಹುದೋ, ಇಲ್ಲವೆ ಪಿಂಗಳೆಯು ಹೇಳುತ್ತಿರುವದರಲ್ಲಿ ಉತ್ಪ್ರೇಕ್ಷೆಯಿದೆಯೋ ಎಂಬುದು ಅವನಿಗೆ ಗೊತ್ತಾಗದೆ ದ್ವಿವಿಧದೊಳಗೆ ಸಿಲುಕಿಬಿಟ್ಟನು. ರಾಹುಲನ ಮುಖಭಾವದಿಂದಲೇ ಅವನ ಹೃದಯದೊಳಗೆ ನಡೆದ ತುಮುಲವನ್ನು ಅರಿತುಕೊಂಡ ಪಿಂಗಳೆಯು—

"ರಾಹುಲ ! ನಾವು ಹೇಳುತ್ತಿರುವದು ಉತ್ಪ್ರೇಕ್ಷೆಯ ಮಾತು ಎಂದು ನಿನಗೆ ಅನ್ನಿಸುತ್ತಿದೆಯಲ್ಲದೆ !" ಎಂದಳು.

"ಅಹುದು ತಾಯಿ. ನಿಜಕ್ಕೂ ನನಗೆ ಹಾಗೆಯೇ ಅನ್ನಿಸುತ್ತಿದೆ !" ಪ್ರಾಂಜಲ ಮನದಿಂದ ಒಪ್ಪಿಕೊಂಡ ರಾಹುಲ.

"ನೀನು ಇಲ್ಲಿಯೇ ತಪ್ಪುತ್ತೀ ರಾಹುಲ! ಸಮ್ರಾಟರು ಸಾಮಾನ್ಯರಲ್ಲ. "ಶಕರ ಪತ್ನಿಯರಿಗೆ ವೈಧವ್ಯದ ದೀಕ್ಷೆಯನ್ನು ಕೊಡುವ ಗುರುವೆಂದು" ಭಾರತ ವರ್ಷದಲ್ಲಿ ಖ್ಯಾತಿಗೊಂಡಿರುವ ಅಜೇಯ ಚಕ್ರವರ್ತಿಗಳಾದ ವಿಕ್ರಮಾದಿತ್ಯ ಪ್ರಭುಗಳ ಸೋದರರಾದ ನಮ್ಮ ಸಮ್ರಾಟರು ಕಡಿಮೆಯವರೆಂದು ಭಾವಿಸಬೇಡ. ಅವರು ವಿದ್ವತ್ತಿನಲ್ಲಿ ಬೃಹಸ್ಪತಿಗೆ ಸರಿಸಮಾನರಾಗಿದ್ದಾರೆ. ಅವರಿಗೆ ತಿಳಿಯಲಾರದ ವಿಷಯವು ಯಾವುದೂ ಇಲ್ಲ. ಇನ್ನೊಂದು ವಿಷಯ.

ಅದನ್ನು ಹೇಳಿದರೆ ನಿನಗೂ ಅಚ್ಚರಿಯಾಗಬಹುದು.

“ನಾವು ಅವಂತಿ ನಗರದ ರಾಜಭವನದೊಳಗೆ ಪ್ರವೇಶಿದ ಮೊದಲ ದಿನವೇ ಪ್ರಭುಗಳು ನಮ್ಮ ಹೃದಯಾಂತರಾಳದೊಳಗಿನ ನೋವನ್ನು ಕಂಡ ಹಿಡಿದರು. ಹಾಗು ನಮ್ಮನ್ನು ಸಾಂತ್ವನಗೊಳಿಸಲೋಸುಗ.

“ಕಿರಿಯರಾಣಿ! ನಿಮ್ಮ ಮುಖವನ್ನು ನೋಡಿದರೆ ನೀವು ಭಗ್ನ ಪ್ರೇಮಿಗಳೆಂಬುದು ವ್ಯಕ್ತವಾಗುತ್ತದೆ. ನೀವು ದಯವಿಟ್ಟು ಈ ವಿಷಯಲ್ಲಿ ಸುಳ್ಳಾಡಕೂಡದು. ಇದ್ದುದನ್ನು ಇದ್ದಂತೆ ಹೇಳಿ!” ಎಂದರು.

ಆಗ ಪ್ರಭುಗಳಿಗೆ ಏನಂದು ಉತ್ತರವೀಯಬೇಕೆಂಬುದೇ ನಮಗೆ ತಿಳಿಯಲಿಲ್ಲ. ಇಷ್ಟೇ ಅಲ್ಲ. ನಿನ್ನನ್ನು ಬಿಟ್ಟು ಪ್ರಭುಗಳ ಕೈಹಿಡಿದಿದ್ದುದು ನಮ್ಮ ಮನಸ್ಸಿಗೂ ಆಘಾತವನ್ನುಂಟು ಮಾಡಿತ್ತು- ಆಗ ನಾವು ತುಟಿ ಅಲುಗಾಡಿಸದೆ ಸುಮ್ಮನಿದ್ದು ಬಿಟ್ಟೆವು. ಏಕೆಂದರೆ ನಮಗೆ ಸುಳ್ಳು ಹೇಳುವ ಇಚ್ಛೆ ಇರಲಿಲ್ಲ. ನಿಜವನ್ನು ಹೇಳಿದರೆ ಪ್ರಭುಗಳೆಲ್ಲಿ ಕುಪಿತರಾಗುವರೋ ಎಂಬ ಭಯವಿದ್ದಿತು. ಹೀಗಾಗಿ ನಾವು ಸುಮ್ಮನಾದೆವು. ನಮ್ಮ ಮೌನವು ಪ್ರಭುಗಳಿಗೂ ಅರ್ಥವಾಗಿರಬೇಕು. ಅಂತೆಯೇ ಅವರು—

“ರಾಣಿ! ನಿಮ್ಮ ಮೌನವು ನಮಗೆ ಅರ್ಥವಾಯಿತು. ಸಮಯವು ಮಿಂಚಿ ಹೋದುದಕ್ಕೆ ನಮಗೆ ವಿಷಾದವೆನ್ನಿಸುತ್ತಿದೆ. ಈ ವಿಷಯವು ಮೊದಲೇ ಗೊತ್ತಾಗಿದ್ದರೆ ನಾವು ಅಣ್ಣನವರಿಗೆ ನಮ್ರವಾಗಿ ಸೂಚಿಸಿ ವಿವಾಹದಿಂದ ದೂರವಾಗುತ್ತಿದ್ದೆವು. ಆದರೂ ನಿಮ್ಮ ಹೃದಯದ ವ್ಯಥೆಯನ್ನು ಹೋಗಲಾಡಿಸಲು ನಾವು ಶಕ್ತಿ ಮೀರಿ ಪ್ರಯತ್ನಿಸುತ್ತೇವೆ. ಅದಕ್ಕಾಗಿ ತಾವು........

ಎಂದು ಪ್ರಭುಗಳು ನುಡಿಯುತ್ತಿರುವಂತೆಯೇ ನಾವು ಅವರ ಪಾದಗಳ ಮೇಲೆ ಬಿದ್ದು ಬಿಟ್ಟೆವು. ಆಗ ಅವರು ನಮ್ಮನ್ನು ಮೇಲಕ್ಕೆತ್ತಿ ಅನುರಾಗ ಪೂರ್ಣ ದೃಷ್ಟಿಯಿಂದ ನಮ್ಮನ್ನು ನೋಡುತ್ತ—

“ ಕಿರಿ ರಾಣಿಯರು ಹಾಗೆಲ್ಲ ಮಾಡಬಾರದು. ನಿಮ್ಮ ಬಗ್ಗೆ ನಮಗೆ ಹೆಮ್ಮೆಯಿದೆ. ವಿದೇಶೀಯರಾದ ಶಕರು ಭಾರತೀಯರನ್ನು ಪಶುಗಳಂತೆ ಕಾಣುತ್ತಿದ್ದರು. ಇಲ್ಲಿಯ ಅರಸರು ನಿರ್ವೀರ್ಯರೆಂದು ಹಳಿದು ಅವರ ಬೇಟೆ ಯಾಡುತ್ತಿದ್ದರು. ಆದರೆ ಅಣ್ಣನವರೆದುರು ಮಾತ್ರ ಶಕರ ಆಟ ಸಾಗಲಿಲ್ಲ. ಪ್ರತಿಯೊಂದು ಯುದ್ಧದಲ್ಲಿಯೂ ಅವರು ಶಕರನ್ನ ಪಾತಾಳಕ್ಕೆ ತುಳಿದರು. ಭಾರತೀಯರಲ್ಲಿಯೂ ಶಕ್ತಿ ಶೌರ್ಯಗಳಿವೆ; ಎಂಬುದನ್ನು ತೋರಿಸಿಕೊಟ್ಟರು. ಆದರೂ ನಿರಂತರ ಹೋರಾಟವು ಅವರಿಗೂ ಬೇಸರಿಕೆಯನ್ನುಂಟು ಮಾಡಿತ್ತು. ಅದಕ್ಕಾಗಿಯೇ ಅವರಲ್ಲಿ ಶಕರೊಂದಿಗೆ ರಕ್ತ ಸಂಬಂಧವನ್ನು ಬೆಳೆಸುವ ಇಚ್ಛೆಯುಂಟಾಯಿತು. ನಿಮ್ಮ ಸೌಂದರ್ಯದ ಖ್ಯಾತಿಯನ್ನು ಅಣ್ಣ ನವರೂ ಕೇಳಿದ್ದರು. ಅದಕ್ಕಾಗಿ ಒಂದು ದಿನ ಅವರು ನಮ್ಮೆದುರು—

“ಭರ್ತೃಹರಿ! ಶಕಕನ್ಯೆ ಪಿಂಗಳೆಯ ಬಗ್ಗೆ ನಿನಗೆ ಗೊತ್ತಿದೆಯಷ್ಟೆ! ಆ ಕನ್ಯೆಯ ಕೈಹಿಡಿಯಲು ನೀನು ಮುಂದಾಗಬೇಕು” ಎಂದರು.

“ಪ್ರಭುಗಳ ಚಿತ್ತ!” ಎಂದು ನಾವು ಉತ್ತರಿಸಿದೆವು.

“ನಮ್ಮ ಮಾತಿಗೆ ಎದುರುತ್ತರವೀಯುವದಿಲ್ಲವೆಂಬುದು ನಮಗೆ ಗೊತ್ತಿದ್ದಿತು- ರಸಿಕ ಹೃದಯದ ತರುಣ ಕವಿಯಾದ ನೀನು ಪಿಂಗಳೆಯೊಂದಿಗೆ ಸರಿಯಾಗಿ ನಡೆದು ಕೊಳ್ಳುವಿಯೆಂಬುದೂ ನಮಗೆ ಗೊತ್ತಿದೆ”ಎಂದರು.

“ತಮ್ಮ ಮಾತಿನ ಅರ್ಥವಾಗಲಿಲ್ಲ!”

“ಅರ್ಥವಾಗದಂತಹದೇನೂ ಇಲ್ಲ- ಶಕರು ನಮಗೆ ವೈರಿಗಳು. ಅಂಥವರ ಕನ್ಯೆಯನ್ನು ನಿನಗಾಗಿ ನಾವು ನಿರ್ಧರಿಸಿದ್ದೇವೆ. ಶತ್ರು ಕನ್ಯೆಯ ಕೈಹಿಡಿದಾಗ ಮನದೊಳಗೆ ನಾನಾ ಬಗೆಯ ತಾಕಲಾಟಗಳು ನಡೆಯುವದು ಸ್ವಾಭಾವಿಕವೇ ಆಗಿದೆ. ಶಕರ ಮೇಲಿನ ಅಸಮಾಧಾನವನ್ನು ನಮ್ಮ ಪ್ರಾಸಾದದ ಹೊಸ್ತಿಲು ಮೆಟ್ಟುವ ಕನ್ಯೆಯ ಮೇಲೆ ತೋರಿಸಬಾರದು ಎಂದೆವು ಅಷ್ಟೆ.”

“ಚಕ್ರವರ್ತಿಗಳು ಭರ್ತೃಹರಿಯನ್ನು ತಪ್ಪಾಗಿ ಭಾವಿಸಿಕೊಂಡಂತಿದೆ. ವೈರಿಯನ್ನು ಪ್ರೇಮದಿಂದ ಗೆಲ್ಲಬೇಕಲ್ಲದೆ ಖಡ್ಗದಿಂದಲ್ಲ. ಖಡ್ಗದಿಂದ ದೊರೆತ

ವಿಜಯವು ನಿಜವಾದ ವಿಜಯವಲ್ಲ. ಏಕೆಂದರೆ ಯುದ್ಧದಲ್ಲಿ ಯಾವಾಗಲೂ ಜಯವೇ ದೊರೆಯುತ್ತದೆಂದು ಯಾರೂ ಎದೆತಟ್ಟಿ ಹೇಳುವದು ಸಾಧ್ಯವಿಲ್ಲ. ಒಂದು ಸಲ ಒಬ್ಬನ ಕೈ ಮೇಲಾದರೆ ಇನ್ನೊಂದು ಸಲ ಪ್ರತಿಸ್ಪರ್ಧಿಯ ಕೈ ಮೇಲಾಗುವದು. ಆದರೆ ಪ್ರೇಮದಿಂದ ಗಳಿಸಿದಂಥ ವಿಜಯವು ಶಾಶ್ವತ ವಿಜಯವಾಗುವದು. ಅದರೆದುರು ಖಡ್ಗಗಳು ಏನೂ ಮಾಡಲಾರವು. ಕೂರಂಬುಗಳು ಮಾಡದ ಕಾರ್ಯವನ್ನು ಎರಡು ಅನುರಾಗ ಪೂರ್ಣ ಹೃದಯಗಳು ಮಾಡಬಲ್ಲವು. ಹೀಗೆ ಹೇಳುತ್ತಿರುವೆನೆಂದು ನಾನು ಯುದ್ಧಕ್ಕಂಜುವೆನೆಂದು ತಾವು ಸರ್ವಥಾ ಭಾವಿಸಕೂಡದು. ಯುದ್ಧರಂಗದಲ್ಲಿ ನಿಂತಾಗ ನನಗೆ ಗೆಲ್ಲುವದೊಂದನ್ನು ಬಿಟ್ಟರೆ ವೀರಸ್ವರ್ಗ ಪಡೆಯುವದೊಂದೇ ಗೊತ್ತಿದೆಯೆಂಬುದು ತಮಗೂ ಅರಿಯದ ವಿಷಯವಲ್ಲ. ಅಲ್ಲದೆ ಇನ್ನೂ ಒಂದು ಮಾತು. ಶಕರು ದುಷ್ಟರು, ನೀಚರು ನಿಜ. ಆದರೆ ಎಲ್ಲರೂ ಯಾವಾಗಲೂ ಒಂದೇ ತೆರನಾಗಿರುವದಿಲ್ಲವೆಂಬುದನ್ನೂ ನಾವು ಮರೆಯಬಾರದು. ಚಕ್ರವರ್ತಿಗಳೆದುರು ಈ ವರೆಗೆ ಮಾತನಾಡಿದ್ದರಲ್ಲಿ ಏನಾದರೂ ಉದ್ಧಟತನದ ಮಾತುಗಳಿದ್ದರೆ ದಯವಿಟ್ಟು ಕ್ಷಮಿಸಬೇಕು." ಎಂದು ಕೇಳಿಕೊಂಡೆವು. ಆಗ ಅವರು—

"ಭರ್ತೃಹರಿ! ನಿನ್ನ ಬಾಯಿಂದ ಉತ್ಪ್ರೇಕ್ಷೆಯ ಶಬ್ದಗಳು ಬರಲಾರವೆಂಬುದು ನಮಗೆ ಗೊತ್ತಿದೆ. ನಿನ್ನಂಥ ವೀರಾಧಿವೀರನೂ, ಬಹುಮುಖ ಪ್ರತಿಭೆಯ ವಿದ್ವಾಂಸನೂ ಆದ ಸೋದರನನ್ನು ಪಡೆದ ನಾವು ನಿಜಕ್ಕೂ ಧನ್ಯರು. ಆಯಿತು ಒಂದು ಸಲ ಶಕರೊಂದಿಗೆ ರಕ್ತ ಸಂಬಂಧವನ್ನು ಬೆಳೆಯಿಸಿದೆವೆಂದರೆ ಮುಂದೆ ಕತ್ತಿ ಎತ್ತುವ ಸಮಯ ಬರಲಿಕ್ಕಿಲ್ಲವೆಂದು ನಮ ಭಾವನೆಯಾಗಿದೆ. ನಮ್ಮ ಭಾವನೆಗೆ ಆಘಾತವುಂಟಾಗದಿರಲಿ ಎಂದು ಮಹಾಕಾಲೇಶ್ವರನಲ್ಲಿ ಪ್ರಾರ್ಥಿಸುತ್ತೇವೆ" ಎಂದು ನುಡಿದಿದ್ದರು.

"ರಾಣೀ! ನಾವು ಶಕರ ವಿರೋಧಿಗಳೂ ಅಲ್ಲ. ಪ್ರೇಮದ ವಿರೋಧಿಗಳೂ ಅಲ್ಲ. ನಮ್ಮಿರ್ವರ ಮಿಳನವು ಎರಡು ಜನಾಂಗಗಳನ್ನು ಎಂದೆಂದಿಗೂ ಬೇರ್ಪಡಿಸಲಾರದಂತಹ ಬೆಸುಗೆಯಾಗಲಿ. ಆ ಬೆಸುಗೆಯು ಸಡಿಲಾಗದಂತೆ

ನಾವು ನಮ್ಮ ಜೀವನದ ಕೊನೆಯುಸಿರಿನ ವರೆಗೆ ಪ್ರಯತ್ನಿಸೋಣ" ಎಂದರು.

ಪ್ರಭುಗಳ ಮಾತುಗಳನ್ನು ಕೇಳಿ ಅಮೃತ ಸವಿದಷ್ಟು ಆನಂದವಾಯಿತು. ಆಗ ನಾವು.—

"ಪ್ರಭುಗಳಿಗೆ, ಶಕರ ಮೇಲೆ ಎಳ್ಳಷ್ಟೂ ದ್ವೇಷವಿಲ್ಲವೆ?" ಎಂದು ಪ್ರಶ್ನಿಸಿದೆವು.

"ನಮ್ಮ ಹೃದಯದಲ್ಲಿ ದ್ವೇಷಕ್ಕೆ ಸ್ಥಾನವಿಲ್ಲ ದೇವಿ! ದ್ವೇಷಕ್ಕೆ ಅಂತವೆಂಬುದು ಇಲ್ಲವೆ ಇಲ್ಲ. ಅದು ಕಡಿಮೆಯಾಗಬೇಕಾದರೆ ಒಂದೇ ಒಂದು ಉಪಾಯವಿದೆ. ಅದುವೇ ಉಪೇಕ್ಷೆ. ದ್ವೇಷವನ್ನು ನಿರ್ಲಕ್ಷಿಸಿ ಬಿಟ್ಟರಾಯಿತು; ಅದು ತಂತಾನೆ ನಿರ್ಮೂಲವಾಗುವದು. ಇನ್ನು ಶಕರ ವಿಷಯ. ಹಿಂದಿನ ತಲೆ ಮಾರಿನವರಿಗೆ ಶಕರು ಭಾರತ ವರ್ಷದ ಜನರಿಗೆ ಪರಕೀಯರಾಗಿದ್ದರು. ನಿಜ. ಆದರೆ ಇಂದು ಶಕರು ಕೂಡ ಭಾರತಿಯರೇ ಆಗಿದ್ದಾರೆ. ಅಂದಾಗ ನಮ್ಮ ನಮ್ಮೊಳಗೆ ವೃಥಾ ಕಲಹ ಬೆಳೆಯಿಸಿಕೊಂಡು ಹೋಗುವದರಲ್ಲಿ ಏನರ್ಥವಿದೆ ? ಅಲ್ಲದೆ ಮಾನವ ಪ್ರೇಮಿಗಳಾದ ನಾವು ವೈರವನ್ನು ಮುಂದುವರಿಸುವದು ಸಾಧ್ಯವೇ ಇಲ್ಲ. ಪ್ರೇಮದಿಂದ ಎಂಥ ಕೆಲಸವನ್ನೂ ಸಾಧಿಸಿಕೊಳ್ಳುವದು ಸಾಧ್ಯವಿದೆ. ಎಂಬುದನ್ನು ಕಂಡು ಕೊಂಡ ನಾವು ಖಡ್ಗಕ್ಕೆ ಅಷ್ಟೊಂದು ಬೆಲೆಯನ್ನು ಕೊಡುವದೇ ಇಲ್ಲ.

"ಇನ್ನೊಂದು ಮಾತು ಪ್ರಿಯತಮೆ ! ನಮ್ಮಿಂದ ನಿಮಗೆ ಎಂದಿಗೂ ತೊಂದರೆಯಾಗುವದಿಲ್ಲ. ನಾವೀರ್ವರೂ ಎರಡು ಜನಾಂಗಗಳನ್ನು ಒಂದೆಡೆ ಸೇರಿಸುವಂಥ; ಪರಸ್ಪರರಲ್ಲಿ ಪ್ರೇಮಾನುರಾಗಗಳನ್ನು ಬೆಳೆಯಿಸುವಂಥ ಕೊಂಡಿಗಳಾಗಿದ್ದೇವೆ. ಈ ಮಾತನ್ನು ನಾವೀರ್ವರೂ ಮರೆಯಬಾರದು. ನಮ್ಮ ಮಾತಿನ ಅರ್ಥವು ನಿಮಗಾಗಿರಬೇಕೆಂದೇ ಭಾವಿಸುತ್ತೇವೆ. ಅದು ಹೋಗಲಿ, ಅಶ್ವಪರೀಕ್ಷಕನ ವಿಷಯನ್ನು ಹೇಳ ಹೊರಟ ನಾವು ಏನನ್ನೋ ಹೇಳತೊಡಗಿದೆವು. ಅಂದ ಹಾಗೆ ಇಂದು ಒಡ್ಡೋಲಗಕ್ಕೆ ಬಂದ ಅಶ್ವಪರೀ

ಕ್ಷಕನು ಬುದ್ಧಿವಂತನೆಂಬುದನ್ನು ನಾವು ಒಪ್ಪಿಕೊಳ್ಳುತ್ತೇವೆ ಆದರೆ ಅವನು ಕೇವಲ ಅಶ್ವಪರೀಕ್ಷಕನಾಗಿರದೆ ಯಾವುದೋ ಅರಸು ಮನೆತನದವನಿರಬೇಕೆಂದು ನಮಗನ್ನಿಸುತ್ತದೆ." ಎಂದರು ಆಗ ನಾವು—

"ಪ್ರಭುಗಳು ಅದು ಹೇಗೆ ಕಂಡು ಹಿಡಿದಿರಿ ?" ಎಂದು ಕೇಳಲು; ಅವರು—

"ರಾಣಿ ! ಮನುಷ್ಯರು ಯಾರು ಹೇಗೆ ಎಂಬುದನ್ನು ಕಂಡು ಹಿಡಿಯುವದು ಅಷ್ಟೇನೂ ತೊಂದರೆಯ ವಿಷಯವಲ್ಲ. ಆ ಯುವಕನು ಇಂದು ಒಡ್ಡೋಲಗಕ್ಕೆ ಬಂದು ತಾನು ಅಶ್ವಪರೀಕ್ಷಕನೆಂದೂ ತನಗೆ ಆಶ್ರಯ ಬೇಕೆಂದೂ ಬೇಡಿದನು. ಅದಕ್ಕೆ ನಾವು ಅವನಲ್ಲಿಯ ವಿದ್ಯೆಯನ್ನು ಪರೀಕ್ಷಿಸಲೋಸುಗ ಲಾಯದೊಳಗಿನದೊಂದು ಕುದುರೆಯನ್ನು ತರಿಸಿ ಅವನೆದುರು ನಿಲ್ಲಿಸಿದೆವು. ಆಗ ಅವನು ನೋಡ-ನೋಡುತ್ತಿರುವಂತೆ ಚಟಕ್ಕನೆ ಕುದುರೆಯ ಮೇಲೆ ಹತ್ತಿ ಕುಳಿತನು. ಆಗ ನಾವು "ಈ ತರುಣನು ಸಾಮಾನ್ಯನಲ್ಲ. ಯಾವುದೋ ದೊಡ್ಡ ಮನೆತನದವನಿರಬೇಕೆಂದು ತರ್ಕಿಸಿದೆವು." ಎಂದರು.

"ಕೇವಲ ಕುದುರೆಯ ಮೇಲೆ ಹತ್ತಿ ಕುಳಿತುಕೊಂಡಿದ್ದಕ್ಕೆ ತಾವು ಹಾಗೆ ಭಾವಿಸಿದರಾ ? "

"ಹೌದು ರಾಣಿ! ಅದೊಂದೇ ಕ್ರಿಯೆಯಿಂದ ನಾವು ಅರಿತುಕೊಂಡೆವು."

"ಪ್ರಭುಗಳ ಮಾತಿನ ಅರ್ಥ ನಮಗಾಗಲಿಲ್ಲ. ದಯವಿಟ್ಟು ಬಿಡಿಸಿ ಹೇಳಬೇಕು. ಕಾರ್ಯಬಾಹುಳ್ಯವಿದ್ದರೆ ಬೇಡ. ಏನೋ ಉತ್ಸುಕತೆಯಿಂದ ಕೇಳುತ್ತಿದ್ದೇವೆ. ಅಷ್ಟೆ !"

"ಹೇಳುವದಕ್ಕೆ ಅಡ್ಡಿ ಏನಿದೆ? ಈಗ ನಮಗೂ ವಿಶ್ರಾಂತಿಯ ಸಮಯ. ನಿಮ್ಮ ಉತ್ಸುಕತೆಯನ್ನು ಭಂಗಗೊಳಿಸುವದು ನಮ್ಮಿಂದ ಎಂದಿಗಾದರೂ ಸಾಧ್ಯವಿದೆಯೆ?" ಎಂದು ನುಡಿದ ಪ್ರಭುಗಳು:

"ಮಹಾರಾಣಿ ! ಆ ಯುವಕನು ನಿಜವಾದ ಅಶ್ವಪರೀಕ್ಷಕನಾಗಿದ್ದರೆ

ಕುದುರೆಯು ಅವನೆದುರು ನಿಂತುಕೊಳ್ಳುತ್ತಲೆ ಅದರ ಸುಳಿಗಳನ್ನು, ಕಾಲುಗಳನ್ನು ಪರೀಕ್ಷಿಸುತ್ತಿದ್ದ. ಆದರೆ ಅದಾವುದನ್ನೂ ಮಾಡದೆ ಒಮ್ಮೆಲೇ ಕುದುರೆಯ ಮೇಲೆ ಕುಳಿತುಕೊಂಡಿದ್ದರಿಂದ, ಈ ತರುಣನು ಅಶ್ವಪರೀಕ್ಷಕನಾಗಿರ ಒಕ್ಕಲಿಯ ಮನೆತನದಲ್ಲಿ ಸುಖದಿಂದ ಬೆಳೆದವನು, ಹಿಂದೆ-ಮುಂದೆ ವಿಚಾರ ಮಾಡದೆ ಕಾರ್ಯಪ್ರವೃತ್ತನಾಗತಕ್ಕವನು ಎಂದುಕೊಂಡೆವು. ಅನಂತರ ನಿನ್ನ ನಿಲುವಿಕೆ, ಮುಖಚರ್ಯೆಯ ಬಗೆಗೆ ವಿವರಿಸಿದರು. ಆಗ ನಮ್ಮ ಎದೆಯು ಒಂದೇ ಸವನೆ ಹೊಡೆದುಕೊಳ್ಳತೊಡಗಿತು. ಏಕೆಂದರೆ ಪ್ರಭುಗಳ ಹೇಳಿಕೆಯ ಮೇಲಿಂದ ಅಶ್ವ ಪರೀಕ್ಷಕನಾಗಿ ಬಂದವನು ನೀನೇ ಎಂಬುದು ನಮಗೆ ಖಚಿತವಾಗಿ ಬಿಟ್ಟಿತು. ಮುಂದೇನು ಮಾಡಬೇಕು ಎಂಬ ಆ ಆಲೋಚನೆಯೊಳಗೆ ಸಿಲುಕಿ ಬಿಟ್ಟೆವು. ಮುಖದ ಮೇಲಿನ ಉತ್ಸಾಹದ ಕಳೆಯು ಇಲ್ಲವಾಯಿತು. ಅದು ಪ್ರಭುಗಳ ಗಮನಕೂ ಬಂದಿತು ಆಗ ಅವರು—

"ರಾಣಿ ಇದೇನು ? ಒಮ್ಮಿಂದೊಮ್ಮೆಲೆ ಮುಖದ ಮೇಲಿನ ಕಳೆಯೇ ಮಾಯವಾಗಿ ಹೋಯಿತಲ್ಲ ? ಅಂಥದೇನಾಯಿತು ?" ಎಂದು ಪ್ರಶ್ನಿಸಿದರು.

ಆಗ ಅವರಿಗೆ ಏನೆಂದು ಉತ್ತರ ನೀಡಬೇಕೆಂಬುದು ನಮಗೆ ಬೇಗ ಹೊಳೆಯಲೇ ಇಲ್ಲ. ಆದರೆ ಹೃದಯದೊಳಗಿನ ವಿಷಯವನ್ನು ಅವರಿಗೆ ತಿಳಿಸದೆ ಬಿಡುವಂತೆಯೂ ಇರಲಿಲ್ಲ. ಕೊನೆಗೆ ಎಲ್ಲವನ್ನೂ ಅವರಿಗೆ ತಿಳಿಸಿ ಹೃದಯದ ಭಾರವನ್ನು ಕಡಿಮೆ ಮಾಡಿಕೊಳ್ಳಬೇಕು. ಮುಂದೆ ಏನಾದರೂ ಆಗಲೊಲ್ಲದೇಕೆ, ಎರ್ಧರಿಸಿಕೊಂಡು—

"ಪ್ರಭುಗಳು ಅನ್ಯಥಾ ಭಾವಿಸಿಕೊಳ್ಳದಿದ್ದರೆ ಒಂದು ವಿಷಯವನ್ನು ಅರಿಕೆ ಮಾಡಿಕೊಳ್ಳಬೇಕೆಂದಿದ್ದೇವೆ." ಎಂದೆವು.

"ನಮ್ಮಲ್ಲಿ ನಿಮಗೆ ನಂಬುಗೆಯಿಲ್ಲವೆ ? "

"ಪ್ರಭುಗಳಲ್ಲಿ ನಂಬುಗೆಯಿಲ್ಲವೆಂದರೆ ನಾವು ನರಕಕ್ಕೆ ಹೋದೇವು."

"ಹಾಗಿದ್ದರೆ ಈ ಪೀಠಿಕೆಯಾತಕ್ಕೆ ? ಹೇಳಬೇಕಾದುದನ್ನು ಸರಳ

ನಾಗಿ ನಿಃಸಂಕೋಚವಾಗಿ ಹೇಳಬಹುದು ನೀವು ಹೇಳುವ ವಿಷಯವು. ಎಂಥವೇ ಆಗಿದ್ದರೂ ನಾವು ಕುಪಿತರಾಗುವದಿಲ್ಲ.”

“ದೊಡ್ಡ ಮನಸ್ಸಿನ ಪ್ರಭುಗಳು ಅಷ್ಟು ಹೇಳಿ ದೀನಳ ಹೃದಯದ ಭಾರವನ್ನು ಕಡಿಮೆ ಮಾಡಿದಿರಿ.”

“ರಾಣಿ ! ನಿಮ್ಮ ಹೃದಯದ ಮೇಲೆ ಅದೆಂಥ ಭಾರ ಬಿದ್ದಿದೆ ? ಅದು ಏಕೆ ಬಿದ್ದಿದೆ ಯೆಂಬುದಂತೂ ನಮಗೆ ಗೊತ್ತಿಲ್ಲ. ಆದರೂ ಅದನ್ನು ಕಡಿಮೆ ಮಾಡಲು ನಾವು ಶಕ್ತಿಮೀರಿ ಪ್ರಯತ್ನಿಸುತ್ತೇವೆ. ಈಗಲಾದರೂ ಹೇಳಬಹುದಲ್ಲ !”

“ಹೇಳುತ್ತೇವೆ ಪ್ರಭು! ಇದೀಗ ತಾವು ಅಶ್ವ ಪರೀಕ್ಷನ ಬಗೆಗೆ ಅಪ್ಪಣೆ ಕೊಡಿಸಿದಿರಿ, ಆ ಬಗ್ಗೆಯೇ ನಮಗೂ ಒಂದೆರಡು ವಿಷಯಗಳನ್ನು ಅರಿತು ಕೊಳ್ಳ ಬೇಕಾಗಿತ್ತು.”

“ಅವನ ಬಗ್ಗೆ ರಾಣಿಯವರೇನು ತಿಳಿದುಕೊಳ್ಳ ಬೇಕಾಗಿತ್ತು ?”

“ಆ, ಅಶ್ವಪರೀಕ್ಷನ ಹೆಸರನ್ನು ತಾವು ಕೇಳಿದಿರಾ ?”

ಎಂದು ನಾವು ತೊದಲುತ್ತಲೇ ಪ್ರಭುಗಳನ್ನು ಕೇಳಿದೆವು. ಆಗ ಅವರು—

“ಇಷ್ಟು ಮಾತಿಗಾಗಿ ರಾಣಿಯವರು ಇಷ್ಟೊಂದು ಬಳಲಬೇಕಾಯಿತೆ ? ಆ ಅಶ್ವಪರೀಕ್ಷನ ಹೆಸರು ರಾಹುಲ !”

ಪ್ರಭುಗಳ ಬಾಯಿಂದ ರಾಹುಲ ಎಂಬ ಶಬ್ದವು ಹೊರಬೀಳುತ್ತಲೇ ನಮಗೆ ಸಿಡಿಲು ಬಡಿದಂತಾಯಿತು. ಪ್ರಭುಗಳು ಎದುರಿಗಿರುವರೆಂಬುದೂ ನಮ್ಮ ಜ್ಞಾಪಕದಲ್ಲುಳಿಯಲಿಲ್ಲ. ಅದನ್ನು ಗುರುತಿಸಿದ ಪ್ರಭುಗಳು—

“ರಾಣಿಯವರಿಗೆ ಇಂದು ಮೈಯಲ್ಲಿ ಸ್ವಾಸ್ಥ್ಯವಿಲ್ಲವೆಂದು ಕಾಣಿಸುತ್ತದೆ. ಇಂದು ನೀವು ವಿಶ್ರಾಂತಿ ಪಡೆಯಿರಿ. ನಮಗೂ ಬೇರೆ ಯಾವುದೋ ಒಂದು ಕಾರ್ಯದ ನೆನಪಾಯಿತು. ಅಲ್ಲಿಗೆ ಹೋಗುತ್ತೇವೆ.” ಎಂದರು.

ಪ್ರಭುಗಳು ಹಾಗೆ ನುಡಿದಾಗಲೇ ನನ್ನ ಅಂತರಂಗದೊಳಗಿನ ದ್ವಂದ್ವವು ಅವರಿಗೆ ತಿಳಿದಿರಬೇಕೆಂದು ನನಗೆನ್ನಿಸಿತು. ಇನ್ನು ಮುಚ್ಚು ಮರೆ ಯೋಗ್ಯವಲ್ಲವೆಂದು ನಿರ್ಧರಿಸಿಕೊಂಡು :

"ಪ್ರಭುಗಳಿಗೆ ನಿಜಕ್ಕೂ ಅಷ್ಟೊಂದು ಕಾರ್ಯ ಬಾಹುಳ್ಯ ವಿದ್ದು ದಾವರೆ ನಮ್ಮದೊಂದು ಮಾತನ್ನು ಕೇಳಿ ಹೋಗಬಹುದು." ಎಂದೆವು. ಆಗ ಅವರು—

"ಅದೇನು ?" ಎಂದು ಅತಿ ಉತ್ಸುಕತೆಯಿಂದ ಕೇಳಿದರು. ಆಗ—

"ಇದೀಗ ತಾವು ಅಶ್ವ ಪರೀಕ್ಷನ ನಿಲುವಿಕೆ, ಮುಖಚರ್ಯೆ ಹಾಗು ಆವನ ಮನೆತನದ ವಿಷಯವನ್ನು ಅಪ್ಪಣೆ ಕೊಡಿಸಿದಿರಿ. ಆಗಲೇ ನಮ ಗೊಂದು ಸಂದೇಹವು ಬಂದಿತು. ಅವನ ಹೆಸರನ್ನು ಕೇಳಿದಾಗಲಂತೂ ಅದು ಇನ್ನಷ್ಟು ನಿಶ್ಚಯವಾಯಿತು. ಅವನೂ ಅರಸು ಕುಮಾರ ಮೊದಲು ಅವನೊಂದಿಗೇ ನಮ್ಮ ವಿವಾಹವು ನಿಶ್ಚಯವಾಗಿದ್ದಿತು. ಅನಂತರ ಚಕ್ರ ವರ್ತಿಗಳೊಂದಿಗೆ ನಡೆದ ಯುದ್ಧದಲ್ಲಿ ನಮ್ಮ ತಂದೆಯವರು ಸೋತರು. ಆಗ ಚಕ್ರವರ್ತಿಗಳು ತಮಗಾಗಿ ನಮ್ಮನ್ನು ತಂದೆಯವರಿಂದ ಪಡೆದುಕೊಂ ಡರು. ನಮ್ಮ ವಿಚಾರಗಳೂ ತಮ್ಮ ಹಾಗೆಯೇ ಇದ್ದವು. ಅಂತೆಯೇ ವಿವಾ ಹಕ್ಕೆ ಒಪ್ಪಿಗೆಯನ್ನಿತ್ತೆವು. ಅಂದರೆ ನಮ್ಮ ಸ್ವಾರ್ಥ ತ್ಯಾಗದಿಂದ ಎರಡು ಜನಾಂಗಗಳಲ್ಲಿಯ ಅಕಾರಣ ಶತೃತ್ವವು, ವಿನಾಕಾರಣದ ರಕ್ತಪಾತವು ನಿಂತು ಹೋಗುತ್ತದೆಯೆಂದರೆ ನಮ್ಮಂತಹ ಪುಣ್ಯವಂತರೇ ಯಾರೂ ಇಲ್ಲ ವೆಂದು ಭಾವಿಸಿಕೊಂಡೆವು. ಹಾಗು ರಾಹುಲನನ್ನು ಅಂತಃಪುರಕ್ಕೆ ಕರೆಯಿಸಿ ಕೊಂಡು ಸ್ವಸಂತೋಷದಿಂದ ಮದುವೆಗೆ ಸಿದ್ಧರಾದುದನ್ನು ತಿಳಿಸಿದೆವು...."

"ಆ ಮಾತಿಗೆ ರಾಹುಲ ಏನೆಂದು ಉತ್ತರಿಸಿದ?" ಪ್ರಭುಗಳು ಮಧ್ಯ ದಲ್ಲಿಯೇ ಪ್ರಶ್ನಿಸಿದರು.

"ಅವನು ಹೆಚ್ಚಿಗೇನನ್ನೂ ಹೇಳಲಿಲ್ಲ. ನಿಮ್ಮ ದಾಂಪತ್ಯ ಜೀವನವು ಸರಿಯಾಗಿ ನಡೆಯಲಿ. ಶಕಕನ್ಯೆಯೋರ್ವಳು ಭಾರತೀಯನನ್ನು ವರಿಸುವದ ರಿಂದ ಪರಸ್ಪರರಲ್ಲಿಯ ವೈಮನಸ್ಸು ಇಲ್ಲವಾಗುತ್ತದೆಂದರೆ ಇದಕ್ಕೂ ಹೆಚ್ಚಿಗೆ

ನನಗೇನು ಬೇಕು? ನೀವು ಸಮ್ರಾಟ್ ಭರ್ತೃಹರಿಗಳೊಂದಿಗೆ ಸದಾ ಸುಖಿಯಾಗಿರಿ. ನಾನು ದೇವರಲ್ಲಿ ಸದಾ ನಿಮ್ಮೀರ್ವರ ಸುಖಕ್ಕಾಗಿಯೇ ಪ್ರಾರ್ಥಿಸುತ್ತ ದಿನಗಳನ್ನು ಕಳೆಯುತ್ತೇನೆ."

ಎಂದು ನೀನು ಆ ದಿನ ಆಡಿದ ಮಾತುಗಳನ್ನೆಲ್ಲ ಪ್ರಭುಗಳೆದುರು ವಿವರಿಸಿದೆ. ಹೃದಯದೊಳಗೆ ಏನೊಂದನ್ನೂ ಇರಿಸಿಕೊಳ್ಳದೆ ಎಲ್ಲವನ್ನೂ ಹೇಳಿ ಬಿಟ್ಟಿದ್ದಕ್ಕೆ ಅವರಿಗೂ ಆನಂದವಾಗಿರಬೇಕು. ಅಂತೆಯೇ—

"ರಾಣಿ! ನಿಮ್ಮದು ನಿಜಕ್ಕೂ ಸರಳ ಹೃದಯ. ಇದ್ದುದನ್ನು ಇದ್ದಂತೆ ಹೇಳಿ ನಮ್ಮ ಮನವನ್ನು ಹಗುರುಗೊಳಿಸಿದಿರಿ. ಇದಕ್ಕಾಗಿ ನಾವು ನಿಮಗೆ ತುಂಬಾ ಕೃತಜ್ಞರಿದ್ದೇವೆ"ಎಂದರು.

ಅನಂತರ ನಾವು ಅರಸರೆದುರು, ನಿನ್ನನ್ನು ಭೆಟ್ಟಿಯಾಗುವ ಇಚ್ಛೆಯನ್ನು ಪ್ರಕಟಗೊಳಿಸಿದೆವು. ಪ್ರಭುಗಳು ಅದಕ್ಕೂ ಒಪ್ಪಿ ಈ ಸಂದರ್ಭವನ್ನು ಒದಗಿಸಿದರು. ಆಗಲೂ ಅವರು—

"ರಾಹುಲನೊಂದಿಗೆ ಭೆಟ್ಟಿಯಾಗುವ ಕಾರಣವೇನು? ಎಂದು ಕೇಳಲೇ ಇಲ್ಲ. ಅದಕ್ಕೆ ಬದಲಾಗಿ ಭೆಟ್ಟಿಗಾಗಿ ರಾಜೋದ್ಯಾನವೇ ಯೋಗ್ಯವೆಂದು ಸೂಚಿಸಿದರು. ಅದಕ್ಕಾಗಿಯೇ ನಾವು ದಾಸಿಯ ಮುಖಾಂತರ ನಿನಗೆ ಇಲ್ಲಿಗೆ ಬರಲು ಹೇಳಿದ್ದೆವು." ಎಂದು ಪಿಂಗಳೆಯು ನುಡಿದಳು.

ಆ ವರೆಗೆ ಪಿಂಗಳೆಯು ಮಾತುಗಳನ್ನು ಕೇಳುತ್ತ ಚಿತ್ರ ಪ್ರತಿಮೆಯಂತೆ ಕುಳಿತುಕೊಂಡಿದ್ದ ರಾಹುಲನು.—

"ರಾಜಮಾತೆ ! ಪ್ರಭುಗಳು ದೇವಾಂಶಸಂಭೂತರೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ದೇವರು ಪ್ರಭುಗಳನ್ನೂ, ತಮ್ಮನ್ನೂ ಸಾವಿರ ವರುಷಗಳ ಕಾಲ ಬದುಕಿಸಲಿ. ಇನ್ನು ನಾನು ಬರುತ್ತೇನೆ."

ಎಂದು ನುಡಿದು ಅಲ್ಲಿಂದ ಹೊರಡಲಣಿಯಾದನು. ಆಗ ಪಿಂಗಳೆಯು

"ಅದು ಸರಿ, ರಾಹುಲ! ಆದರೆ ನಾವು ಮೊದಲು ಮಾಡಿದ ಪ್ರಶ್ನೆಗೆ ಉತ್ತರವೇ ದೊರೆಯಲಿಲ್ಲವಲ್ಲ?"

ಹೋಗಲು ಸಿದ್ಧನಾಗಿದ್ದ ರಾಹುಲನು ಅಲ್ಲಿಯೇ ನಿಂತುಕೊಂಡು—

"ರಾಜಮಾತೆಯವರು ಚಿತ್ತೈಸಬೇಕು. ನನಗೆ ಈ ಜೀವನದಲ್ಲಿಯೇ ಬೇಸರವುಂಟಾಗಿದೆಯೆಂಬುದನ್ನು ಈ ಹಿಂದೆಯೇ ತಮ್ಮೆದುರು ಉಸುರಿದ್ದು ಜ್ಞಾಪಕವಿರಬಹುದು. ತಾವು ಇಲ್ಲಿಗೆ ಬಂದ ನಂತರ ನನಗೆ ನನ್ನ ರಾಜ್ಯದಲ್ಲಿ ಶಾಂತಿಯೇ ದೊರೆಯಲಿಲ್ಲ. ಒಂದೊಂದು ದಿನಗಳು ಒಂದೊಂದು ಯುಗದಂತೆ ಗೋಚರವಾಗತೊಡಗಿದವು. ಅಲ್ಲದೆ ನಮಗೆ ಶಕರಿಗೆ; ಮೊದಲಿನ ನಮ್ಮ ಹಿರಿಯರಂತೆ ತಲೆ ಎತ್ತಿ ಮೆರೆಯುವದೂ ಸಾಧ್ಯವಿಲ್ಲ. ಏಕೆಂದರೆ ಚಕ್ರವರ್ತಿಗಳಾದ ವಿಕ್ರಮಾದಿತ್ಯರಾಯರು ಭಾರತದೊಳಗಿನ ಶಕರನ್ನೆಲ್ಲ; ನಿರ್ವೀರ್ಯರನ್ನಾಗಿ ಮಾಡಿದ್ದಾರೆ. ಹೀಗಾಗಿ ಅಲ್ಲಿಯ—ನನ್ನ ರಾಜಧಾನಿಯಲ್ಲಿಯ—ಅಸಹ್ಯಕಾರವಾದ ಬಾಳಿಗಿಂತ ಅವಂತಿ ನಗರದಲ್ಲಿದ್ದುಕೊಂಡು ಭರ್ತೃಹರಿ ಪ್ರಭುಗಳಿಗೆ ಒಳ್ಳೆಯದಾಗುವಂಥ ಕಾರ್ಯಗಳನ್ನು ಮಾಡಿಕೊಂಡಿದ್ದರೆ ತನ್ಮೂಲಕ ತಮಗೂ ಒಂದು ಬಗೆಯ ಸೇವೆ ಸಲ್ಲಿಸಿದಂತಾಗುತ್ತದೆ ಎಂದುಕೊಂಡು ಇಲ್ಲಿಗೆ ಬಂದೆನು. ಇಲ್ಲಿಯವರೆಗೆ ಬಂದುದಕ್ಕೂ ನನಗೆ ಯೋಗ್ಯವಾದ ಕೆಲಸವೇ ದೊರೆತಿರುವದು. ಈಗ ನಾನು ಅತಿ ಸಂತೋಷದಿಂದಿದ್ದೇನೆ. ನಿಜ ಹೇಳಬೇಕೆಂದರೆ ನನ್ನ ರಾಜಧಾನಿಗಿಂತಲೂ ಹೆಚ್ಚಿನ ಆನಂದ ಇಲ್ಲಿ ನನಗೆ ದೊರೆಯುತ್ತಿದೆ. ತಮ್ಮ ಬಾಯಿಂದ ಪ್ರಭುಗಳ ವಿಷಯವನ್ನು ಕೇಳಿದಾಗಿನಿಂದಲಂತೂ ನಾನು ಇಲ್ಲಿಗೆ ಬಂದುದು ಯೋಗ್ಯವೇ ಆಯಿತು; ಇಂಥವರ ಸೇವೆಯಲ್ಲಿದ್ದರೆ ಜೀವನವು ಸಾರ್ಥಕವಾಗುವದು; ಎಂದುಕೊಂಡಿದ್ದೇನೆ. ರಾಜಮಾತೆಯವರು ದಯವಿಟ್ಟು ಇದಕ್ಕೂ ಹೆಚ್ಚಿಗೆ ಹೇಳಕೂಡದು."

ಎಂದು ನುಡಿದು ರಾಹುಲನು ಪಿಂಗಳೆಗೆ ವಂದಿಸಿ ಅಲ್ಲಿಂದ ಹೋಗಿಬಿಟ್ಟನು. ಅವನ ಮಾತುಗಳನ್ನು ಕೇಳಿ ಪಿಂಗಳೆಗೆ ಹೆಮ್ಮೆಯೆನ್ನಿಸಿ ಅವನು ಹೋದ ದಿಶೆಯನ್ನೇ ನೋಡುತ್ತ ಕುಳಿತುಕೊಂಡಳು. ಅದೇ ಸಮಯಕ್ಕೆ ಆ ವರೆಗೂ ಅಲ್ಲಿಯೇ ಮತ್ತೊಂದು ಪುಷ್ಪವಾಟಿಕೆಯಲ್ಲಿ ಕುಳಿತುಕೊಂಡಿದ್ದ ಭರ್ತೃಹರಿಯು ಪಿಂಗಳೆಯ ಬಳಿಬಂದು—

"ದೇವಿ! ರಾಹುಲನು ನಿಜಕ್ಕೂ ವಿಶ್ವಾಸಾರ್ಹತರುಣನಾಗಿದ್ದಾನೆ. ಅಂಥವನ ಸೇವೆಯು ನಮಗೆ ಅವಶ್ಯಬೇಕು ಎಂದನು.

## ೨

ಈ ರೀತಿಯಾಗಿ ಭರ್ತೃಹರಿ ಪ್ರಭುವಿಗೆ ರಾಹುಲನಂಥ ವಿಶ್ವಾಸಾರ್ಹ ವೀರ ಯೋಧರು ಅನಾಯಾಸವಾಗಿ ದೊರೆಯುತ್ತ ಹೋದುದರಿಂದ ಅವನು—ಭರ್ತೃಹರಿಯು—ರಾಜ್ಯದ ಭಾರವನ್ನು ಪ್ರಧಾನಮಂತ್ರಿಗೊಪ್ಪಿಸಿ ತಾನು ಸಾಹಿತ್ಯ ರಚನೆಯಲ್ಲಿಯೇ ಮಗ್ನನಾಗ ತೊಡಗಿದನು. ತತ್ಪರಿಣಾಮವಾಗಿ ಅವನಿಂದ ಶೃಂಗಾರ ಹಾಗೂ ನೀತಿ ಶತಕಗಳು ರಚಿತವಾದವು.

ಆದರೆ ಭರ್ತೃಹರಿಯ ಈ ಮಾರ್ಗವು ಗೋರಕ್ಷನಾಥನಿಗೆ ಸರಿ ಬರಲಿಲ್ಲ. ಅವನ ಮನದಲ್ಲಿ—ಗೋರಕ್ಷನಾಥನ ಮನದಲ್ಲಿ—ಭರ್ತೃಹರಿಯಿಂದ ಇನ್ನೂ ಹೆಚ್ಚಿನ ಸೇವೆಯನ್ನು ಮಾಡಿಸಿಕೊಳ್ಳ ಬೇಕೆಂದಿದ್ದಿತು. ಅಂದರೆ ಅವನಿಗೆ—ಭರ್ತೃಹರಿಗೆ—ಸನ್ಯಾಸಿಯ ದೀಕ್ಷೆಯನ್ನು ಕೊಟ್ಟು ಅವನಿಂದ ವೈರಾಗ್ಯದ ಬಗೆಗೆ ಸಾಹಿತ್ಯವನ್ನು ಸೃಷ್ಟಿಸಬೇಕಾಗಿದ್ದಿತು. ಆ ಬಗ್ಗೆ ಗೋರಕ್ಷನು ಹಗಲಿರುಳೂ ಚಿಂತಿಸುತ್ತಿದ್ದನು.

ಓರ್ವ ಘನ ವಿದ್ವಾಂಸನು ತನ್ನೆಲ್ಲ ಪ್ರತಿಭೆಯನ್ನು ಶೃಂಗಾರ ಹಾಗೂ ನೀತಿಗಳಲ್ಲಿಯೇ ವೆಚ್ಚಮಾಡುವದು ಅವನಿಗೆ ಸರಿ ಬೀಳಲಿಲ್ಲ. ಅವನಿಂದ ವೈರಾಗ್ಯದ ಬಗೆಗೂ ರಚಿಸಲ್ಪಟ್ಟರೆ ಜಗತ್ತಿಗೆ ಎಷ್ಟೊಂದು ಉಪಕಾರವಾದೀತು; ಎಂದು ಯೋಚಿಸಿದನು. ಆದರೆ.......

ಭರ್ತೃಹರಿಯ ಮನವನ್ನು ವೈರಾಗ್ಯದತ್ತ ತಿರುಗಿಸುವದು ಸಣ್ಣ ಮಾತಾಗಿರಲಿಲ್ಲ. ಏಕೆಂದರೆ ಅವನಿಗೆ ಯಾವುದಕ್ಕೂ ಕಡಿಮೆ ಯಾಗಿರಲಿಲ್ಲ. ಪಿಂಗಳೆಯಲ್ಲದೆ ಪಟ್ಟದ ರಾಣಿಯು ಇದ್ದರೂ ಈರ್ವರೂ ಪತಿಯ ಮನೋಭಿಲಾಷೆಯನ್ನರಿತು ಕೊಂಡು ನಡೆಯುವಂಥರಾಗಿದ್ದರು. ಯೋಗ್ಯರಾದ ಪರಿವಾರ ವರ್ಗವಿದ್ದಿತು. ವಿಶ್ವಾಸುಕ ಪ್ರಧಾನಿ ಹಾಗು ದಂಡನಾಯಕರಿದ್ದರು. ಇಷ್ಟೆಲ್ಲ ಇರುವಾಗ ಅವನಿಗೆ ವೈರಾಗ್ಯದ ನೆನಪಾಗುವದೂ ಸಾಧ್ಯವಿರಲಿಲ್ಲ.

ಏಕೆಂದರೆ ವೈರಾಗ್ಯ ಬರುವದು ಎರಡು ರೀತಿಯಿಂದ. ಮೊದಲನೆಯದು ಸಂಸಾರದಲ್ಲಿ ಜುಗುಪ್ಸೆ ಹುಟ್ಟಿದಾಗ; ಎರಡನೆಯದು, ತನಗಿಂತ ಹೆಚ್ಚಿನ ತ್ಯಾಗಿಗಳು ಕಂಡು ಬಂದಾಗ; ಇವೆರಡರಲ್ಲಿಯೂ ಭರ್ತೃಹರಿಯನ್ನು ಮೀರಿ ಸುವವರು ಯಾರೂ ಇರಲಿಲ್ಲ. ಅಂದರೆ ಅವನಿಗೆ ಸಂಸಾರದಲ್ಲಿ ಜುಗುಪ್ಸೆ ಹುಟ್ಟುವದು ಸಾಧ್ಯವೇ ಇರಲಿಲ್ಲ. ಏಕೆಂದರೆ ಅವನಿಗೆ 'ಪತಿಯ ಇಚ್ಛೆಯನ್ನು ಅರಿತು ನಡೆಯುವಂಥ ಪತ್ನಿಯರು ದೊರೆತಿದ್ದರು." ಅದರಿಂದಾಗಿ ಅವನಿಗೆ ಸಂಸಾರದಲ್ಲಿ ಜುಗುಪ್ಸೆ ಹುಟ್ಟುವದು ಸಾಧ್ಯವೇ ಇರಲಿಲ್ಲ.

ಇನ್ನು ಎರಡನೆಯದು ತ್ಯಾಗದ ವಿಷಯ. ಸ್ವತಃ ಭರ್ತೃಹರಿಯೇ ದೊಡ್ಡ ತ್ಯಾಗಿಯಾಗಿದ್ದನು ಧಾರಾಳತನವು ಅವನಲ್ಲಿ ಮನೆ ಮಾಡಿಕೊಂಡಿದ್ದಿತು. ಹೀಗಾಗಿ ಅವನಿಗಿಂತ ಮಿಗಿಲಾದ ತ್ಯಾಗಿಗಳು ಕಂಡು ಬರುವದು ಕೊಂಚ ದುಸ್ತರದ ಕಾರ್ಯವೇ ಆಗಿದ್ದಿತು. ಈ ವಿಷಯವು ಗೋರಕ್ಷನಾಥನಿಗೂ ತಿಳಿದಿದ್ದಿತು. ಅಂತೆಯೆ ಅವನು ವಿವಂಚನೆಗೊಳಗಾಗಿದ್ದನು. ಕೊನೆಗೊಮ್ಮೆ ಗೋರಕ್ಷನು ಒಂದು ನಿರ್ಧರಕ್ಕೆ ಬಂದು—

"ಸರಿ! ಹೀಗೆಯೇ ಮಾಡತಕ್ಕದ್ದು. ಭರ್ತೃಹರಿಯನ್ನು ದಾರಿಗೆ ತರಲು ಇದುವೇ ಯೋಗ್ಯವಾದ ದಾರಿ" ಎಂದುಕೊಂಡು ಅವಂತಿ ನಗರದ ಕಡೆಗೆ ಹೊರಟನು.

ರಾಜ ಚೂಡಾಮಣಿ, ರಾಜ ಕಿರೀಟ ಧುರೀಣ, ಸಕಲ ಧರ್ಮ ಮರ್ಮ ಪಾರಂಗತ. ಅರಿಭಯಂಕರ, ಶಾರದಾಕೃಪಾ ಪೋಷಿತ, ಮಹಾ ರಾಜಾಧಿರಾಜ ಭರ್ತೃಹರಿಯ ಒಡ್ಡೋಲಗವಲ್ಲಿ ಯಾವುದೋ ಒಂದು ವಿಷಯದ ಚರ್ಚೆಯು ನಡೆಯುತ್ತಿದ್ದಿತು. ಪ್ರಭುಗಳ ಜೊತೆಗೆ ಸರದಾರ—ಸಾಮಂತರೂ ಆ ವಿಷಯದಲ್ಲಿ ತಲ್ಲೀನರಾಗಿ ಬಿಟ್ಟಿದ್ದರು. ಸಮಯದ ಕಡೆಗೆ ಯಾರ ಗಮನವೂ ಇರಲಿಲ್ಲ. ಏಕೆಂದರೆ ಸಮಯವು—ವೇಳೆಯು— ಅವರಿಗರಿಯದ ರೀತಿಯಲ್ಲಿ ಸರಿಯತೊಡಗಿದ್ದಿತು. ಅದೇ ಸಮಯಕ್ಕೆ ಒಡ್ಡೋಲಗದ ಮಹಾದ್ವಾರದ ದ್ವಾರಪಾಲಕನು:

"ಗೋರಕ್ಷನಾಥರು ದಯಮಾಡಿಸಿರುವರು " ಎಂದುಸುರಿದನು.

ತಕ್ಷಣವೇ ಒಡ್ಡೋಲಗದಲ್ಲಿ ವಿಚಿತ್ರ ಪರಿವರ್ತನೆಯಾಯಿತು. ಚರ್ಚೆಯಲ್ಲಿ ಮಗ್ನರಾಗಿದ್ದವರೆಲ್ಲರೂ ಜಾಗ್ರತರಾಗಿದ್ದರು. ಸ್ವತಃ ಪ್ರಭುಗಳೂ ಎದ್ದು ನಿಂತರು. ಸಭಿಕರೂ ಪ್ರಭುಗಳಂತೆಯೇ ಎದ್ದು ನಿಂತುಕೊಂಡರು.

ಆರಡಿ ಎತ್ತರದ, ನಿಲುವಿಕೆಗೆ ತಕ್ಕ ಮೈಕಟ್ಟಿನ ಜಟಾಧಾರಿಯಾದ ಗೋರಕ್ಷನಾಥನು 'ಅಲಖ್ ನಿರಂಜನ್' ಎನ್ನುತ್ತ ಒಡ್ಡೋಲಗದ ಒಳಗೆ ಪ್ರವೇಶಿಸಿದನು. ಆಗ ಒಂದು ಸೂಜಿಬಿದ್ದರೂ ಸದ್ದು ಕೇಳಬರುವಷ್ಟು ನಿಸ್ತಬ್ಧತೆಯು ಒಡ್ಡೋಲಗವನ್ನಾವರಿಸಿತ್ತು. ಆರು ಮೊಳದ ಸಾರುಪಂಚೆಯು ಅವನ ಅವಾಧಸ್ತ್ಯವಾದ ದೇಹದಲ್ಲಿ ಅರ್ಧವನ್ನೂ ಮುಚ್ಚಲು ಅಸಮರ್ಥವಾಗಿದ್ದಿತು. ಹಣೆಯಂತೆ ರಟ್ಟೆಗಳ ಮೇಲೂ ವಿಭೂತಿಯು ಶೋಭಿಸುತ್ತಿತ್ತು. ಎಣ್ಣೆ ಕಾಣದ ತಲೆಗೂದಲುಗಳು ಜಡೆಗಟ್ಟಿ ಹೋಗಿದ್ದುವು. ಆದರೂ ಅವುಗಳನ್ನು ನೋಡಿದರೆ ಒಂದು ಬಗೆಯ ಗೌರವದ; ಆದರದ ಭಾವನೆಯು ಬರುತ್ತಿದ್ದಿತು. ಇಂಥ ಗೋರಕ್ಷನಾಥನು ಬಲದ ಕೈಯಲ್ಲಿ ಹರಿವಾಣ, ಎಡಗೈಯಲ್ಲಿ ಚಮಟಿಯನ್ನು ಹಿಡಿದುಕೊಂಡು, ಒಂದೊಂದೆ ಹೆಜ್ಜೆಗಳನ್ನು ಇರಿಸುತ್ತ ಗಾಂಭೀರ್ಯದಿಂದ ಮುನ್ನಡೆಯ ತೊಡಗಿದನು.

ಆಗ ಭರ್ತೃಹರಿಯು ಸಿಂಹಾಸನದಿಂದ ಕೆಳಗಿಳಿದು ಹೋಗಿ ಗೋರಕ್ಷನನ್ನು ಎದುರ್ಗೊಂಡು ಅವನನ್ನು ಗೌರವದಿಂದ ಕರೆತಂದು ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿದನು. ಹಾಗು ಇಂಥ ಪ್ರಸಂಗಗಳಲ್ಲಿ ಕುಳಿತುಕೊಳ್ಳಲೋಸುಗ ಇರಿಸಲಾದ ಪೀಠದಲ್ಲಿ ತಾನು ಕುಳಿತುಕೊಂಡನು. ಆಗ ಒಡ್ಡೋಲಗದೊಳಗಿನ ಇತರರೂ ಕುಳಿತುಕೊಂಡರು.

ಉಭಯ ಕುಶಲೋಪರಿಯ ಸಂಭಾಷಣೆಗಳು ಮುಗಿದ ನಂತರ ಭರ್ತೃಹರಿಯು ಅವಂತಿ ನಗರಕ್ಕೆ ಆಗಮಿಸಿದ ಕಾರಣಗಳನ್ನು ಕೇಳಲು ಗೋರಕ್ಷನಾಥನು ಒಂದು ಕ್ಷಣ ಗಂಭೀರ ಆಲೋಚನೆಯಲ್ಲಿ ಮಗ್ನನಾಗಿ ಆನಂತರ—

" ಭರ್ತೃಹರಿ ! ಮಗು ತಾಯಿಯನ್ನು ಮರೆಯುವುದು ಸ್ವಾಭಾವಿಕ. ಆದರೆ ತಾಯಿಯು ತನ್ನ ಮಗುವನ್ನು ಮರೆಯಬಾರದಲ್ಲ ! ನೀನು ನಮ್ಮನ್ನು

ನಮ್ಮನ್ನು ಮರೆತು ಬಿಟ್ಟಿ. ನೀನು ಮರೆತಂತೆ ನಾವು ಮರೆತರೆ ನಡೆಯು ತ್ತದೆಯೆ? ಅದಕ್ಕಾಗಿ ನಿನ್ನ ಯೋಗ ಕ್ಷೇಮವನ್ನು ವಿಚಾರಿಸಿಕೊಂಡು ಹೋಗಲು ಕಾನನದಿಂದ ಇಲ್ಲಿಗೆ ಬರಬೇಕಾಯಿತು." ಎಂದು ! ನುಡಿದನು.

"ತಮ್ಮನ್ನು ಮರೆಯುವದು ಎಂದಿಗಾದರೂ ಸಾಧ್ಯವಿದೆಯೇ? ಮಹಾ ಕಾಲೇಶ್ವರನನ್ನು ನಾವು ಪ್ರತಿದಿನವೂ ಪೂಜಿಸುತ್ತೇವೆ. ನಮ್ಮ ದೃಷ್ಟಿಯಲ್ಲಿ ತಾವು ಹಾಗು ಮಹಾ ಕಾಲೇಶ್ವರರು ಒಂದೇ ಆಗಿರುವಿರಿ. ಅಂದಾಗ ತಮ್ಮ ನ್ನು ಮರೆಯುವ ಪ್ರಶ್ನೆಯೇ ಬರುವದಿಲ್ಲ."

"ಭರ್ತೃಹರಿ ! ವಾಗ್ವಾದದಲ್ಲಿ ನಿನ್ನನ್ನು ಗೆಲ್ಲುವದು ಯಾರಿಂದ ಸಾಧ್ಯ ವಿದೆ ? ಆದರೂ ನೀನು ನಮ್ಮ ಮೇಲಿರಿಸಿದ ಭಕ್ತಿಯನ್ನು ಕಂಡು ನಮಗೆ ಅತ್ಯಾನಂದವಾಗಿದೆ. ಆದಕ್ಕಾಗಿಯೇ ನಿನ್ನನ್ನು ಕಾಣಲು. ಆಶೀರ್ವದಿಸಿ ಹೋಗಲು ಇಲ್ಲಿಯವರೆಗೆ ಬಂದಿದ್ದೇವೆ." ಗೋರಕ್ಷನಾಥನೆಂದ.

"ನಮ್ಮ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ಭಾವಿಸುತ್ತೇವೆ. ಏಕೆಂದರೆ ತಮ್ಮಂಥ ಸತ್ಪುರುಷರ ಆಶೀರ್ವಾದವು ಇದ್ದಲ್ಲಿಗೇ ಬರುತ್ತದೆಂದಾಗ ನಾವು ಎಷ್ಟೊಂದು ಭಾಗ್ಯವಂತರಿರಬೇಕು ? ತಮ್ಮ ಆಶೀರ್ವಾದವು ನಮ್ಮ ಮೇಲೆ ಯಾವಾಗಲೂ ಹೀಗೆಯೇ ಇರಲೆಂದು ಮಹಾಕಾಲೇಶ್ವರನಲ್ಲಿ ಪ್ರಾರ್ಥಿ ಸುತ್ತೇವೆ."

"ನೀನು ಅತಿ ವಿನಯಶಾಲಿಯೆಂಬುದು ನಮಗೆ ಗೊತ್ತಿದೆ ಭರ್ತೃಹರಿ! ಮಹಾ ವಿದ್ವಾಂಸನಾದ ನೀನು ದೈವ ಭಕ್ತನೆಂಬುದೂ ನಮಗೆ ಗೊತ್ತಿದೆ. ಅಲ್ಲದೆ ಸಾಧು—ಸತ್ಪುರುಷರನ್ನು ಅತ್ಯಂತ ಆದರದಿಂದ ಕಾಣುವಿಯೆಂಬು ದೂ ನಮಗೆ ಗೊತ್ತಿಲ್ಲದಿಲ್ಲ. ಆದಕ್ಕಾಗಿ ನಾವು ನಿನಗೆ ಕೊಡಲೋಸುಗ ಅಮೂಲ್ಯ ವಸ್ತುವೊಂದನ್ನು ತಂದಿದ್ದೇವೆ."

"ನಿಜಕ್ಕೂ ಇಂದು ನಮ್ಮ ಜೀವನವು ಪಾವನವಾಯಿತೆಂದು ಭಾವಿಸು ತ್ತೇವೆ. ತಾವು ದಯವಿಟ್ಟು ಅನುಗ್ರಹಿಸಲಿರುವದನ್ನು ಪ್ರಸಾದವೆಂದು

ಸ್ವೀಕರಿಸಿ ಜೀವನವನ್ನು ಸಾರ್ಥಕ ಪಡಿಸಿಕೊಳ್ಳುತ್ತೇವೆ. ದಯವಿಟ್ಟು ಅನುಗ್ರಹಿಸಬೇಕು." ಎಂದು ಭರ್ತೃಹರಿಯು ನುಡಿದನು.

"ಭರ್ತೃಹರಿ! ನಿನಗಾಗಿ ನಾವು ಒಂದು ಅಮೂಲ್ಯ ಫಲವನ್ನು ತಂದಿದ್ದೇವೆ. ಅದು ನಮ್ಮ ತಪಸ್ಸಿಗೆ ದೊರೆತ ಅಪ್ರತಿಮ ಪ್ರತಿಫಲವಾಗಿರುವದು. ಅಂದರೆ ಈ ಫಲದ ಮಹಿಮೆಯು ಅಸದೃಶವಾದುದು. ವರ್ಣಿಸಲಸದಳವಾದುದು. ಅಂತೆಯೇ ಇಂತಹ ದುರ್ಮಿಳ ಫಲವನ್ನು ನಿನಗಾಗಿ ತಂದಿರುವೆವು. ನಮ್ಮಂಥವರು ಸೇವಿಸುವುದಕ್ಕಿಂತ ನಿನ್ನಂತಹ ರಾಜ್ಯಪರಿಪಾಲಕನು ಸೇವಿಸಿದರೆ ಜಗತ್ತಿಗೆ ಉಪಕಾರವಾದೀತು, ಎಂದು ಭಾವಿಸಿ ಇಲ್ಲಿಯ ವರೆಗೆ ಬಂದಿದ್ದೇವೆ."

ಎಂದು ಗೋರಕ್ಷನಾಥನು ನುಡಿಯಲು ಭರ್ತೃಹರಿಯು ಆಸನವನ್ನು ಬಿಟ್ಟೆದ್ದು ಅವನ ಬಳಿ ಹೋಗಿ ವಿನೀತನಾಗಿ ನಿಂತುಕೊಂಡು ಕರಗಳನ್ನು ಜೋಡಿಸಿ—

"ಪ್ರಭುಗಳು ಸರಿಯಾಗಿ ಯೋಚಿಸಬೇಕು. ತಾವು ತಂದಿರುವ ಫಲವು ನಿಜಕ್ಕೂ ಮಹಿಮೆಯುಳ್ಳದ್ದೇ ಇರಬೇಕು. ಆದರೆ.... ಆದರೆ ಅಂತಹ ಅಮೂಲ್ಯ ಫಲವನ್ನು ಸೇವಿಸಲು ನಾವು ಅರ್ಹರಿದ್ದೇವೆಯೇ, ಎಂಬ ಸಂಶಯ ಬರುತ್ತಿದೆ"ಎಂದನು.

ಆಗ ಗೋರಕ್ಷನಾಥನು ಹರಿವಾಣದೊಳಗಿಂದ ಫಲವನ್ನು ತೆಗೆದು ಕೈಯೊಳಗೆ ಹಿಡಿದುಕೊಂಡು—

"ನೀನು ಮನದೊಳಗೆ ಆ ಬಗೆಯ ವಿಚಾರವನ್ನು ತಂದುಕೊಳ್ಳಬೇಡ! ಈ ಫಲವನ್ನು ಸೇವಿಸಲು ನೀನು ನಿಜಕ್ಕೂ ಯೋಗ್ಯನಿರುವಿ. ಅಂತೆಯೇ ನಾವು ಇಲ್ಲಿಯ ವರೆಗೆ ಬಂದಿದ್ದೇವೆ. ಅದಕ್ಕಾಗಿ ನೀನು ಈ ಫಲವನ್ನು ಸ್ವೀಕರಿಸು."

ಎಂದು ನುಡಿದ ಗೋರಕ್ಷನಾಥನು ಆ ಫಲವನ್ನು ಭರ್ತೃಹರಿಯ ಕೈಗಿತ್ತು—

"ಭರ್ತೃಹರಿ! ಈ ಫಲದ ಸೇವನೆಯಿಂದಾಗುವ ಪ್ರಯೋಜನವನ್ನು ಹೇಳುತ್ತೇನೆ ಕೇಳು. ಈ ಫಲವನ್ನು ಯಾರು ಸೇವಿಸುವರೋ ಅವರಿಗೆ ಮುಪ್ಪು ಬರುವದೇ ಇಲ್ಲ. ಅವರು ಚಿರ ತಾರುಣ್ಯವನ್ನು ಪಡೆಯುವರು.

ಸಾವು ಕೂಡ ಅವರ ಸನಿಹಕ್ಕೆ ಸುಳಿಯುವದಿಲ್ಲ. ಇಂತಹ ಅಮೂಲ್ಯ ಫಲ ವನ್ನು ನೀನು ಸೇವಿಸಿ, ರಾಜ್ಯ ಪರಿಪಾಲನೆ ಮಾಡುತ್ತ ಅಚಂದ್ರಾರ್ಕ ಬಾಳು" ಎಂದನು.

"ಪ್ರಭುಗಳ ಕೃಪಾಶೀರ್ವಾದದಿಂದ ನಮ್ಮ ಜನ್ಮವು ಪಾವನವಾ ಯಿತು." ಎಂದು ಭರ್ತೃಹರಿಯು ಫಲವನ್ನು ಸ್ವೀಕರಿಸಿದನು.

ಅಲ್ಲಿಗೆ ಅಂದಿನ ಒಡ್ಡೋಲಗದ ಕಾರ್ಯಗಳು ಪೂರ್ತಿಗೊಂಡವು. ಹಾಗು ಭರ್ತೃಹರಿಯು ಆತುರದಿಂದ ಅರಮನೆಯನ್ನು ಪ್ರವೇಶಿಸಿದನು.

೦ ೦ ೦

ಅರಮನೆಯೊಳಗೆ ಪ್ರವೇಶಿಸಿದ ಭರ್ತೃಹರಿಯನ್ನು ಪಿಂಗಳೆಯು ಅತಿ ಆದರದಿಂದಲೇ ಸ್ವಾಗತಿಸಿದಳು. ಆಸನಾರೂಢನಾದ ಭರ್ತೃಹರಿಯು—

"ರಾಣಿ! ಇಂದು ನಿಮಗೊಂದು ಅಮೂಲ್ಯ ಕಾಣಿಕೆಯನ್ನೀಯಲು ಇಲ್ಲಿಗೆ ಬಂದಿದ್ದೇವೆ" ಎಂದ.

"ಪ್ರಭುಗಳು ನಮಗೆ ಯಾವುದರ ಕೊರತೆಯೇ ಬಾರದಂತೆ ನೋಡಿ ಕೊಳ್ಳುತ್ತಿದ್ದಾರೆ. ಹೀಗಿರುವಾಗ ನಮಗೆ ಮತ್ತೆ ಕಾಣಿಕೆಯ ಅವಶ್ಯಕತೆ ಯೇನಿದೆ?" ಪಿಂಗಳೆಯೆಂದಳು.

"ಹಾಗಲ್ಲ ದೇವಿ! ಇಂದು ನಾವು ನಿಮಗೆ ಕೊಡುತ್ತಿರುವ ಕಾಣಿ ಕೆಯು ಅಪ್ರತಿಮವಾದುದೂ, ಅಸದೃಶವಾದುದೂ, ಆಗಿದೆ. ಅಲ್ಲದೆ ಅದು ಯೋಗಿವರ್ಯರೊಬ್ಬರಿಂದ ನಮಗೆ ದೊರೆತಿದೆ. ಅಂದಾಗ ಅದರ ಮಹಿಮೆಯು ಹೇಗಿರಬೇಕೆಂಬುದನ್ನು ನೀವೇ ವಿಚಾರ ಮಾಡಬೇಕು."

"ತಾವು ತಂದಿರುವ ಕಾಣಿಕೆಯು ಅಷ್ಟೊಂದು ಅಮೂಲ್ಯವಾಗಿದ್ದರೆ ಅಂಥದು ತಮಗೇ ಯೋಗ್ಯ!"

"ಇಂದು ನಮ್ಮ ಮಾತಿಗೆ ಎದುರಾಡಬೇಡಿ ದೇವಿ! ಈ ಅಮರ ಫಲ ವನ್ನು ದಯವಿಟ್ಟು ಸ್ವೀಕರಿಸಿರಿ. ಇದನ್ನು ಸೇವಿಸಿದವರು ಅಖಂಡ ತಾರು ಣ್ಯವನ್ನು ಪಡೆಯನ್ನು ಪಡೆಯುತ್ತಾರೆ. ಅಲ್ಲದೆ ಮರಣವೂ ಅವರ ಸನಿಹಕ್ಕೆ ಸುಳಿಯಲಾರದೆಂದು ಯೋಗಿಗಳು ಹೇಳಿರುವರು. ಅಂತೆಯೇ ನಾವು ನಿಮ ಗಿದನ್ನು ಕೊಡುತ್ತಿದ್ದೇವೆ. ಏಕೆಂದರೆ ನೀವು ಸದಾ ಚಿರತಾರುಣ್ಯವತಿಯ ರಾಗಿರಬೇಕೆಂಬುದು ನಮ್ಮ ಅಭಿಪ್ರಾಯ."

"ಪ್ರಭುಗಳ ಅಭಿಪ್ರಾಯವು ನಮಗರ್ಥವಾಯಿತು. ತಮ್ಮ ಆಜ್ಞೆಯಂತೆ ಈ ಫಲವನ್ನು ಸೇವಿಸಲು ನಾವು ಸಿದ್ಧರಿದ್ದೇವೆ. ಆದರೆ ಇದಕ್ಕೆ ಒಂದೇ ಒಂದು ಆತಂಕವಿದೆ. ಅದನ್ನು ಹೇಳಬಹುದಲ್ಲವೆ.?"

"ಧಾರಾಳವಾಗಿ ಹೇಳಬಹುದು!"

"ಈ ಫಲವನ್ನು ನಾವು ಸೇವಿಸಿದರೆ ಚಿರತಾರುಣ್ಯ ಲಭಿಸುವದೆಂದು ತಾವು ಅಪ್ಪಣೆ ಕೊಡಿಸಿದಿರಿ."

"ಹೌದು. ಯೋಗಿಗಳೂ ಕೂಡ ಈ ಫಲದ ಬಗ್ಗೆ ಹಾಗೆಯೇ ಹೇಳಿದರು"

"ಆದು ಸರಿ. ಅಂಥ ಅಮೂಲ್ಯ ನಾವು ಸೇವಿಸಬೇಕೆಂದು ತಾವು ಇಚ್ಛೆ ಪಟ್ಟಿರಿ. ಇದರ ಮೇಲಿಂದ ತಾವು ನಮ್ಮನ್ನು ಎಷ್ಟು ಪ್ರೀತಿಸುತ್ತಿರುವಿರೆಂಬುದು ಗೊತ್ತಾಯಿತು. ಆದರೆ ನಾವು ತಮ್ಮನ್ನು ಎಷ್ಟು ಪ್ರೀತಿಸುತ್ತಿದ್ದೇವೆಂಬುದನ್ನು ಮಾತ್ರ ತಾವು ಅರಿತುಕೊಳ್ಳಲಿಲ್ಲ. ಅದಕ್ಕಾಗಿ ನಮಗೆ ವಿಷಾದವಾಗುತ್ತಿದೆ." ಪಿಂಗಳೆಯೆಂದಳು,

ಪಿಂಗಳೆಯ ಮಾತುಗಳನ್ನು ಕೇಳಿ ಭರ್ತೃಹರಿಗೆ ಆಚ್ಚರಿಯಾಯಿತು. ಏಕೆಂದರೆ ಇಂಥ ಅಮೂಲ್ಯ ಫಲವು ದೊರೆತಾಗ ಪಿಂಗಳೆಯು ಅತ್ಯಾನಂದದಿಂದ ಸೇವಿಸುವಳೆಂದೇ ಅವನು ಭಾವಿಸಿದ್ದನು. ಆದರೆ ಅವಳ ಬಾಯಿಂದ ಅನಿರೀಕ್ಷಿತವಾಗಿ ಹೊರಟ ಮಾತುಗಳನ್ನು ಕೇಳಿ ಒಂದು ಕ್ಷಣ ಏನೂ ತಿಳಿಯದೆ ಕುಳಿತು ಬಿಟ್ಟನು. ಮರುಗಳಿಗೆಯಲ್ಲಿಯೇ ಅವನು—

"ದೇವಿಯವರು ಹೇಳುತ್ತಿರುವದು ನಮಗೆ ಅರ್ಥವಾಗುತ್ತಿಲ್ಲ. ನಾವು ಎಂದೂ ನಿಮ್ಮ ಪ್ರೇಮದ ಬಗ್ಗೆ ಸಂದೇಹವನ್ನು ವ್ಯಕ್ತಗೊಳಿಸಿಲ್ಲವಲ್ಲ.!" ಎಂದನು.

"ಅದನ್ನು ನಮ್ಮ ಸೌಭಾಗ್ಯವೆಂದೇ ನಾನು ಭಾವಿಸುತ್ತೇವೆ" ಪಿಂಗಳೆಯೆಂದಳು" ಈ ವರೆಗೆ ಮಾತ್ರ ಹಾಗಿರಲಿಲ್ಲ. ಆದರೆ ಇದೀಗ ಮಾತ್ರ ಆ ಬಗೆಯ ಭಾವನೆಯನ್ನು ವ್ಯಕ್ತಗೊಳಿಸುತ್ತಿರುವಿರಿ!"

"ದೇವಿ! ನಿಮ್ಮ ಮಾತಿನ ಓಘವು ಎತ್ತ ಓಡುತ್ತಿದೆಯೆಂಬುದೇ ನಮಗೆ ತಿಳಿಯದಂತಾಗಿದೆ. ರಾಣಿಯರು ದಯವಿಟ್ಟು ಈ ಬಗೆಯ ಮಾತುಗಳನ್ನಾಡದೆ ನೇರವಾಗಿ ಹೇಳಿ ಬಿಡಬೇಕು."

"ಹಾಗಿದ್ದರೆ ಕೇಳಿ! ತಾವು ನಮ್ಮನ್ನು ಅತಿಯಾಗಿ ಪ್ರೀತಿಸುತ್ತೀರಿ. ಈ ಮಾತಿಗೆ ತಾವು ನಮಗಾಗಿ ತಂದಿರುವ ಅಮರ ಫಲವೇ ಸಾಕ್ಷಿ. ಆದರೆ ತಮ್ಮನ್ನು ನಾವು ನಮ್ಮ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವಾಗ ಈ ಫಲವನ್ನು ಸೇವಿಸುವದು ಹೇಗೆ ಸಾಧ್ಯವಿದೆ?

"ಅಂಥ ತೊಂಗರೆಯೇನಿದೆ?"

"ಈ ಫಲವನ್ನು ಸೇವಿಸಿದರೆ ನಾವು ಚಿರ ಯೌವ್ವನೆಯರಾಗುವೆವೆಂದು ಅಪ್ಪಣೆಕೊಡಿಸಿದಿರಿ. ನಾವು ಚಿರ ತಾರುಣ್ಯವತಿಯರಾಗಿ ಉಳಿದುಕೊಂಡಾಗ ತಾವು ಮುಂದೆ ವೃದ್ಧರಾಗುವದು ಸ್ವಾಭಾವಿಕ. ಅಂಥ ಸಮಯದಲ್ಲಿ ನಾವು ಹೇಗೆ ಬದುಕಬಲ್ಲೆವು ಎಂಬುದನ್ನು ಪ್ರಭುಗಳು ವಿಚಾರ ಮಾಡಿದ್ದೀರಾ? ತಮ್ಮನ್ನು ಅರಗಳಿಗೆಯೂ ಅಗಲಿರಲು ಇಚ್ಛಿಸದ ನಾವು ಇಂಥ ಫಲವನ್ನು ಸ್ವೀಕರಿಸುವದು ಎಂದಿಗಾದರೂ ಸಾಧ್ಯವಿದೆಯೆ? ಯೋಗಿವರೇಣ್ಯರು ದಯಪಾಲಿಸಿದ ಈ ಫಲವು ಅತ್ಯಮೌಲ್ಯವಾಗಿರಬಹುದು. ಆದರೆ ನಮ್ಮ ಪಾಲಿಗೆ ಮಾತ್ರ ಕಾಳಕೂಟ ವಿಷವೆಂದು ಭಾವಿಸುತ್ತೇವೆ. ಅದಕ್ಕಾಗಿ ನಾವು ಇದನ್ನು ಸೇವಿಸಲಾರೆವು. ಅದರ ಬದಲು ತಾವೇ ಇದನ್ನು ಸೇವಿಸಿ ಚಿರತರುಣರಾಗಿ ಭಾರತ ವರ್ಷವನ್ನು ಪರಿಪಾಲಿಸಿರಿ. ಅಂದರೆ ಜಗತ್ತಿಗಾದರೂ ಕಲ್ಯಾಣವಾದೀತು."

"ದೇವಿ! ಇಂದು ನೀವು ನನ್ನ ಕಣ್ಣು ತೆರೆಯಿಸಿದಿರಿ. ಈ ಫಲವನ್ನು ನಿಮಗರ್ಪಿಸಲು ಬಂದಾಗ ನಮ್ಮೆದುರು ನಿಮ್ಮ ಮೂರ್ತಿಯೇ ನಿಂತುಕೊಂಡಿದ್ದಿತು. ಅದು ಯಾವಾಗಲೂ ಹಾಗೆಯೇ ಇರಬೇಕು, ಎಂಬ ಇಚ್ಛೆಯಿಂದ ಅಂದರೆ ನಿಮಗೆ ವೃದ್ಧಾಪ್ಯವೇ ಬರದಿರಲಿ, ನಮ್ಮ ಹೃದಯದ ಅಧಿದೇವತೆಯು ಸದಾ ತಾರುಣ್ಯವತಿಯಾಗಿಯೇ ಉಳಿಯಲಿ ಎಂಬ ಇಚ್ಛೆಯಿಂದ ಬಂದಿದ್ದೆವು. ಆದರೆ ನಿಮ್ಮ ಮಾತುಗಳು ನಮ್ಮನ್ನು ಎಚ್ಚರಿಸಿದವು."

"ತಮ್ಮ ಅಪಾರ ಪ್ರೇಮಕ್ಕಾಗಿ ನಾವು ಅಜನ್ಮ ಋಣಿಯಾಗಿದ್ದೇವೆ. ಈ ಪ್ರೇಮವು ನಮ್ಮ ಮೇಲೆ ಶಾಶ್ವತವಾಗಿರಲಿ, ಇಷ್ಟೇ ನಮ್ಮ ಪ್ರಾರ್ಥನೆ. ಹಾಗು ಈ ಅಮೂಲ್ಯ ಫಲವನ್ನು ದಯವಿಟ್ಟು ತಾವೇ ಸ್ವೀಕರಿಸಬೇಕು. ತಾವು ಹಾಗೆ ಮಾಡಿದಿರೆಂದರೆ ನಮ್ಮಂಥವರು ಸಾವಿರಾರು ಜನರಿಗೆ ಆಶ್ರ

ಯಸಿಕ್ಕುವದು. ಹಾಗು ಸಾಹಿತ್ಯ ದೇವಿಯ ಉದ್ಯಾನದಲ್ಲಿ ಇನ್ನೂ ಅನೇಕ ಬಗೆಯ ವಲ್ಲರಿಗಳು ಹುಟ್ಟಿಕೊಳ್ಳಬಹುದು."

"ದೇವಿಯವರು ಹೇಳುತ್ತಿರುವದು ನಿಜ. ಆದರೆ ತಾವು ವೃದ್ಧಾಪ್ಯದಲ್ಲಿ ಕಾಲಿರಿಸಿದಾಗ ನಾವು ಹೇಗೆ ಜೀವಿಸಬೇಕು. ? ಎಂದು ವಿಚಾರ ಮಾಡಿದಂತಿಲ್ಲ-"

"ಪ್ರಭುಗಳು ನಮ್ಮ ಮಾತನ್ನು ನಮಗೆ ತಿರುಗಿಸುತ್ತಿರುವಂತಿದೆ."

"ಹೌದು ಸತ್ಯವು ಯಾವಾಗಲೂ ಸತ್ಯವೇ ಅಲ್ಲವೆ ?

"ಅದು ನಿಜ. ಆದರೆ ನಮ್ಮ ವಿಷಯ ಬೇರೆ. ತಮ್ಮ ಮಾತು ಬೇರೆ ತಾವು ವೃಕ್ಷದಂತಿದ್ದರೆ ನಾವುಗಳೆಲ್ಲ ರೆಂಬೆಗಳಿದ್ದಂತೆ."

"ರೆಂಬೆಗಳು ಸರಿಯಾಗಿದ್ದರೆ ವೃಕ್ಷಕ್ಕೊಂದು ಶೋಭೆಬರುತ್ತದೆ. ಪೂರ್ಣತ್ವ ಬರುತ್ತದೆ. ಎಂಬುದನ್ನು ದೇವಿಯವರು ಮರೆತಂತೆ ಕಾಣುತ್ತದೆ."

"ಮಾತಿನಲ್ಲಿ ತಮ್ಮನ್ನು ಗೆಲ್ಲುವದು ನಮ್ಮಿಂದ ಎಂದಿಗಾದರೂ ಸಾಧ್ಯವಿದೆಯೆ ? ಅದೇನೇ ಇರಲಿ. ಆದರೆ ನಾವು ಮಾತ್ರ ಈ ಫಲವನ್ನು ಸೇವಿಸಲಾರೆವು."

"ಅದಂತೂ ತಿಳಿದಂತಾಯಿತು. ಆದರೆ ಯೋಗಿವರೇಣ್ಯರು ರಾಜಧಾನಿಯ ವರೆಗೆ ಬಂದು ದಯಪಾಲಿಸಿದಂಥ ಈ ಅಮೂಲ್ಯ ಫಲವು ಅನ್ಯಾಯವಾಗಿ ಹಾಳಾಗಬೇಕೆ, ಎಂಬುದು ನಮ್ಮ ಮನವನ್ನು ಪೀಡಿಸತೊಡಗಿದೆಯಲ್ಲ. !"

ಎಂದು ನುಡಿದು ಭರ್ತೃಹರಿಯು ಕೈಯಲ್ಲಿದ್ದ ಫಲವನ್ನು ಅಲ್ಲಿಯೇ ಇದ್ದ ಬಂಗಾರದ ತಟ್ಟೆಯೊಳಗಿರಿಸಿ ಸುಮ್ಮನೆ ಕುಳಿತುಕೊಂಡನು. ಪಿಂಗಳೆಯೂ ಏನನ್ನೋ ಯೋಚಿಸುತ್ತ ಕುಳಿತುಕೊಂಡಳು. ನಾಲ್ಕಾರು ಕ್ಷಣಗಳ ವರೆಗೆ ಯಾರೂ ಮಾತನಾಡಲಿಲ್ಲ. ಕೊನೆಗೆ ಪಿಂಗಳೆಯೇ ಒಂದು ನಿರ್ಧಾರಕ್ಕೆ ಬಂದು......

"ಒಂದು ವಿಷಯ. ಅರಿಕೆಮಾಡಿಕೊಳ್ಳ ಬಹುದೆ ?" ಎಂದಳು

"ತಮ್ಮ ಮನದೊಳಗಿದ್ದುದನ್ನು ದೇವಿಯವರು ಧಾರಾಳವಾಗಿ ಹೇಳಬಹುದು. ಯಾವ ಬಗೆಯ ಸಂಕೋಚವನ್ನು ತೆಗೆದುಕೊಳ್ಳ ಕೂಡದು." ಭರ್ತೃಹರಿ ನುಡಿದ.

"ನಾವು ಈ ಫಲವನ್ನು ರಾಹುಲನಿಗೆ ಕೊಟ್ಟರೆ ಹೇಗೆ ?" ಪಿಂಗಳೆ ಅಂಜುತ್ತಂಜುತ್ತ ಪ್ರಶ್ನಿಸಿದಳು.

"ಈ ಅಮೂಲ್ಯ ಫಲವನ್ನು ರಾಹುಲನಿಗೆ ಕೊಡುವದೇ ? ಕಾರಣ?" ಭರ್ತೃಹರಿ ಆಶ್ಚರಿಯಿಂದ ಮರು ಪ್ರಶ್ನೆ ಹಾಕಿದ.

"ಕಾರಣ ವಿಷ್ಟೇ ! ನಮಗಾಗಿ ಅವನು ಬಹು ದೊಡ್ಡ ತ್ಯಾಗ ಮಾಡಿದ್ದಾನೆ. ನಾವೀರ್ವರೂ ಜೀವಿಸಿರುವ ವರೆಗೆ ರಾಹುಲನು ಗೃಹಸ್ಥ ಧರ್ಮವನ್ನು ಸ್ವೀಕರಿಸಲಾರ. ಅದಕ್ಕಾಗಿ ಅವನಿಗೆ ಕೊಟ್ಟರೆ........"

"ದೇವಿಯವರಿಗೆ ತಾವು ಏನು ಮಾತನಾಡುತ್ತಿರುವರೆಂಬುದು ತಿಳಿದಿದೆಯೆ ?"

"ಚನ್ನಾಗಿ ತಿಳಿದಿದೆ ಪ್ರಭು. ರಾಹುಲನು ಹೀಗೆಯೇ ಇದ್ದರೆ ಬಹು ಕಾಲ ಬದುಕಲಾರ. ನಮ್ಮ ಶ್ರೇಯಸ್ಸೇ ತನ್ನ ಜೀವನದುಸಿರೆಂದು ಭಾವಿಸಿರುವ ಅವನು ಎಷ್ಟು ದಿನ ಬದುಕುವದು ಸಾಧ್ಯವಿದೆ.?"

"ಅದು ಸರಿ. ಆದರೆ ಅಷ್ಟಕ್ಕೇ ಈ ಅಮೂಲ್ಯ ಫಲವನ್ನು ಅವನಿಗೀಯುವದೇ ?"

"ಪ್ರಭುಗಳು ಶಾಂತ ರೀತಿಯಿಂದ ವಿಚಾರ ಮಾಡಬೇಕು. ನಮ್ಮ ನಂತರವಾದರೂ ರಾಹುಲನು ಚೆನ್ನಾಗಿರಲಿ ಎಂಬುದು ನಮ್ಮ ಅಪೇಕ್ಷೆ. ಹಾಗೆ ಮಾಡುವದರಿಂದ, ನಮ್ಮಿಂದ ದುಃಖಕ್ಕೆ ಈಡಾದವನಿಗೆ ಸಹಾಯ ಮಾಡಿದಂತಾಗುತ್ತದೆ. ಅಷ್ಟೆ !"

"ಧನ್ಯ ದೇವಿ. ನಿಮ್ಮ ಗುಣಕ್ಕೆ ನಾವು ಮಾರುಹೋಗಿದ್ದುದು ಇಂದಿಗೆ ಸಾರ್ಥಕವಾಯಿತು. ನಿಮ್ಮ ಮನಸ್ಸಿಗೆ ಬಂದ ಹಾಗೆ ಈ ಫಲವನ್ನು ಉಪಯೋಗಿಸಬಹುದು. ಯಾವ ಕಾರಣಕ್ಕಾಗಿ ನಿಮಗಿದು ಬೇಡವೋ ಅದೇ ಕಾರಣಕ್ಕಾಗಿ ನಮಗೂ ಬೇಡ. ಅದಕ್ಕಾಗಿ ರಾಹುಲನಿಗೆ ಕೊಟ್ಟು ಬಿಡಿರಿ."

"ಅಂದರೆ.? ರಾಹುಲನಿಗೆ ನಾವು ಒಬ್ಬರೇ ಕೊಡಬೇಕೆ ?"

"ಹೌದು. ಆ ಸಮಯದಲ್ಲಿ ನಾವು ಏತಕ್ಕೆ ಇರಬೇಕು?"

"ಪ್ರಭುಗಳು ತಪ್ಪುತ್ತಿದ್ದೀರಿ. ನಾವೀರ್ವರೂ ಆಶೀರ್ವದಿಸಿ ರಾಹುಲನಿಗೆ ಇತ್ತುದಾದರೆ ಶ್ರೇಯಸ್ಕರವಾದೀತು. ಅಲ್ಲವೆ ?

"ಹೌದು ದೇವಿ ! ನಿಮ್ಮ ಮಾತು ನಿಜ. ಹಾಗೆಯೇ ಮಾಡೋಣ"

ಎಂದು ನುಡಿದು ಭರ್ತೃಹರಿಯು ರಾಹುಲನನ್ನು ಕರೆತರಲು ಚಾರನನ್ನು ಅಟ್ಟಿದನು. ಆಗ ಅವನ ಮನದಲ್ಲಿ "ತ್ಯಾಗದಲ್ಲಿ ಪಿಂಗಳೆಯು ತನಗಿಂತ ಯಾವುದರಲ್ಲಿಯೂ ಕಡಿಮೆಯಿಲ್ಲ" ಎಂಬುದು ನಿಶ್ಚಿತವಾಯಿತು.

ಮುಂದೆ ಸ್ವಲ್ಪ ಸಮಯದಲ್ಲಿಯೇ ರಾಹುಲನು ಅಲ್ಲಿಗೆ ಬಂದನು. ತನ್ನನ್ನು ಅರಮನೆಗೆ ಏತಕ್ಕೆ ಕರೆಯಿಸಿರಬಹುದೆಂದು ಅವನು ದಿಗಿಲುಗೊಂಡೇ ಬಂದಿದ್ದನು. ಆದರೆ ಅರಸು-ಅರಸಿಯರೀರ್ವರೂ ಸಂತೋಷದಿಂದ ಸ್ವಾಗಸಿದ್ದನ್ನು ಕಂಡು ಅವನಿಗೆ ಕೊಂಚ ನೆಮ್ಮದಿಯಾಯಿತು. ಆಗ ಪಿಂಗಳೆಯು ಅವನಿಗೆ ಕರೆಕಳುಹಿದ ಕಾರಣವನ್ನು ವಿವರಿಸಿ, ಆ ಫಲವನ್ನು ಅವನಿಗಿತ್ತಳು. ಆನಂತರ ಅರಸ-ಅರಸಿಯರೀರ್ವರೂ ಅವನಿಗೆ ಆಶೀರ್ವಾದ ಮಾಡಿ ಕಳುಹಿಸಿದರು.

* * *

ಅರಮನೆಯಿಂದ ಮರಳುವಾಗ ರಾಹುಲನಿಗೆ ದಿಕ್ಕೇ ತಿಳಿಯದಂತಾಗಿತ್ತು. ಹಾಗು ರಾಜ-ರಾಣಿಯರ ತ್ಯಾಗದಿಂದ ಅವನು ಅರೆಹುಚ್ಚನಾಗಿಬಿಟ್ಟಿದ್ದನು. ಅವರೆದುರು ಹೆಚ್ಚು ವಾದಿಸಲಿಚ್ಛಿಸದೆ ಹಾಗೆಯೇ ತೆಗೆದುಕೊಂಡು ಬಂದಿದ್ದ ಅಮರ ಫಲವನ್ನು ತಾನೂ ಸೇವಿಸಕೂಡದು ಎಂದು ನಿರ್ಧರಿಸಿದನು. ಏಕೆಂದರೆ ಸ್ವತಃ ಸಮ್ರಾಟರೇ ಇಂಥ ತ್ಯಾಗಕ್ಕೆ ಸಿದ್ಧರಾಗಿರುವಾಗ ನಾನೂ ಏತಕ್ಕೆ ತ್ಯಾಗಿಯಾಗಬಾರದು? ಎಂಬುದು ಅವನ ಮನೀಷೆಯಾಗಿತ್ತು.

ಆನಂತರ, ಈ ಫಲವನ್ನು ಯಾರಿಗೆ ಕೊಡಬೇಕು ಎಂಬ ಹೊಸ ಚಿಂತೆಯು ಅವನ ಮನವನ್ನಾವರಿಸಿತು. ಕೊನೆಗೆ ಅವನು ಅದನ್ನು—ಆ ಫಲವನ್ನು—ರಾಜನರ್ತಕಿಗೆ ಕೊಡಬೇಕೆಂದು ನಿರ್ಧರಿಸಿದನು. ಏಕೆಂದರೆ ನರ್ತಕಿಯ ಜೀವನವು ಅವಳಲ್ಲಿ ರೂಪ, ಲಾವಣ್ಯ ಹಾಗು ತಾರುಣ್ಯಗಳಿರುವವರೆಗೆ ಮಾತ್ರ. ಅವುಗಳು ಇಲ್ಲವಾದಾಗ ಅವಳನ್ನು ಯಾರೂ ಮಾತನಾಡಿಸುವದಿಲ್ಲ. ಅದಕ್ಕಾಗಿ ಇದನ್ನು ಅವಳಿಗೇ ಕೊಡಬೇಕು ಎಂದು ನಿರ್ಧರಿಸಿ ರಾಜನರ್ತಕಿಯ ಮನೆಗೆ ಹೋಗಿ,ಅವಳಿಗೆ ಆ ಫಲವನ್ನಿತ್ತು ಅದರ ಮಹತ್ವವನ್ನೂ ತಿಳಿಸಿ ಬಂದನು.

ರಾಜನರ್ತಕಿಗೂ ದಿಗಿಲಾಯಿತು. ಇಂಥ ಫಲವನ್ನು ತಾನು ಸೇವಿಸುವದಕ್ಕಿಂತ ಅರಸನು ಸೇವಿಸಿದರೆ ಒಳ್ಳೆಯದು. ಏಕೆಂದರೆ ಇಂಥ ಅರಸನು ಇದ್ದರೆ ನಮ್ಮಂಥ ಸಾವಿರಾರು ನರ್ತಕಿಯರು ಉದರ ನಿರ್ವಹಣೆ ಮಾಡಿಕೊಳ್ಳಬಹುದು ಎಂದು ನಿರ್ಧರಿಸಿ ಒಡ್ಡೋಲಗಕ್ಕೆ ಹೋಗಿ ಆ ಫಲವನ್ನು ಭರ್ತೃಹರಿಗೆ ಕೊಟ್ಟಳು. ಪಿಂಗಳೆಯ ತ್ಯಾಗದಿಂದ ಮೊದಲೇ ಚಂಚಲವಾಗಿದ್ದ ಭರ್ತೃಹರಿಯ ಮನಸ್ಸು ರಾಹುಲ ಹಾಗು ರಾಜನರ್ತಕಿಯರ ತ್ಯಾಗದಿಂದ ಸಂಪೂರ್ಣವಾಗಿ ವೈರಾಗ್ಯದೆಡೆಗೆ ತಿರುಗಿತು. ಹಾಗು ಗೋರಕ್ಷನಾಥನಿಂದ ದೀಕ್ಷೆಯನ್ನು ಪಡೆದು ಯೋಗಿಯಾಗಿ ವೈರಾಗ್ಯ ಶತಕ ರಚಿಸಿದನು.

**(ಭರ್ತೃಹರಿಯ ಚರಿತ್ರೆಯಲ್ಲಿ ಬಂದ ನೂತನ ಕಥಾಸಂವಿಧಾನವನ್ನು ಯಾರೂ ಯಾವುದೆ ಕಾರಣಕ್ಕಾಗಿ ಲೇಖಕರ ಅನುಮತಿ ಇಲ್ಲದೆ ಉಪಯೋಗಿಸ ಕೂಡದು. ಭಾಷಾಂತರ ಹಾಗು ರೂಪಾಂತರವನ್ನು ಕೂಡ ಅನುಮತಿಯಿಲ್ಲದೆ ಮಾಡಬಾರದು.)**

